# ವಿಷಯಾನುಕ್ರಮಣಿಕೆ

ಹೆಸರು

|| ಶ್ರೀರಾಮಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## ಸಚಿತ್ರ ಮಾಸಪುಸ್ತಕಾವಳಿ

**ಮುನ್ನುಡಿ :—**

ಮಹಾತ್ಮಾ ಗೋಸ್ವಾಮೀ ತುಲಸೀದಾಸಜೀಯವರು ಶ್ರೀರಾಮ ಭಕ್ತಾಗ್ರಗಣ್ಯರು. ಸಾಧುವರ್ಯರು. ಸತ್ಯನಿಷ್ಠರು. ಶ್ರೀರಾಮ ಭಕ್ತಿ ಸಾಮ್ರಾಜ್ಯವನ್ನು ಗಳಿಸುವುದಕ್ಕಾಗಿ ಸುಖಮಯವೆನಿಸಿದ್ದ ಪ್ರಾಪಂಚಿಕ ಜೀವಿತವನ್ನು ತೃಣೀಕರಿಸಿ ಹೊರಹೊರಟ ದೃಢಚಿತ್ತರು. ತಮ್ಮ ಇಷ್ಟ ದೇವನಾದ ಶ್ರೀರಾಮಚಂದ್ರನು ಜಗತ್ಪ್ರಭುವೂ, ಪತಿತಪಾವನನೂ ಎಂಬ ವಿಚಾರದಲ್ಲಿ ಅತಿ ದೃಢಭಾವನೆಯಿಂದ ಪರೀಕ್ಷೆಗೆ ನಿಂತೂ ಜಯಶಾಲಿಗಳಾದ ಅನನ್ಯಭಕ್ತರು ರಾಮಭಕ್ತಿಯೆಂಬ ಕಲ್ಪವೃಕ್ಷದ ಬೀಜಗಳನ್ನು ಅನಂತಾನಂತ ಹೃದಯಕ್ಷೇತ್ರಗಳಲ್ಲಿ ಬಿತ್ತಿದ ಮಹಾಮಹಿಮರು. ಶ್ರೀ ರಾಮಚಂದ್ರಮೂರ್ತಿಯ ಪಾವನಚರಿತ್ರೆಯನ್ನು ಮೃದುಮಧುರ ದೇಶಭಾಷೆಯಲ್ಲಿ ರಚಿಸಿದ ಲೋಕೋದ್ಧಾರಕರು ಆಧುನಿಕ ವಾಲ್ಮೀಕಿಯೋ ಎಂಬಂತಹ ಕೀರ್ತಿಗೆ ಪಾತ್ರರಾದ ಕವಿಕುಲತಿಲಕರು ಲೋಕವನ್ನೇ ಶ್ರೀ ರಾಮರೂಪದಿಂದ ಕಾಣುತ್ತಿದ್ದ ಪ್ರೇಮಸ್ವರೂಪರು. ದಯಾಮಯರು.

ಉತ್ತರ ಭಾರತದಲ್ಲಿ ಹಿಂದೂಸಮಾಜಕ್ಕೆ ಮಹಮ್ಮದೀಯರ ಧಾಳಿಯಿಂದ ಪ್ರಾಪ್ತವಾದ ಕಷ್ಟನಷ್ಟಗಳು ಅಷ್ಟಿಷ್ಟಲ್ಲ ಹಿಂದೂ ಧಾರ್ಮಿಕ ಜೀವಿತಕ್ಕೆ ಒದಗಿದ ಪ್ರಾಣಾಪತ್ತುಗಳು ಒಂದೆರಡಲ್ಲ ಕತ್ತಿಯ ಮೊನೆಯನ್ನು ಮುಂದಕ್ಕೆ ಚಾಚಿ ತನ್ಮೂಲಕ ತಮ್ಮ ಮತಧರ್ಮ ಪ್ರಚಾರಮಾಡುವಿಕೆಯನ್ನೇ ಆದ್ಯಕರ್ತವ್ಯವೆಂದು ಭಾವಿಸಿದ್ದ ಅಂಧಧಾರ್ಮಿಕ ಶ್ರದ್ಧೆಯ ಬಹ-ಮಂದಿ ಮಹಮ್ಮದೀಯ ಪ್ರಭುಗಳು ಮೇಲೆಮೇಲೆ ಒಂದುದರಿಂದ ಅಲ್ಲಿಯ ಹಿಂದೂ ಸಮಾಜದ ಧಾರ್ಮಿಕ ಜೀವನವು ಬಹು ಮಟ್ಟಿಗೆ ಬಳಲಿ ಬೆಂಡಾಯಿತು. ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಪಶ್ಚಿಮೋತ್ತರ ಭಾರತವು ಅನುಭವಿಸಿದಷ್ಟು ಕಷ್ಟನಷ್ಟಗಳನ್ನು ಭಾರತ ದೇಶದ ಮತ್ತಾವ ಪ್ರಾಂತವೂ ಅನುಭವಿಸಲಿಲ್ಲ. ಕಾಬೂಲ್ ಕಂದಹಾರ್ ತುರ್ಕಸ್ಥಾನ ಪ್ರಾಂತಗಳಿಂದ ಧರ್ಮಾಂಧರಾಗಿ ಮೇಲೆ ಬಿದ್ದುಬರುತ್ತಿದ್ದ ವಿಧರ್ಮಿಗಳ ಕತ್ತಿಗಳಿಗೆ ಎದೆಯನ್ನೊಡ್ಡಬೇಕಾದ ವಿಧಿಯು ಎಲ್ಲರಿಗಿಂತ

ಲೂ ಮೊದಲು ಆ ಪ್ರಾಂತದವರ ಪಾಲಿಗೇ ಬಿದ್ದಿತು. ಅಲ್ಲದೆ, ಅಂತಹ ಪೆಟ್ಟುಗಳಿಗೆದೆಯೊಡ್ಡಿ ಬದುಕಿ ಜೀವಿಸುವುದು ಮಾತ್ರವಲ್ಲ: ಒಂದಿಗೇ ತಮ್ಮ ಮತಧರ್ಮ-ಆಚಾರವ್ಯವಹಾರ, ದೇಶಸಂಸ್ಕೃತಿ, ಮಾತೃಭಾಷೆ ಸ್ವದೇಶಸ್ವಜನಾಭಿಮಾನ ಮುಂತಾದುವುಗಳನ್ನೂ ಕಾಪಾಡಿಕೊಳ್ಳಬೇಕಾಗಿದ್ದುದರಿಂದ ಅವರಿಗೆ ಪ್ರಾಪ್ತವಾಗುತ್ತಿದ್ದ ಸಂಕಟಪರಂಪರೆಗಳ ಪ್ರಮಾಣವನ್ನು ವಿಚಾರಜ್ಞರು ಊಹಿಸಬಹುದಾಗಿದೆ.

ಧರ್ಮಕ್ಕೆ ಪ್ರಾಪ್ತವಾದ ಈ ಬಗೆಯ ಆಪತ್ತನ್ನು ನಿವಾರಿಸಿ, ಲೋಕದಲ್ಲಿ ಧರ್ಮವನ್ನು ಸ್ಥಾಪನೆಮಾಡುವಿಕೆಯೇ ಭಗವಂತನ ಕರ್ತವ್ಯವು. ಆ ದೇವದೇವನ ವಾಗ್ದಾನವಾದರೂ ಅದೇ ಆಗಿದೆ.—'ಯಾವ ಕಾಲದಲ್ಲಿ ಧರ್ಮಕ್ಕೆ ಗ್ಲಾನಿಯುಂಟಾಗುತ್ತದೋ' ಮತ್ತು ಅಧರ್ಮವು ಅಭಿವೃದ್ಧಿಯಾಗುತ್ತದ್ದೋ, ಆಗಲೆಲ್ಲಾ ನಾನು ಅವತರಿಸಿ ಧರ್ಮವನ್ನು ರಕ್ಷಿಸುತ್ತೇನೆ,'' ಎಂದು ಶ್ರೀ ಕೃಷ್ಣಭಗವಾನನು ಗೀತಾಶಾಸ್ತ್ರದಲ್ಲಿ ಅಭಯ ಪ್ರದಾನಮಾಡಿಲ್ಲವೆ ? ಈ ವಾಗ್ದಾನವನ್ನು ನಂಬಿಯೇ ಆಸ್ತಿಕಬುದ್ಧಿಯ ಭಾರತೀಯರು, ಭಗವಂತನೇ ಆಪದುದ್ಧಾರಕನು ಭಕ್ತವತ್ಸಲನು ಎಂಬ ವಿಶ್ವಾಸದಿಂದ, ಕಾಲಕರ್ಮ ಪರಿವರ್ತನೆಯಿಂದ ಪ್ರಾಪ್ತವಾಗುವ ಸಮಸ್ತ ಕಷ್ಟಗಳನ್ನೂ ಸಮಾಧಾನದಿಂದ ಅನುಭವಿಸಲು ಹಿಂದೆಗೆಯದಿರುವರು.

ಧರ್ಮಸ್ಥಾಪನೆಗಾಗಿ, ಭಗವಂತನೇ ರೂಪುಗೊಂಡು ಭೂಮಿಯಲ್ಲಿ ಅವತರಿಸುವುದಕ್ಕೆ ತಕ್ಕಷ್ಟು ಪ್ರಮಾಣದಲ್ಲಿ ಧರ್ಮವು ನಷ್ಟವಾಗಿರದಿದ್ದರೆ ಕೆಟ್ಟಿರುವ ಅಲ್ಪಸ್ವಲ್ಪ ಭಾಗಗಳನ್ನು ಸರಿಗೊಳಿಸಿ ಲೌಕಿಕಯಾತ್ರೆಯನ್ನು ಸಾಗಿಸುವುದಕ್ಕಾಗಿ, ಪೂರ್ವಯುಗಗಳಲ್ಲಿ ಲೋಕಸೇವೆಮಾಡಿ ಭಗವಾನನ ಮೆಚ್ಚುಗೆಗೆ ಪಾತ್ರರಾದ ಭಗವದ್ಭಕ್ತರು ಈ ಲೋಕದಲ್ಲಿ ಅವತರಿಸುವುದೂ ಉಂಟು. ಇಂತಹ ಭಗವದ್ಭಕ್ತ ಮಹಾಪುರುಷರ ಜನ್ಮಲಾಭವಾದರೂ ಲೋಕಕ್ಕೆ ಯಾವಾಗಲೂ ದೂರಯುವುದಿಲ್ಲ ಇಂತಹ ಮಹಾತ್ಮರು ಲೋಕದಲ್ಲಿ ಜೀವಿಸಿ ಸಂಚರಿಸುತ್ತಿರುವ ಸುಸಂಧಿಯನ್ನು ಸಾಧಿಸಿಕೊಂಡು ಜನ್ಮಸಾರ್ಥಕ್ಯವನ್ನು ಮಾಡಿಕೊಳ್ಳದಿರುವ ಮಾನವರು ಹತಭಾಗ್ಯರಲ್ಲವೆ ?

ಹಿಂದೂದೇಶದಲ್ಲಿ ಮಹಮ್ಮದೀಯ ಮತಪ್ರಚಾರಕರ ಧಾಂದಲೆಯು ಹತ್ತುಹನ್ನೊಂದನೆಯ ಶತಮಾನಗಳಲ್ಲೇ ಪ್ರಾರಂಭವಾಗಿ ೧೪-೧೫ನೆಯ ಶತಮಾನಗಳ ಕಾಲಕ್ಕೆ ಅತಿಶಯ ಪ್ರಕೋಪಸ್ಥಿತಿಗೆ ಬಂದಿತು. ಹಿಂದೂ ಧರ್ಮದ ನೆಲೆಗಟ್ಟಿನ ಬುಡವೇ ಸಡಲುವ ಸ್ಥಿತಿಯು ಪ್ರಾಪ್ತಿಸಿತೋ ಎಂದು ಅನೇಕರು ಬೆದರಿ ಕಂಗೆಟ್ಟರು. ಹಿಂದೂ ದೇವಾಲಯಗಳೂ ಧರ್ಮ ಸ್ಥಳ

ಗಳೂ ನೆಲಸಮವಾಗಿ ಎಲ್ಲಿ ನೋಡಿದರಲ್ಲಿ ಮುಹಮ್ಮದೀಯರ ಮಸೀದಿಗಳ ಕಟ್ಟಡಗಳೆದ್ದುವು ಉತ್ತರಭಾರತವೆಲ್ಲವೂ ಕ್ರಮಕ್ರಮವಾಗಿ ಮುಹಮ್ಮದೀಯ ಅರಸರ ಆಳ್ವಿಕೆಗೆ ಒಳಪಡಸಾಗಿತು ಭಾರತೀಯರ ಸ್ವಾತಂತ್ರ್ಯ ಸಂಸ್ಕೃತಿ ಅಸ್ತಿತ್ವಗಳ ಮೂಲಕ್ಕೇ ಕೊಡಲಿಯ ಪೆಟ್ಟು ಬೀಳತೊಡಗಿತು. ಧನಮಾನ ಪ್ರಾಣಗಳಿಗೆ ಲುಬ್ಧರಾದ ಕಲವಂದಿ ಅಲ್ಪಜೀವಿಗಳು ಆ ವಿಧರ್ಮಿ ಅರಸರ ಅನ್ನಬಟ್ಟೆಗಳಿಗೆ ಆಶಿಸಿ ಅವರಲ್ಲಿ ಪದವಿ ಗೌರವಗಳನ್ನು ಹೊಂದಲೆಳಸಿ, ಕಾಡಿ ಬೇಡಿ ಹಲ್ಗಿರಿದು, ಅವರ ಧರ್ಮಕ್ಕೂ ಶರಣುಹೋಗಿ ಬದುಕಿಕೊಂಡರು ಆರ್ಷೇಯ ಭಾರತ ಧರ್ಮದಲ್ಲಿ ದೃಢವಿಶ್ವಾಸವುಳ್ಳವರಾಗಿದ್ದ ಇತರರು, ಕೇವಲ ಎರಡು ದಿನದ ಬಾಳ್ವೆಗಾಗಿ ಪರಧರ್ಮಕ್ಕೆ ಶರಣುಹೋಗಲಾಸಿಸದೆ ತಮ್ಮ ಪಿತೃಪಿತಾಮಹರಿಂದ ಅನುಸರಿಸಲ್ಪಟ್ಟಿದ್ದ ಧರ್ಮದಲ್ಲೇ ನಿಂತರು. ಹಾಗೆ ನಿಂತ ಅವರಿಗೆ ಮೇಲೆ ಮೇಲೆ ಒದಗುತ್ತಿದ್ದ ಭಯಂಕರ ಕಷ್ಟಗಳ ಚರಿತ್ರೆಯು ವರ್ಣನಾತೀತವು ಕಾಲಕ್ರಮದಲ್ಲಿ ಅವರಲ್ಲೂ ನೈರಾಶ್ಯವು ಉತ್ಪನ್ನವಾಗತೊಡಗಿತು ಎಲ್ಲೆಲ್ಲೂ ಹಾಹಾಕಾರವೆದ್ದಿತು—"ಅಕ್ಕಟಾ, ಭಗವಂತನೂ ನಮ್ಮನ್ನು ಕೈಬಿಟ್ಟನೇ ?" ಎಂಬ ಉದ್ಗಾರ ಹೊರಟು, ನಿರಾಸೆಯಿಂದ ಪ್ರಾಣಮಾನಗಳಿಗಾಗಿ ಧರ್ಮಚ್ಯುತರಾಗುವಂತಹ ಉತ್ಕ್ರಮಣಸ್ಥಿತಿಯು ಪ್ರಾಪ್ತವಾಗುವ ಸಮಯಕ್ಕೆ ಸರಿಯಾಗಿ, ಆಪದ್ಬಾಂಧವನಾದ ಶ್ರೀಮನ್ನಾರಾಯಣಮೂರ್ತಿಯ ಕೃಪೆಯಿಂದಲೋ ಎಂಬಂತೆ, ಒಬ್ಬೊಬ್ಬರಾಗಿ ಭಗವದ್ಭಕ್ತರು ಉದಯಿಸ ತೊಡಗಿದರು ಮೀರಾಬಾಯಿ ಕಬೀರನಾನಕರೂ, ಸೂರದಾಸ್ ರಾಮಾನಂದ ವಲ್ಲಭಾಚಾರ್ಯರೂ, ಚಂಡಿದಾಸ್ ಚೈತನ್ಯದೇವ-ಗೋಸ್ವಾಮಿ ತುಲಸೀದಾಸರೂ ಜನ್ಮವೆತ್ತಿದರು ಈ ಮಹಾಮಹಿಮರು ಮಾಡಿದ ಭಗವಂತನ ಗುಣಗಾನವು ಅಮೃತಸ್ವರೂಪವಾಗಿ ವರ್ಷಿಸಿ, ಒಣಗಿ ಬಸವಳಿದು ಹೋಗಿದ್ದ ಮಾನವರ ಹೃದಯಕ್ಷೇತ್ರಗಳಲ್ಲಿ ತಂಪನ್ನು ಹುಟ್ಟಿಸಿತು. ಹಾಗೆ ತಂಪು ಬಿದ್ದ ಕ್ಷೇತ್ರಗಳಲ್ಲಿ, ಅವರು ನಟ್ಟ ವಿಷ್ಣುಭಕ್ತಿಬೀಜವು ಮೊಳಕೆಯಾಗಿ ದಿನದಿನಕ್ಕೆ ಅರ್ಚನೆ ಪೂಜೆ ವಂದನೆ ಆರಾಧನೆಗಳೆಂಬ ಗೊಬ್ಬರಗೋಡುಗಳಿಂದಲೂ, ಭಜನೆ ನಾಮಸಂಕೀರ್ತನೆಗಳೆಂಬ ನಿರ್ಮಲ ಜಲಸೇಚನೆಯಿಂದಲೂ ಬೆಳೆದು ಕಳಕಳಿಸತೊಡಗಿತು ಈ ಮಹಾಮಹಿಮರಿಂದ ನಟ್ಟು ಪೋಷಿಸಲ್ಪಟ್ಟ ಈ ಭಕ್ತಿಕಲ್ಪವೃಕ್ಷದ ನೆಳಲಿನಲ್ಲಿ ಅನಂತಾನಂತ ಜೀವಿಗಳು ಬದುಕಿ ಬೆಳೆದರು. ಅದರ ಅಮೃತಫಲಗಳನ್ನು ಸವಿದು ಅನಂತಾನಂತ ಜೀವಿಗಳು ತಣಿದರು ಆ ಬಲದಿಂದ ಉತ್ತೇಜಿತರಾಗಿ ಅನಂತಾನಂತ ಜೀವಿಗಳು ಮೋಕ್ಷಸಾಮ್ರಾಜ್ಯವನ್ನು ಸೂರೆಗೊಂಡರು.

ಹೀಗೆ ೧೫-೧೬ ಮತ್ತು ೧೭ನೆಯ ಶತಮಾನಗಳಲ್ಲಿ ಲೋಕೋದ್ಧಾರಕ್ಕಾಗಿ ಜನ್ಮವೆತ್ತಿದ ಮಹಾಮಹಿಮರಲ್ಲಿ ನಮ್ಮ ಕಥಾನಾಯಕರಿಂದ ಆದಷ್ಟು ಲೋಕಸೇವಾ ಕಾರ್ಯವು ಮತ್ತಾರಿಂದಲೂ ಆಗಲಿಲ್ಲವೆನ್ನಬಹುದು. ಜೀವಿತಕಾಲದಲ್ಲಿ, ಅವರ ಭೌತಿಕ ದೇಹದಿಂದ ಆದ ಸೇವೆಯ ಸಹಸ್ರ ಮಡಿಸೇವೆಯು ಅವರು ರಚಿಸಿದ ಗ್ರಂಥಗಳ ಮೂಲಕ ನಿತ್ಯವೂ ಆಗುತ್ತದೆ. "ಶ್ರೀರಾಮಚರಿತಮಾನಸ" ಗ್ರಂಥರತ್ನವು ಕಳೆದ ಮೂರುವರೆ ಶತಮಾನಗಳಿಂದಲೂ, ಉತ್ತರಭಾರತ ದೇಶದ ಎಂಟು ಕೋಟಿ ಜನರ ನಿತ್ಯಪಾರಾಯಣದ ಗ್ರಂಥವಾಗಿದೆ ಅವರ ನಿತ್ಯಜೀವಿತವನ್ನು ರೂಪಿಸುತ್ತಾ ಜನನಮರಣ ಜೀವಿತಗಳನ್ನು ನಡೆಯಿಸುವಲ್ಲಿ ಅದ್ವಿತೀಯ ಸಾಧನವೆನ್ನಿಸಿದೆ ಒಂದು ಕಲಾಂತರಕ್ಕೆ ಎಂಟುಕೋಟಿಯಂತೆ, ಮುನ್ನೂರ ಐವತ್ತು ವರ್ಷಗಳಿಂದ ಎಷ್ಟು ಕೋಟಿ ಮಂದಿಯ ಹೃದಯಕ್ಷೇತ್ರಗಳು ಶ್ರೀರಾಮನಾಮಾಮೃತದಿಂದ ತಣಿದು ಅವರ ಜನ್ಮಗಳನ್ನು ಪಾವನಗೊಳಿಸಿರುವುವೋ, ಮುಂದೆ ಎಷ್ಟುಕೋಟಿ ಅಂತಹ ಕ್ಷೇತ್ರಗಳು ಧನ್ಯತೆಯನ್ನು ಹೊಂದಲಿರುವುವೋ ಭಾವಿಸಿ ನಮ್ಮ ಕಥಾನಾಯಕರಿಂದ ಜಗತ್ತಿಗಾದ ಅಮೋಘ ಉಪಕಾರವನ್ನು ಎಣಿಸಬಹುದಾಗಿದೆ. ಉತ್ತರ ಭಾರತದಲ್ಲಿ ಈ ತುಲಸೀದಾಸ ರಾಮಾಯಣವನ್ನು ವೇದಕ್ಕೆ ಸರಿಸಮಾನವಾದ ಪೂಜ್ಯಭಾವದಿಂದ ಕಾಣುತ್ತಾರೆ. ಲೋಕದಲ್ಲಿ ಅತ್ಯಧಿಕ ಸಂಖ್ಯೆಯಿಂದ ಪ್ರಚಾರದಲ್ಲಿರುವ ಧರ್ಮಗ್ರಂಥಗಳಲ್ಲಿ ಈ ಹಿಂದೀ ರಾಮಾಯಣವೂ ಒಂದಾಗಿದೆ. ಇಂತಹ ಗ್ರಂಥರತ್ನವನ್ನು ಮನುಷ್ಯಲೋಕಕ್ಕೆ ದಾನಮಾಡಿ ಅಕ್ಷಯಕೀರ್ತಿ ಶರೀರವನ್ನು ಗಳಿಸಿ ಮೆರೆಯುತ್ತಿರುವ ಮಹಾತ್ಮಾ ಗೋಸ್ವಾಮಿ ತುಲಸೀದಾಸರವರ ಈ ಚರಿತ್ರೆಯೂ ಕರ್ಣಾಟಕ ದೇಶದ ಬಾಲಕಬಾಲಿಕೆಯರಿಂದಲೂ - ಯುವತೀಯುವಕರಿಂದಲೂ - ಸ್ತ್ರೀ ಪುರುಷ ಮಹಾಜನಗಳಿಂದಲೂ ಸ್ವೀಕೃತವಾಗಲಿ. ಈ ಚಿಕ್ಕ ಪುಸ್ತಕದ ಮೂಲಕ ಆ ಮಹಾಮಹಿಮರ ದಿವ್ಯ ಗ್ರಂಥಗಳ ಕಡೆಗೂ, ಅವು ಲಿಖಿಸಲ್ಪಟ್ಟಿರುವ ಭಾರತದೇಶದ ರಾಷ್ಟ್ರಭಾಷೆಯಾದ ಹಿಂದೀಭಾಷೆಯ ಕಡೆಗೂ ಕನ್ನಡಿಗರ ದೃಷ್ಟಿಯು ಎಷ್ಟು ಸ್ವಲ್ಪ ಪ್ರಮಾಣದಿಂದ ಆಕರ್ಷಿಸಲ್ಪಟ್ಟರೂ, ಅದೇ ನಮ್ಮ ಶ್ರಮಕ್ಕೆ ಯೋಗ್ಯಪ್ರತಿಫಲವೆಂದು ಭಾವಿಸುತ್ತೇವೆ.

ಬೆಂಗಳೂರು ನಗರ,
ತಾ|| ೨೦-೮-೧೯೨೭.

ಇತಿ ಸುಜನ ವಿಧೇಯ,
**ಯಂ. ರಾಮರಾವ್.**



‘ಶ್ರೀರಾಮಚರಿತಮಾನಸ’ ಕರ್ತರಾದ

ಮಹಾತ್ಮಾ ಶ್ರೀ ಗೋಸ್ವಾಮಿ ತುಲಸೀದಾಸರು

|| ಶ್ರೀ ರಾಮಸಹಾಯಂ ||

" ಶ್ರೀರಾಮಚರಿತಮಾನಸ " ಕರ್ತರಾದ

## ಮಹಾತ್ಮಾ

# ಶ್ರೀ ಗೋಸ್ವಾಮಿ ತುಲಸೀದಾಸರು

## ಅಧ್ಯಾಯ ೧. " ಸತ್ಸಂತಾನ "

ಪುಣ್ಯಮಯಿಯೂ-ನಮ್ಮ ಮಾತೃಭೂಮಿಯೂ ಆದ ಈ ಭಾರತ ದೇಶದಲ್ಲಿ ಕಾಲಕಾಲಕ್ಕೆ ಅನೇಕಮಂದಿ ಮಹಾಮಹಿಮರು ಜನ್ಮವೆತ್ತಿ ಮಾನವವರ್ಗದ ಅಜ್ಞಾನಾಂಧಕಾರವನ್ನು ಪರಿಹರಿಸಿ ದೇಶೋದ್ಧಾರ ವನ್ನುಂಟುಮಾಡುತ್ತಿರುವರು ಅವರಲ್ಲಿ ಕೆಲವರು ಕವಿಶ್ರೇಷ್ಠರು, ಕೆಲ ವರು ದೇಶಭಕ್ತರು, ಕೆಲವರು ಮಹದೈಶ್ವರ್ಯಸಂಪನ್ನರು, ಕೆಲವರು ಲಲಿತ ಕಲಾಕುಶಲರು, ಕೆಲವರು ದಯಾಮಯರು, ಮತ್ತೆ ಕೆಲವರು ತ್ಯಾಗಿಗಳು, ನಿಷ್ಠರು, ಸತ್ಯಸಂಧರು, ಬೇರೆ ಕೆಲವರು ಜ್ಞಾನಿಗಳು, ಭಗವದ್ಭಕ್ತರು ಈ ಎಲ್ಲರಿಂದಲೂ ಪ್ರಪಂಚಕ್ಕೆ ಕೆಲಸವುಂಟು. ಪ್ರಪಂಚೋದ್ಧಾರಕ್ಕೆ ಜ್ಞಾನಿಗಳೂ ಭಕ್ತರೂ, ಕವಿಗಳೂ ಎಷ್ಟುಮಟ್ಟಿಗೆ ಆವಶ್ಯಕರೋ-ಅಷ್ಟೇ ಪ್ರಮಾಣದಿಂದ ವ್ಯಾಪಾರಿಯೂ ವ್ಯವಸಾಯಗಾರನೂ, ಕಲಾಕುಶಲನೂ ಕೈಕೆಲಸಗಾರನೂ ಆವಶ್ಯಕವಾಗಿದ್ದಾರೆ. ವಿವಿಧಮುಖವಾಗಿರುವ ಪ್ರಾಪಂ ಚಿಕಾಭಿವೃದ್ಧಿ ಕಾರ್ಯದಲ್ಲಿ ಸಕಲ ವರ್ಣದ ಸಕಲ ವೃತ್ತಿಯ ಸಕಲ ಅಂತಸ್ತಿ ನವರಿಗೂ ಸ್ಥಾನವುಂಟು. ಆದರೆ ಅಂತಹ ಅನೇಕಾನೇಕ ವರ್ಣ-ವೃತ್ತಿ- ಧರ್ಮಗಳಲ್ಲಿ ಸಾತ್ವಿಕ ರಾಜಸ ತಾಮಸಾದಿಗುಣಗಳನ್ನನುಸರಿಸಿ ಉತ್ತಮ ಮಧ್ಯಮಾಧಮತರಗತಿಗಳನ್ನು ಏರ್ಪಡಿಸಬಹುದು.

ಇಂತಹ ಪ್ರಪಂಚೋದ್ಧಾರಕರಲ್ಲಿ ಮತಸ್ಥಾಪಕರು ಜ್ಞಾನಿಗಳು ಭಗವದ್ಭಕ್ತರು, ಭಗವದ್ಗುಣವರ್ಣನೆಮಾಡುವ ಕವಿಶ್ರೇಷ್ಠರು ದೀನಾ ನಾಥರ ಮೇಲ್ಮೆಗಾಗಿಯೂ ಪ್ರಾಣಿಕೋಟಿಯ ಕ್ಷೇಮಕ್ಕಾಗಿಯೂ ಸ್ವಾರ್ಥ ತ್ಯಾಗಮಾಡುವ ಧರ್ಮಾತ್ಮರು ಮುಂತಾದ ಮಹಾಪುರುಷರು ಉತ್ತಮ

ವರ್ಗಕ್ಕೆ ಸೇರುವರು. ಏಕೆಂದರೆ ಕೈಕೆಲಸ ವ್ಯಾಪಾರ ವ್ಯವಸಾಯ ಸೇವಾಕಾರ್ಯ ಮುಂತಾದ ವೃತ್ತಿಗಳನ್ನು ಅವಲಂಬಿಸುವವರಿಂದ ಪ್ರಪಂಚಕ್ಕಾಗುವ ಮೇಲ್ಮೆಗಿಂತಲೂ ಈ ಮೇಲ್ಕಂಡವರಿಂದ ಲೋಕಕ್ಕೆ ಆಗುವ ಪ್ರಯೋಜನವು ಅಧಿಕವಾದುದು-ಶಾಶ್ವತವಾದುದು-ಸಾರ್ಥಕವಾದುದು. ಮೇಲೆ ಹೇಳಿದ ವೃತ್ತಿಗಳನ್ನವಲಂಬಿಸುವವರಿಂದ ಒಂದು ಪ್ರಾಂತದವರಿಗೆ ಪ್ರಯೋಜನವಾದರೆ ಮತ್ತೊಂದು ಪ್ರಾಂತದವರಿಗೆ ನಷ್ಟವಾಗಬಹುದು ಒಂದು ದೇಶದವರಿಗೆ ಸುಖವಾದರೆ ಮತ್ತೊಂದು ದೇಶದವರಿಗೆ ಕಷ್ಟವಾಗಬಹುದು ಆದರೆ ಈ ಮಹನೀಯರು ಮಾಡುವ ಕೆಲಸದಿಂದ ಹಾಗಲ್ಲ-ಅವರ ಕಾರ್ಯಗಳು ಎಷ್ಟೆಷ್ಟುಮಟ್ಟಿಗೆ ವ್ಯಾಪಿಸುವುವೋ, ಅಷ್ಟಷ್ಟು ಮಟ್ಟಿಗೆ ಲೋಕದಲ್ಲಿ ಸುಖಶಾಂತಿ ಸಮಾಧಾನಗಳು ನೆಲೆಗೊಂಡು, ಮಾನವವರ್ಗ ಮಾತ್ರವಲ್ಲ-ಆದ್ಯಂತ ಪ್ರಾಣಿವರ್ಗವೇ ಸುಖಸಂತೋಷಗಳಿಂದಲೂ ನಿರ್ಭೀತಿಯಿಂದಲೂ ಜೀವಿಸಬಹುದು. ಆದುದರಿಂದಲೇ ಲೋಕೋದ್ಧಾರಕ್ಕಾಗಿ ಅವತರಿಸಿದ ದೇವದೂತರೋ ಎಂಬಂತೆ ಆ ಉತ್ತಮಚೇತನರಿಗೆ ಜೀವಿಸಿರುವಾಗಲೂ-ಅನಂತರವೂ ಸರ್ವತ್ರ ಗೌರವಾದರಗಳು ನಡೆಯುವುವು

ಅಂತಹ ಉತ್ತಮ ಚೇತನರಲ್ಲೂ ಸಾಮಾನ್ಯವಾದ ಎರಡು ವರ್ಗಗಳು ಕಂಡು ಬರುವುವು ಒಂದು ಬಗೆಯವರು, ಜನಸಾಮಾನ್ಯಕ್ಕಿಂತ ತಾವು ಎಷ್ಟೋ ಪ್ರಮಾಣದಿಂದ ಉತ್ತಮ ಸ್ಥಿತಿಯಲ್ಲಿದ್ದರೂ ಮಾನವ ಜೀವಿತದ ಅಪೂರ್ಣತ್ವವನ್ನು ಗಮನಿಸಿಕೊಂಡು, ತಾವೇ ಪೂರ್ಣರಾಗದೆ ಲೋಕವನ್ನು ಹೇಗೆ ಉದ್ಧರಿಸಲಾದೀತೆಂದು ನಿಯಮ ನಿಷ್ಠೆ, ವ್ರತೋಪವಾಸಾದಿಗಳು ಮುಂತಾದುವುಗಳಿಂದ ದೇಹವನ್ನು ದಂಡಿಸಿಕೊಳ್ಳುತ್ತಾ, ತಮ್ಮ ಆ ಒಂದುದೇಹದಿಂದ ಪ್ರಪಂಚಕ್ಕೆ ಯಾವಬಾಧೆಯೂ ತಟ್ಟದಂತೆ ಬಹು ಜಾಗರೂಕರಾಗಿರುತ್ತಾ-ಅದೇಕಾಲದಲ್ಲಿ ತಮ್ಮ ಚೇತನವೊಂದು ಜನನ ಮರಣದ ಕೋಟಲೆಯನ್ನು ತಪ್ಪಿಸಿಕೊಂಡು ಹೋದರೆ ಸಾಕೆಂದು ಮಾತ್ರ ಯೋಚಿಸಿ ಕೇವಲ ಊರ್ಧ್ವದೃಷ್ಟಿಯುಳ್ಳವರಂತೆ ಇರುವರು ಇವರಿಗೆ ಪ್ರಪಂಚದ ಮೇಲು ಕೀಳುಗಳ ವಿಷಯದಲ್ಲಾಗಲೀ ಇತರರ ಕಷ್ಟಕಾರ್ಪಣ್ಯಗಳ ವಿಷಯದಲ್ಲಾಗಲೀ ಚಿಂತೆಯಿಲ್ಲ. ಇದು ಪಾಪಮಯ ಪ್ರಪಂಚವೆಂದೂ, ಇದನ್ನು ಬಿಟ್ಟು ತೊಲಗಿ ಹೋಗತಕ್ಕುದೇ ಉತ್ತಮವೆಂದೂ ಇವರ ಹೇಳಿಕೆ ಇರುವುದೂ ಉಂಟು ಆದರೆ ಇಂತಹ ವ್ಯಕ್ತಿಗಳಿಂದ ಪ್ರಪಂಚಕ್ಕೆ ಯಾವ ಮೇಲುಂಟಾಗಬಲ್ಲುದೆಂದರೆ ಇವರು (ವೇಷ

ಧಾರಣೆಯ ವೇದಾಂತಿಗಳು ಮಾತ್ರವಲ್ಲದಿದ್ದರೆ) ಪ್ರಾಪಂಚಿಕ ಜೀವಿತ ವಿಷಯದಲ್ಲಿ ಜಿಹಾಸೆಪಟ್ಟಿದ್ದರೂ, ತಮ್ಮ ವ್ಯಕ್ತಿಜೀವನ, ನಯನಡತೆ ಮಾತುಕಥೆಗಳಲ್ಲಿ ನೀತಿಮಾರ್ಗಕ್ಕೆ ವಿರೋಧವಿಲ್ಲದಂತೆ ನಡೆದು ಲೋಕಕ್ಕೆ ಮಾರ್ಗದರ್ಶಕರಾಗುವರು ದೀವಟಿಗೆಯು ಯಾರ ಗೊಡವೆಯನ್ನೂ ಹಚ್ಚಿಕೊಳ್ಳದೆ ತನ್ನ ಮಟ್ಟಿಗೆ ತಾನು ಉರಿಯುತ್ತಿದ್ದರೂ, ಅದರಿಂದುಂಟಾಗುವ ಪ್ರಕಾಶವು ಇತರರಿಗೆ ಮಾರ್ಗದರ್ಶಕವಾಗುವಂತೆ ಇವರು ತಮ್ಮ ನಡೆವಳಿಕೆ ಬೋಧನೆ ಮುಂತಾದುವುಗಳಿಂದ ಪರರಿಗೆ ಮೇಲುಂಟಾಗಬೇಕೆಂದು ಅಪೇಕ್ಷಿಸಿ ಅದಕ್ಕಾಗಿ ಪ್ರಯತ್ನಿಸದಿದ್ದರೂ ಪರರಿಗೇನೋ ಅವರ ಈ ನಡೆವಳಿಕೆಯಿಂದ ಸ್ವಲ್ಪಮಾತ್ರವಾದರೂ ಪ್ರಯೋಜನವಾಗಿಯೇ ಆಗುವುದು. ಆದರೆ ಮತ್ತೊಂದುವರ್ಗದವರು ಹೀಗಲ್ಲ ಅವರು ತಮ್ಮ ವ್ಯಕ್ತಿಪರ ಪೂರ್ಣತೆ ಅಪೂರ್ಣತೆಗಳನ್ನು ಕುರಿತು ಗಮನಿಸುವುದೇ ಇಲ್ಲ ಅವರ ದೃಷ್ಟಿಗೆ, ಒಂದು ಕಡೆ ಪಾಪ ದುಃಖ ಸಂಕಟ ದಾರಿದ್ರ್ಯಾದಿಗಳಿಗೆ ಒಳಪಟ್ಟು ತೊಳಲಿ ಒಳಲುತ್ತಿರುವ ಪ್ರಪಂಚವೂ, ಮತ್ತೊಂದು ಕಡೆ ಅವುಗಳನ್ನೆಲ್ಲಾ ನಿವಾರಣೆಮಾಡಿ, ಲೋಕವನ್ನು ಸುಖ ಶಾಂತಿ ಸಮಾಧಾನಗಳಿಂದ ರಕ್ಷಿಸಲು ಶಕ್ತನಾದ ಏಕಮಾತ್ರಪ್ರಭು ಪರಮಾತ್ಮನೂ ಕಾಣುತ್ತಿರುವರು. ಅವರು ಪ್ರಪಂಚದ ದುಃಖಸಂಕಟಗಳನ್ನು ಕಂಡು ಎದೆಕರಗಿ ಕರಳು ಮರುಗಿ-ಅವುಗಳನ್ನು ನೀಗಿಸಿ ಲೋಕವನ್ನು ದಯೆಗೈದು ರಕ್ಷಿಸೆಂದು ಆ ದಯಾಮಯನನ್ನು ಅಂಜಲಿಬದ್ಧರಾಗಿ ಬೇಡಿಕೊಳ್ಳುತ್ತಿರುವರು. ಅವರಿಗೆ ತಮ್ಮದೊಂದು ಜೀವನದ ಉದ್ಧಾರಕವಿಷಯವು ಗಮನಕ್ಕೇ ಬಾರದು, ಅಜ್ಞಾನಾಂಧಕಾರದಲ್ಲಿ ಬಿದ್ದು ಒದೆದಾಡುತ್ತಿರುವ ಇತರ ತಮ್ಮ ಸಹಜೀವಿಗಳನ್ನೂ ಗಮನಿಸಿ ಅವರೊಂದಿಗೆ ತಾವೂ ಹೋಗೋಣವೆಂಬ ಸುಹೃದ್ಭಾವದಿಂದ ಭಗವದ್‌ಜ್ಞಾನವೆಂಬ ದಿವ್ಯಜ್ಯೋತಿಯನ್ನು ಪ್ರಯತ್ನಪೂರ್ವಕ ಕೈಯಲ್ಲಿಹಿಡಿದುಕೊಂಡು ಅದರ ಬೆಳಕಿನಲ್ಲಿ ಬರುವವರನ್ನೆಲ್ಲಾ ತಮ್ಮೊಂದಿಗೆ ಕರೆದೊಯ್ಯುವಂತಿರುವರು.

ಈ ಎರಡು ಬಗೆಯವರಿಂದಲೂ ಪ್ರಪಂಚಕ್ಕೆ ಸ್ವಲ್ಪ ಹೆಚ್ಚುಕಡಿಮೆ ಒಂದೇಬಗೆಯ ಪ್ರಯೋಜನವಾದರೂ ಒಬ್ಬರಿಗೆ ತಮ್ಮ ಗತಿಯೊಂದು ಉತ್ತಮವಾದರೆ ಸಾಕೆಂಬ ಅತ್ಯಂತ ಸೂಕ್ಷ್ಮವಾದ ಸ್ವಾರ್ಥತೆಯೂ, ಮತ್ತೊಬ್ಬರಿಗೆ ತಮ್ಮೊಂದಿಗೆ ತಮ್ಮ ಸಹಜೀವಿಗಳೂ ಸುಖಾನುಭವ ಮಾಡಲೆಂಬ

ಉದಾರಭಾವ–ನಿಸ್ವಾರ್ಥತೆಗಳೂ ಕಂಡುಬರುವುವು. ಆದರೆ ಈ ಬಗೆಯ ಸ್ವಾರ್ಥತೆಯೂ ಸುವರ್ಣ ಶೃಂಖಲೆಯಾಗಿ ಬಾಧಿಸಲಾರದಲ್ಲವೆ ?

ಸ್ವಾರ್ಥತೆಯೆಂಬುದೊಂದು ಬಹು ಸೂಕ್ಷ್ಮ ಪ್ರಕೃತಿಯ ಶತ್ರುವು, ಸ್ವಾರ್ಥಿಯಾಗಲಿ–ನಿಸ್ವಾರ್ಥಿಯಾಗಲಿ ಮಾಡುವ ಯಾವಬಗೆಯ ವೃತ್ತಿಯಿಂದಲೂ ಪ್ರಪಂಚಕ್ಕೇನೋ ಆಗಬೇಕಾದ ಪ್ರಯೋಜನವು ಆಗಿಹೋಗುವುದು, ಆದರೆ "ನಾನು ನನ್ನದು" ಎಂಬ ಅಭಿಮಾನವಶನಾಗಿ ಮಾಡುವ ಸ್ವಾರ್ಥಿಯು ಬಂಧಕಕ್ಕೆ ತಗುಲಿಕೊಂಡು ವ್ಯಥೆಪಡುವನು. 'ನೀನು ನಿನ್ನದು, ಎಂದು ಸಕಲವನ್ನೂ ಭಗವಂತನ ಪಾಲಿಗೆ ಒಪ್ಪಿಸಿ ಪ್ರಪಂಚದೃಷ್ಟಿಗೆ ಸ್ವಾರ್ಥಿಯಂತೆಯೇ ಎಲ್ಲಾ ಕೆಲಸಗಳನ್ನೂ ಮಾಡುತ್ತಿದ್ದರೂ ಆತನು ಯಾವ ಬಂಧನಕ್ಕೂ ತಗುಲದೆ ನಿಶ್ಚಿಂತನಾಗಿರುವನು.

ನಮ್ಮ ಕಥಾನಾಯಕರಾದ ಶ್ರೀ ಗೋಸ್ವಾಮಿ ತುಲಸೀದಾಸರು ತಮ್ಮ ಇಷ್ಟ ದೈವವಾದ ಶ್ರೀ ರಾಮಚಂದ್ರನ ಸೇವೆಯೆಂಬ ಸದ್ಭಾವನೆಯಿಂದ ಶ್ರೀರಾಮಚರಿತಮಾನಸಾದಿ ಗ್ರಂಥರತ್ನಗಳನ್ನು ರಚಿಸಿದುದರಿಂದಲೇ ಅವರ ಕೀರ್ತಿಪ್ರಭೆಯು ಪ್ರಪಂಚದಲ್ಲಿ ಅಖಂಡವಾಗಿ ಬೆಳಗುತ್ತಿರುವುದು ಮಾತ್ರವಲ್ಲದೆ, ಅವರ ಗ್ರಂಥಗಳೂ ಕೋಟ್ಯಾಂತರ ಮಾನವ ಪ್ರಾಣಿಗಳ ಉದ್ಧಾರಕ್ಕೆ ಆಧಾರಭೂತಗಳಾಗಿವೆ ಅಂತಹ ಮಹೋಪಕಾರಿಗಳಾದ ಆ ಪುಣ್ಯ ಪುರುಷರ ಚರಿತ್ರೆಯು ಅಮೋಘವಾದುದು ಬೋಧಕವಾದುದು ಇನ್ನು ಅದನ್ನು ಪರಿಸೋಣ.

ಉತ್ತರ ಭಾರತದಲ್ಲಿ ಸರಯೂ ನದಿಗೆ ಉತ್ತರ ಭಾಗದಲ್ಲಿರುವ ಸರವಾರದೇಶದಲ್ಲಿ ಮಧೌಲಿಗೆ ಮೂವತ್ತು ಕ್ರೋಶಗಳ ಆಚೆ ಕಸಯಾ ಎಂಬೊಂದು ಗ್ರಾಮದಲ್ಲಿ ನಮ್ಮ ಕಥಾನಾಯಕರ ಪ್ರಪಿತಾಮಹನಾದ ಪರಶುರಾಮ ಮಿಶ್ರನೆಂಬಾತನು ವಾಶಿಸುತ್ತಿದ್ದನು ಮಹಾ ಸಾಧು ಶೀಲನಾದ ಆ ಬ್ರಾಹ್ಮಣೋತ್ತಮನು ಒಂದಾನೊಂದು ಸಾರಿ, ತೀರ್ಥಯಾತ್ರೆಗೆ ಹೊರಟು ಅಲ್ಲಲ್ಲಿ ಭ್ರಮಣಮಾಡುತ್ತಾ ಚಿತ್ರಕೂಟ ಮಹಾಕ್ಷೇತ್ರವನ್ನು ಸೇರಿ ಅಲ್ಲಿ ಒಂದೆಡೆಯಲ್ಲಿ ತಂಗಿದ್ದನು. ಒಂದುದಿನ ರಾತ್ರೆ ನಿದ್ರೆಮಾಡುತ್ತಿದ್ದ ಆತನಿಗೆ ಒಂದು ಸ್ವಪ್ನವಾಯಿತು. ಅದರಲ್ಲಿ ಶ್ರೀ ರಾಮಭಕ್ತ ಆಂಜನೇಯನು ಪ್ರತ್ಯಕ್ಷವಾಗಿ,–'ನೀನು ರಾಜಾಪುರದಲ್ಲ ವಾಸವಾಗಿರು. ನಿನ್ನ ನಾಲ್ಕನೆಯ ಪೀಳಿಗೆಯಲ್ಲಿ ಒಬ್ಬಾನೊಬ್ಬ ಮಹಾನ್ ತಪೋನಿಧಿಯು ಅವತಾರ ಮಾಡುವನು.' ಎಂದು ಹೇಳಿದಂತಾಯಿತು. ಆ ಆಜ್ಞೆಯನ್ನು

ಕೇಳಿ ಪರುಶರಾಮಮಿಶ್ರನು ಒಡನೆ ಅಲ್ಲಿಂದ ಹೊರಟು, ಸೀತಾಪುರಕ್ಕೆ ಬಂದು ಅಲ್ಲಿಯ ರಾಜನನ್ನು ಕಂಡು, ಹನುಮಾನನ ಆಜ್ಞೆಯನ್ನೂ ತಾನು ರಾಜಾಪುರದಲ್ಲಿ ವಾಸಮಾಡಬೇಕಾಗಿದೆಯೆಂಬ ತನ್ನ ಅಪೇಕ್ಷೆಯನ್ನೂ ಪ್ರಕಟಮಾಡಿದನು. ಅದನ್ನು ಕೇಳಿದ ಆ ರಾಜನು ಆ ಬ್ರಾಹ್ಮಣೋತ್ತಮನ ತೇಜಸ್ವಿತೆ, ವಿದ್ವತ್ತು ಮುಂತಾದವುಗಳ ಪ್ರತಿಭೆಯನ್ನು ಕಂಡು ಪರಮ ಸಂತುಷ್ಟನಾಗಿ, ಆತನು ರಾಜಾಪುರದಲ್ಲಿ ವಾಸಿಸಲು ಬೇಕಾದ ಅನುಕೂಲತೆಗಳನ್ನೆಲ್ಲ ಒದಗಿಸಿಕೊಟ್ಟನು. ಅಲ್ಲಿ ಅತ್ಯಂತ ಸಾಧುಜೀವನದಿಂದ ಕಾಲಯಾಪನೆ ಮಾಡುತ್ತಿದ್ದ ಆತನಿಗೆ ಅರುವತ್ತೈದು ವರ್ಷಗಳ ವಯಸ್ಸಾದರೂ ಮಕ್ಕಳಿಲ್ಲದೆ, ಕೊನೆಗೆ ಹನುಮಾನನ ಪರಮಾನುಗ್ರಹದಿಂದ ಒಂದು ಪುತ್ರಸಂತಾನವಾಯಿತು. ಆ ಮಗುವಿಗೆ ಶಂಕರಮಿಶ್ರನೆಂದು ನಾಮಕರಣ ಮಾಡಿದರು. ಪುತ್ರ ಜನನವಾದ ತರುವಾಯ, ಆ ವೃದ್ಧ ಬ್ರಾಹ್ಮಣನು ಕೆಲಕಾಲ ರಾಜಾಪುರದಲ್ಲಿ ವಾಸಿಸಿದ್ದು, ಮೃತ್ಯು ಸನ್ನಿಹಿತವೇಳೆಯನ್ನು ತಿಳಿದು, ಕಾಶೀಕ್ಷೇತ್ರವನ್ನು ಸೇರಿ ಅಲ್ಲಿ ದೇಹತ್ಯಾಗಮಾಡಿದನು.

ತರುವಾಯ ಶಂಕರಮಿಶ್ರನು ವಿದ್ಯಾಬುದ್ಧಿಗಳನ್ನು ಕಲಿತು ಪ್ರಬುದ್ಧನಾಗಿ ರಾಜಾಪುರದಲ್ಲಿ ಸಕಲರಿಂದಲೂ ಸನ್ಮಾನಿತನಾಗಿ ವಾಸಿಸಿದನು. ಈತನಿಗೆ ಶಾಸ್ತ್ರಜ್ಞಾನ-ಪಾಂಡಿತ್ಯಗಳೊಂದಿಗೆ ವಾಕ್ಸಿದ್ಧಿಯೂ ಲಭಿಸಿತು. ರಾಜರಾಣಿಯರು ಆತನ ಶಿಷ್ಯತ್ವವನ್ನು ಸ್ವೀಕರಿಸಿ, ವಿಶೇಷ ಭೂದಾನಾದಿಗಳನ್ನಿತ್ತು ಗೌರವಿಸಿದರು. ಆತನು ಎರಡು ವಿವಾಹಗಳನ್ನು ಮಾಡಿಕೊಂಡನು. ಮೊದಲನೆಯ ಭಾರ್ಯೆಯಲ್ಲಿ ಆರುಮಂದಿ ಗಂಡುಮಕ್ಕಳೂ, ಇಬ್ಬರು ಹೆಣ್ಣುಮಕ್ಕಳೂ ಜನಿಸಿದರು. ಎರಡನೆಯ ಪತ್ನಿಯಲ್ಲಿ ಸಂತಮಿಶ್ರ-ರುದ್ರನಾಥಮಿಶ್ರರೆಂಬ ಇಬ್ಬರು ಪುತ್ರರು ಜನಿಸಿದರು. ರುದ್ರನಾಥಮಿಶ್ರನಿಗೆ ನಾಲ್ಕುಮಂದಿ ಮಕ್ಕಳಾದರು. ಅವರಲ್ಲಿ ಹಿರಿಯವನು ಮುರಾರಿಮಿಶ್ರನೆಂಬಾತನು. ಈತನೇ ನಮ್ಮ ಕಥಾನಾಯಕನನ್ನು ಪಡೆದ ಭಾಗ್ಯಶಾಲಿಯು.

ಪರಶುರಾಮಮಿಶ್ರನ ವಂಶೀಕರು ಸರಯೂಪಾರೀಣ ಬ್ರಾಹ್ಮಣಮತಕ್ಕೆ ಸೇರಿದವರು. ಆದುದರಿಂದ ತುಲಸೀದಾಸರ ಜನ್ಮವು ಉತ್ತಮ ಬ್ರಾಹ್ಮಣವಂಶದಲ್ಲೇ ಆಯಿತೆನ್ನುವುದಕ್ಕೆ ಸಂದೇಹವಿಲ್ಲ. ಕೆಲವರು ಅವರು ಕನ್ಯಾಕುಬ್ಜಬ್ರಾಹ್ಮಣವಂಶಕ್ಕೆ ಸೇರಿದವರೆಂದು ಹೇಳುತ್ತಾರೆ. ಆದರೆ ಅವರಿಂದ ರಚಿತವಾಗಿರುವ ಕವಿತಾವಳಿ ಎಂಬ ಗ್ರಂಥದಲ್ಲಿ- 'ನಾನು ಶುದ್ಧವೃತ್ತಿ (ಶುಕ್ಲವೃತ್ತಿ)ಯನ್ನು ಮಾಡುತ್ತಿದ್ದವರ ಉತ್ತಮಕುಲದಲ್ಲಿ ಜನ್ಮಿಸಿದೆ' ನೆಂದು

ಸ್ಪಷ್ಟವಾಗಿ ಬರೆದಿದ್ದಾರೆ. ಕನ್ಯಾಕುಬ್ಜ ಬ್ರಾಹ್ಮಣ ಕುಲಜರು-ಶುದ್ಧ ವೃತ್ತಿಯನ್ನು ಕೇವಲ ಸಿಂಗ್ಯಭಾವದಿಂದ ಕಾಣುತ್ತಾರೆ. ಆದುದರಿಂದ ಅವರು ಸರಿಯೂಪರೀಣ ಬ್ರಾಹ್ಮಣಕುಲದ ಪರಾಶರಾಮಗೋತ್ರದಲ್ಲಿ ಉದ್ಭವಿಸಿದರೆಂಬುದೇ ಸಿದ್ಧವಾಗುತ್ತದೆ.

ಪಿತೃ ಪಿತಾಮಹರ ಕಾಲದಿಂದ ಸ್ವಸ್ಥಳವಾಗಿದ್ದ ರಾಜಪುರದಲ್ಲಿ ಮುರಾರಿಮಿಶ್ರನು ವಾಸಿಸುತ್ತಿದ್ದನು ಆತನಿಗೂ ಯುಕ್ತ ವಯಸ್ಸಿನಲ್ಲಿ ಹುಲಸೀ ಎಂಬ ಕನ್ಯಾಮಣಿಯೊಂದಿಗೆ ವಿವಾಹವಾಯಿತು ಹುಲಸಿಯು ಸದ್ಗುಣಮಂಡಿತಳೂ ಪತಿವ್ರತೆಯೂ ಆಗಿದ್ದು, ಪತಿಸೇವೆಯಲ್ಲೂ ಅತಿಥಿ ಗುರುಜನರ ಆದರಾತಿಥ್ಯಗಳಲ್ಲೂ ಬೇಸರದ ತೊಡಗಿ, ಪತಿಯಮನಸ್ಸಿಗೆ ಸಂತೋಷವನ್ನುಂಟುಮಾಡಿದಳು. ಅತ್ಯಂತ ಅನ್ಯೋನ್ಯತೆಯಿಂದ ದಾಂಪತ್ಯ ಧರ್ಮಗಳನ್ನು ಪಾಲಿಸುತ್ತಾ ಲೌಕಿಕವನ್ನು ಸಾಗಿಸುತ್ತಿದ್ದ ಅವರ ಉದರದಲ್ಲಿ ಗಣಪತಿ ಮಹೇಶರೆಂಬ ಇಬ್ಬರು ಪುತ್ರರು ಜನಿಸಿದರು. ತರುವಾಯ ಹುಲಸೀಬಾಯಿಯು ಪುನಃ ಗರ್ಭಿಣಿಯಾಗಿ, ಸಂವತ್ ಎಂದರೆ ವಿಕ್ರಮಾರ್ಕಶಕೆಯ ೧೫೮೯ (ಕ್ರಿ ಶ ೧೫೩೨)ನೆಯ ಸಂವತ್ಸರದಲ್ಲಿ ಒಂದು ಪುರುಷ ಶಿಶುವನ್ನು ಪ್ರಸವಿಸಿದಳು. ದುರದೃಷ್ಟವಶಾತ್ ಆ ಶಿಶುವು ಜನನವಾದ ಮುಹೂರ್ತವು, ಮೂಲಾನಕ್ಷತ್ರದ ಮೊದಲನೆಯ ಪಾದವಾಗಿದ್ದುದರಿಂದ ಪುತ್ರಜನನವಾದೊಡನೆಯೇ, ತಾಯಿತಂದೆಗಳು ಆ ಮಗುವಿನ ಜನನ ಮುಹೂರ್ತ ಸಂಬಂಧದಿಂದ ತಮಗೂ ಕುಲಕ್ಕೂ ಅರಿಷ್ಟವುಂಟಾಗುವುದೆಂದು ಬಗೆದು, ಅದನ್ನು ಪರಿತ್ಯಾಗಮಾಡಿಬಿಟ್ಟರಂತೆ! ಹೀಗೆಂದು, ಡಾಕ್ಟರ್ ಗ್ರಿಯರ್ಸನ್ ಮುಂತಾದ ಪಾಶ್ಚಾತ್ಯ ಚರಿತ್ರಕಾರರು ಬರೆಯುತ್ತಾರೆ. ಆದರೆ ಹಾಗೆ ಯೋಚಿಸಲು ಕಾರಣವಿಲ್ಲವೆಂದು, ಹಿಂದೀ ಭಾಷೆಯಲ್ಲಿ ತುಲಸೀದಾಸರವರ ವಿಸ್ತಾರವಾದ ಚರಿತ್ರೆಯನ್ನು ಬರೆದಿರುವ ಪಂಡಿತ ರಾಮಚಂದ್ರ ಶುಕ್ಲರವರು ಅಭಿಪ್ರಾಯಪಡುತ್ತಾರೆ. ಅವರ ಹೇಳಿಕೆಯಲ್ಲಿ-'ಅಭುಕ್ತಮೂಲದಲ್ಲಿ ಜನಿಸಿತೆಂದು ಹಸುಕಂದನನ್ನು ಕೇವಲ ಅನಾಥನನ್ನಾಗಿ ಮಾಡಿಬಿಡುವಷ್ಟು ನಿರ್ಘೃಣರಾದ ತಾಯಿತಂದೆಗಳಿರುವುದು ಅಸಂಭವ. ಹಾಗೊಂದುವೇಳೆ ಜನ್ಮ ಮುಹೂರ್ತವು ಅರಿಷ್ಟಕಾರಕವೆಂಬ ಶಂಕೆಯುಂಟಾದರೆ, ಅದಕ್ಕಾಗಿ ಮೂಲಶಾಂತಿ ಗೋಮುಖಪ್ರಸವಶಾಂತಿ ಮುಂತಾದ ಶಾಸ್ತ್ರೋಕ್ತ ಕ್ರಿಯೆಗಳನ್ನು ಮಾಡಿ ದುರ್ಮುಹೂರ್ತದ ದುಷ್ಫಲಗಳನ್ನು ನಿವಾರಿಸುವ ಪದ್ಧತಿಯುಂಟಲ್ಲವೆ? ಹಾಗೆಯೇ ಮುರಾರಿ ಮಿಶ್ರ ಹುಲಸೀ

ಬಾಯಿಯರೂ ಶಾಂತಿಕ್ರಿಯೆಗಳನ್ನು ನಡೆಯಿಸಿ ಆ ಹಸುಕಂದನನ್ನು ರಕ್ಷಿಸಿರಬೇಕಲ್ಲದೆ, ತಮ್ಮ ಹಸುಕಂದನನ್ನು ನಾಯಿ ನರಿಗಳಿಗೆ ಆಹಾರವಾಗಲೆಂದು ಅನಾಥನನ್ನಾಗಿ ಎಲ್ಲಾದರೊಂದುಕಡೆ ಎಸೆದುಬಿಟ್ಟಿರಲಾರರೆಂದು ಊಹಿಸುವುದರಲ್ಲಿ ದೋಷತೋರುವುದಿಲ್ಲ' ಎಂದು ಬೋಧವಾಗುತ್ತದೆ. ಇದು ಹೇಗಾದರೂ ಇರಬಹುದು. ಜಗದುದ್ಧಾರಕ್ಕಾಗಿ ಜನ್ಮ ತಾಳುವ ಮಹಾಪುರುಷರ ಜೀವನಮಾನದಲ್ಲಿ ಪ್ರಪಂಚಕ್ಕೆ ವಿಲಕ್ಷಣಗಳೆಂದು ತೋರುವ ಇಂತಹ ಸಂಗತಿಗಳು ನಡೆಯುವುದು ಅಸಂಭವವೂ ಅಲ್ಲ. ಶ್ರೀ ತುಲಸೀದಾಸಕೃತ 'ವಿನಯಪತ್ರಿಕೆ' ಎಂಬ ಗ್ರಂಥದಲ್ಲೊಂದು ಕಡೆ-"ಹೇ ದೇವ ಮಾತಾಪಿತೃಗಳು ನನಗೆ ದೇಹವನ್ನಿತ್ತರು, ಆದರೆ ತ್ಯಾಗಮಾಡಿ ಬಿಟ್ಟರು. ಪ್ರಭೋ ನನ್ನನ್ನು ದುರ್ದೈವಿಯನ್ನಾಗಿ ಜನಿಸಲಿತ್ತು-ಮಾತಾಪಿತೃವಿಹೀನನನ್ನಾಗಿ ಮಾಡಿದುದೂ ನಿನ್ನ ಲೀಲೆಯೇ!" ಎಂದು ಬರೆದಿರುತ್ತಾರೆ.

ನಮ್ಮ ಕಥಾನಾಯಕರಿಗೆ ಬಾಲ್ಯದಲ್ಲಿ ರಾಮಬೋಲಾ ಎಂತಲೂ, ತುಲಾರಾಮ ಎಂತಲೂ ಹೆಸರುಗಳಿದ್ದಂತೆ ತಿಳಿಯಬರುತ್ತದೆ. 'ವಿನಯಪತ್ರಿಕಾ' ಗ್ರಂಥದಲ್ಲಿ ತುಲಸೀದಾಸಜೀಯವರು ಸ್ವತಃ "ರಾಮ ಕೋ ಗುಲಾಮ ನಾಮ ರಾಮಬೋಲಾ ರಾಮರಾಖ್ಯೋ" ಹೀಗೆಂದು ಬರೆಯುತ್ತಾರೆ. ಇದರಿಂದ ಅವರ ಒಂದು ಹೆಸರು ರಾಮಬೋಲಾ ಎಂದು ಇತ್ತೆಂಬುದು ಸ್ಪಷ್ಟವಾಗುತ್ತದೆ. ಮತ್ತು ತುಲಸೀ ಚರಿತದಲ್ಲಿ

"ತುಲಸೀ ತುಲಾರಾಮ ಮಮ ನಾಮಾ | ತುಲಾ ಅನ್ನ ಧರೀ ತೌಲಿ ಸ್ವಧಾಮಾ ||
ತುಲಸೀರಾಮ ಕುಲಗುರೂ ಹಮಾರೇ | ಜನ್ಮ ಪತ್ರಮಮದೇಖಿ ವಿಚಾರೇ ||
ಪ್ರೇಮಹಿಂ ತುಲಸೀರಾಮ ಮನು"ರಾಖೀ | ತುಲಾರೋಹತಿಯ ಕಹ್ಯಿ ಅಭಿಲಾಷೀ ||

ಇದರಿಂದ ಅವರ ಮೂಲನಾಮವು ತುಲಾರಾಮನೆಂದು ಇತ್ತೆಂತಲೂ, ಅದನ್ನು ಅವರ ಕುಲಗುರುಗಳು ತುಲಸೀರಾಮನೆಂದು ಮಾಡಿದರೆಂದೂ ಸ್ಪಷ್ಟವಾಗುತ್ತದೆ. ಸಾಧುವಾದ ತರುವಾಯ ಜಗತ್ತಿನಲ್ಲಿ ತುಲಸೀರಾಮದಾಸರೆಂಬ ನಾಮವೇ ಪ್ರಸಿದ್ಧವಾಯಿತು. ತುಲಾರಾಮನ ತರುವಾಯ ಮುರಾರಿಮಿಶ್ರನ ಉದರದಲ್ಲಿ ಮಂಗಲನೆಂಬ ಒಬ್ಬ ಪುತ್ರನೂ ವಾಣೀ ವಿದ್ಯಾ ಎಂಬಿಬ್ಬರು ಕನ್ಯೆಯರೂ ಜನಿಸಿದರು. ಈ ಮುರಾರಿಮಿಶ್ರನಿಗೆ ಆತ್ಮಾರಾಮ ಶುಕ್ಲದುಬೆ ಎಂಬ ನಾಮಾಂತರವೂ ಇದ್ದಿತೆಂದು ತಿಳಿಯಬರುತ್ತದೆ. ಹೀಗೆ ಮುರಾರಿಮಿಶ್ರನು ತನ್ನ ಪ್ರಪಿತಾಮಹನಾದ ಪರಶುರಾಮ ಮಿಶ್ರನಿಗಾದ ಸ್ವಪ್ನ ಫಲವಾಗಿ ಸತ್ಸಂತಾನಗಳನ್ನು ಪಡೆದು, ಪತ್ನೀ

ಪುತ್ರಪುತ್ರಿಯರೊಂದಿಗೆ ಲೌಕಿಕಾನಂದದಲ್ಲಿ ಕಾಲಯಾಪನೆ ಮಾಡುತ್ತಾ ಸುಖವಾಗಿದ್ದನು

---

## ಅಧ್ಯಾಯ ೨. ವಿವಾಹ-ವೈರಾಗ್ಯ.

ಭಗವದ್ವಿಚಾರವು ಮಾನವದೃಷ್ಟಿಗೆ ಅದೃಶ್ಯವಾಗಿದೆ. ಲೋಕದಲ್ಲಿ ನಡೆವ ಕೆಲಕೆಲ ಸಂಗತಿಗಳನ್ನು ಲಕ್ಷ್ಯಪೂರ್ವಕ ವಿಚಾರಮಾಡಿದರೆ ಅದರ ನಿಜತತ್ವವನ್ನು ತಿಳಿಯಬಹುದು ಯಾವುದೊಂದು ಕಾರ್ಯವು ನಡೆದಾಗ ಹಾಗೆ ನಡೆದುದು ಅನ್ಯಾಯವೆಂದೂ ಅಶ್ಲೀಲವೆಂದೂ ಪ್ರಪಂಚಕ್ಕೆ ತೋರುವದು ಆದರೆ ಕೆಲಕಾಲ ಕಳೆದತರುವಾಯ, ಆಗ ಅದು ಹಾಗೆ ನಡೆದಿರದಿದ್ದರೆ ಕಾರ್ಯದ ಪರಿಣಾಮವು ಇಷ್ಟು ಸುಸ್ಥಿತಿಯಲ್ಲಿ ಆಗಲಾರದು ಎಂಬುದನ್ನು ಮನಗಾಣುವೆವು ಕೆಲವು ಬಾಲಕರಿಗೆ ಹುಟ್ಟಿದೊಡನೆಯೇ ಮಾತೃವಿಯೋಗವಾಗುವುದು ! ಅಯ್ಯೋ ಕಂದನು ಪರದೇಶಿಯಾದನು ಎಂದು ಎಲ್ಲರೂ ಮರುಗುವರು ಅಂತಹಬಾಲಕನೇ, ಅಲ್ಪಯಿಲ್ಲ ಬೆಳೆದು, ಚಂದ್ರಹಾಸನ ಹಾಗೆ ಅತಿಶಯ ತೇಜಸ್ವಿಯೆನಿಸಿಕೊಂಡು, ಜಗತ್ಪ್ರಸಿದ್ಧನಾಗುವನು ಜನ್ಮವಿತ್ತತರುವಾಯ ತಾಯಿಯು ಒದುಕಿ ಅವನ ಜೀವನವ ತನ್ನಮನೆಯೆಂಬ ನಾಲ್ಕುಗೋಡೆಗಳ ಮಧ್ಯದ ಒಂದು ಸಂಕುಚಿತಪ್ರದೇಶದಲ್ಲಿ ಸಾಗಿದ್ದರೆ, ಮುಂದೆ ನಡೆಯಬೇಕಾಗಿದ್ದ ಆ ಬಾಲಕನ ಅಭಿವೃದ್ಧಿಗೆ ಯಾವಬಗೆಯ ವಿಘ್ನವುಂಟಾಗುತ್ತಿತ್ತು ಎಂಬುದು ವಿಧಿಗೆ ಗೋಚರವಿಲ್ಲದ ಲೋಕಕ್ಕೆ ಕಂಡುಬರಲಾರದು ಬಜ್ಯಾಬನೊಬ್ಬ ಕನ್ಯೆಗೆ ವಿವಾಹವಾದೊಡನೆಯೇ ಪತಿವಿಯೋಗವಾಗುವದು ಆದರೆ ಹಾಗೆ ಪತಿವಿರಹಿತಳಾದಮೇಲೆಯೇ ಆಕೆಯು ವಿದ್ಯಾಭ್ಯಾಸಮಾಡಿ ಕಷ್ಟಪಟ್ಟು ಜೀವನೋಪಾಯಕ್ಕಾದರೂ ಲೋಕಸೇವಾಮಾರ್ಗವನ್ನು ಅವಲಂಬಿಸಿ, ವೈದ್ಯವೃತ್ತಿಯನ್ನೋ ಉಪಾಧ್ಯಾಯಿನಿಯ ವೃತ್ತಿಯನ್ನೋ ಮಾಡುತ್ತಾ ಪ್ರಜೋಪಕಾರಕಳಾಗಿ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳುವಳು. ಪತಿವಿರಹಿತಳಾದ ಆರ್ಯಭಟ್ಟನ ಕುಮಾರಿ ಲೀಲಾವತಿಯು ಗಣಿತಶಾಸ್ತ್ರಾಧ್ಯಯನ ಮಾಡಿ ಅಗಾಧ ಗಣಿತಶಾಸ್ತ್ರಗ್ರಂಥವನ್ನು ರಚಿಸಿದಳು. ಹೋಳಕರ ವಂಶಲಲಾಮಳಾದ ಶ್ರೀ ಅಹಲ್ಯಾಬಾಯಿಯು ಪತಿ ವಿರಹಿತಳಾದಮೇಲೆಯೇ ಅಖಂಡ ನಾಲ್ವತ್ತುವರುಷಗಳಕಾಲ ರಾಜ್ಯಭಾರಮಾಡಿ ಅಕ್ಷಯಕೀರ್ತಿಧ್ವಜವನ್ನು ನೆಟ್ಟಿರುವಳು. ಒಂದುವೇಳೆ ಅವರಿಗೆ ಆ ಬಗೆಯ ಸ್ಥಿತಿಯು

ಪ್ರಾಪ್ತವಾಗಿರದಿದ್ದರೆ, ಅವರಿಂದ ಆಬಗೆಯ ಕಾರ್ಯಗಳು ಆಗಲು ಅವಕಾಶವೇ ಒದಗುತ್ತಿರಲಿಲ್ಲವೆನ್ನಬಹುದು. ಹೀಗೆಯೇ ಅನೇಕಮಂದಿಯ ಜೀವಿತಗಳಲ್ಲಿ ಅನೇಕಾನೇಕ ಸಂಗತಿಗಳು ನಡೆಯುವವು. ಇದನ್ನು ಇಷ್ಟು ಸ್ಪಷ್ಟರೀತಿಯಿಂದ ಹೇಳಿದುದರಿಂದ ನಾವು ಪತಿವಿರಹಿತೆಯರಾದ ಬಾಲಕೆಯರು ಆ ಬಗೆಯ ವೃತ್ತಿವಿಶೇಷಗಳನ್ನು ಅವಲಂಬಿಸಬೇಕೆಂಬುದನ್ನು ಸಮರ್ಥಿಸುತ್ತಿದ್ದೇವೆಂದು ಯಾರೂ ಭಾವಿಸಬಾರದು. ನಮ್ಮ ಭಾವನೆಯೇನೆಂದರೆ, ವಿಧಿಯು ಯಾವಕಾಲಕ್ಕೆ ಯಾವಾಗೆಯ ಕಷ್ಟನಿಷ್ಠುರಗಳನ್ನು ಏತಕ್ಕಾಗಿ ಪ್ರಾಣಿಗಳ ಪಾಲಿಗೆ ತಂದೊಡ್ಡುತ್ತಾನೆಂಬುದೂ, ಅವುಗಳ ಕಾರಣ ಪರಿಣಾಮಗಳೇನೆಂಬುದೂ ಮಾನವದೃಷ್ಟಿಗೆ ಅಗೋಚರವಾಗಿರುವವು. ಮುಂದೆ ಪ್ರಾಪ್ತವಾಗಲಿರುವ ಯಾವ ಸತ್ಫಲಕ್ಕಾಗಿ ಪ್ರಕೃತದಲ್ಲಿ ಇಂತಹ ಕಷ್ಟತಾಪತ್ರಯಗಳು ಪ್ರಾಪ್ತವಾಗುವವೆಂದು ತಿಳಿದು, ಸಮಾಧಾನದಿಂದ ಕಾಲಪರೀಕ್ಷಣೆಯಲ್ಲಿದ್ದು, ಭಗವದಿಚ್ಛೆಯನ್ನು ಯುಕ್ತಕಾಲದಲ್ಲಿ ತಿಳಿಯಬೇಕಲ್ಲದೆ, ಆತುರಗೊಂಡು ಅಸ್ವಾಭಾವಿಕವಾದ ಪ್ರತಿಕ್ರಿಯೆಗಳಿಗೆ ತೊಡಗಬಾರದೆಂದು ಸೂಚಿಸುವುದೇ ಆಗಿದೆ.

ನಮ್ಮ ಕಥಾನಾಯಕರ ಶಿಶುತನದಲ್ಲಿ ಆತನು ಮಾತಾಪಿತೃಗಳಿಂದ ತ್ಯಜಿಸಲ್ಪಟ್ಟನೆಂಬ ಸಂಗತಿಯೇ ಹೆಚ್ಚು ಸ್ಪಷ್ಟ ರೀತಿಯಿಂದ ಪ್ರಚಾರದಲ್ಲಿ ಬಂದ ಪಾಠವಾಗಿದೆ. ಆದುದರಿಂದ ಅದರ ಆಧಾರದಮೇಲೆಯೇ ಮುಂದೆ ನಡೆದ ಚರಿತ್ರೆಯನ್ನು ಹೇಳಬೇಕಾದುದು ಯುಕ್ತವು. ಮಾತಾಪಿತೃಗಳಿಂದ ತ್ಯಜಿಸಲ್ಪಟ್ಟು ಒಂದಾನೊಂದು ತೋಟದ ಒಂದುಕೊನೆಯ ಬೇಲಿಯ ಪಕ್ಕದಲ್ಲಿ ಕಾವುಕಾವೆಂದು ಅಳುತ್ತಿದ್ದ ಆ ಹಸುಕಂದನನ್ನು ಆ ಮಾರ್ಗವಾಗಿ ತುಲಸಿ ಬಿಲ್ವ ಪುಷ್ಪಾದಿಗಳ ಸಂಗ್ರಹಣಕ್ಕಾಗಿ ಬಂದಿದ್ದ ನರಸಿಂಹದಾಸನೆಂಬ ಒಬ್ಬಾನೊಬ್ಬ ಸಾಧುವು ಕಂಡು ಕನಿಕರಪಟ್ಟು ಎತ್ತಿಕೊಂಡು ಆದರಿಸಿದನು. ಆ ಕಂದನ ಪ್ರಸನ್ನ ಮುಖವನ್ನೂ ತೇಜಸ್ವಿ ನೇತ್ರಗಳನ್ನೂ ನೋಡಿ ನೋಡಿದಂತೆ ಆ ಸಾಧುವಿನ ಹೃದಯವು ಮೇಲೆ ಮೇಲೆ ಆಕರ್ಷಿತವಾಗುತ್ತಾ, ಕೊನೆಗೆ ಆತನು ಆ ಕಂದನನ್ನು ಎದೆಗಪ್ಪಿಕೊಂಡು, ತನ್ನ ಆಶ್ರಮಕ್ಕೆ ಕರೆದೊಯ್ದು ಅಲ್ಲಿ ಅದನ್ನು ಬಹು ಜೋಪಾನದಿಂದ ಕಾಪಾಡತೊಡಗಿದನು. ನೆರೆಹೊರೆಯ ಮನೆಗಳ ಸಾಧುಮಹಿಳೆಯರಿಂದ ಹಾಲನ್ನು ಬೇಡಿತಂದು ಕಾಲಕಾಲಕ್ಕೆ ಕುಡಿಸುವನು, ಅತ್ತಾಗ ಎತ್ತಿ ಎದೆಗಪ್ಪಿ ಮುದ್ದಿಸಿ ಲಾಲಿ

ಸುವನು. ತೊಡೆಯಮೇಲೆ ಮಲಗಿಸಿಕೊಂಡು ತೋಳಮೇಲೆತ್ತಿಕೊಂಡು ಇಂತು ಪರಿಪರಿಯಿಂದ ಆ ಕಂದನನ್ನು ಪೋಷಿಸಿದನು.

ಮಗುವಿಗೆ ಒಂದೆರಡು ವರ್ಷಗಳಾದುವು. ಅಂಬೆಗಾಲು ತಪ್ಪಿ ಹೆಜ್ಜೆಗಳನ್ನಿಟ್ಟು ಆಶ್ರಮದ ಒಳಗು ಹೊರಗುಗಳಲ್ಲಿ ನಡೆದಾಡುವನು. ಮೂರು ನಾಲ್ಕು ವರ್ಷಗಳಾದುವು. ತಾನೇ, ಅಂಗಳ ವೃಂದಾವನ ಆಶ್ರಮದ ಮುಂದಿನ ಬಯಲು ಪ್ರದೇಶಗಳಲ್ಲಿ ಆಡಿಕೊಳ್ಳುವನು. ತನ್ನ ಮಟ್ಟಿಗೆ ತಾನು ಆಡಿಕೊಂಡಿರುತ್ತಿದ್ದ ಆರೋಗ್ಯಶಾಲಿಯೂ ದೃಢಗಾತ್ರನೂ ದಿವ್ಯ ಸುಂದರವಿಗ್ರಹವೂ ಆದ ಆ ಮಗುವನ್ನು ಕಂಡು, ಆ ಸಾಧುವು ಪರಮ ಸಂತುಷ್ಟನಾಗಿ, ತನ್ನ ಪೂಜಾಧ್ಯಾನ ಭಜನೆ ಮುಂತಾದುವುಗಳಲ್ಲಿ ತೊಡಗಿರುವನು. ತಾಯಿಯೂ ತಂದೆಯೂ ಗುರುವೂ ಬಂಧುವೂ ಹಚ್ಚೇನು ಸರ್ವಸ್ವವೂ ಆಗಿದ್ದ ಆ ಸಾಧುವೇ ತುಲಸೀರಾಮನ ಏಕಮಾತ್ರ ಆಧಾರನಾಗಿದ್ದುದರಿಂದ ಆ ಬಾಲಕನು ಆತನನ್ನೇ ನೋಡಿ, ಆತನನ್ನೇ ಆಶ್ರಯಿಸಿ, ಆತನ ನಡೆನುಡಿಗಳನ್ನೇ-ಆಚರಣೆಗಳನ್ನೇ ಅನುಸರಿಸಿ ನಡೆಯುವನು ಆತನಂತೆಯೇ ಸ್ನಾನಮಾಡುವನು. ದಾಸಚಿಹ್ನೆಗಳಾದ ನಾಮಾದಿಗಳನ್ನೂ ತುಲಸೀಮಣಿಗಳ ಹಾರವನ್ನೂ ಧರಿಸುವನು. ದೇವರ ಧ್ಯಾನ ಭಜನೆಗಳನ್ನು ಮಾಡುವನು. ಪ್ರದಕ್ಷಿಣೆ ನಮಸ್ಕಾರಗಳನ್ನಾಚರಿಸುವನು ಹೀಗೆ ತುಲಸೀರಾಮನು ಬಾಲ್ಯದಿಂದಲೂ ಈ ಬಗೆಯ ಧರ್ಮ ಸಂಬಂಧ ಕಾರ್ಯಕಲಾಪಗಳಲ್ಲಿ ಮಗ್ನನಾಗಿದ್ದು ಬಡುವನು ಕ್ರಮಕ್ರಮವಾಗಿ ವಯಸ್ಸಾದಂತೆಲ್ಲಾ ಆತನ ಪೂಜಾ ಸಾಮಗ್ರಿಗಳನ್ನೂ, ಪೂಜಾ ಸ್ಥಳವನ್ನೂ ಶುದ್ಧಿಗೊಳಿಸಿಕೊಡುವುದು, ತುಲಸೀ ಪುಷ್ಪಾದಿಗಳನ್ನು ಸಂಗ್ರಹಿಸಿತಂದಿಡುವುದು, ಅಗ್ರೋದಕಗಳನ್ನು ಒದಗಿಸುವುದು, ವಸ್ತ್ರಾದಿಗಳನ್ನು ಒಗೆದು ಒಣಗಿಸಿಕೊಡುವುದು, ಮುಂತಾದ ಕಲಸಗಳನ್ನು ಮಾಡುತ್ತಾ ಆತನಿಗೆ ಪರಮ ತೃಪ್ತಿಯನ್ನುಂಟುಮಾಡುತ್ತಿದ್ದನು ಆ ಬಾಲಕನ ಮನೋಹರ ವಿಗ್ರಹವೂ, ವಿನಯ ವಿಧೇಯತೆಗಳೂ, ಚಟುವಟಿಕೆಯೂ, ಧರ್ಮಭೀತಿಯೂ ಸಜ್ಜನರ ಮನಸ್ಸಿಗೆ ಆನಂದದಾಯಕವಾಗಿರುವುದು. ಸ್ವತಃ ಸಂಸ್ಕೃತ ಪಂಡಿತನಾಗಿದ್ದ ಆ ಸಾಧುವರ್ಯನು, ತುಲಸೀರಾಮನಿಗೆ ಸಂಸ್ಕೃತದಲ್ಲಿ ಉತ್ತಮರೀತಿಯಿಂದ ಶಿಕ್ಷಣವನ್ನಿತ್ತುದಲ್ಲದೆ, ಶ್ರೀ ರಾಮಾಯಣದ ಕಥೆಯನ್ನು ಆದ್ಯಂತವಾಗಿ ಬೋಧಿಸಿದನು. ಸಾಹಿತ್ಯ, ಅಲಂಕಾರ ಶಾಸ್ತ್ರ, ವೇದಾಂತಶಾಸ್ತ್ರಾಭ್ಯಾಸಗಳೂ ಕ್ರಮವಾಗಿ ನಡೆದುವು. ಬಾಲ ತುಲಸೀರಾಮನು, ರಾಮಾಯಣ

ವನ್ನು ವಿಶೇಷ ಭಕ್ತಿಯಿಂದ ಪಠಿಸುತ್ತಾ, ರಾಮಚರಿತ್ರೆಯ ಬೇರೆಬೇರೆ ಸಂಭವಗಳನ್ನು ಕಂಡು ಮನಸ್ಸಿನಲ್ಲೇ ಪರಿಭಾವಿಸಿಕೊಂಡು ತಲ್ಲೀನನಾಗು ವನು. ದುಷ್ಟ ರಾಕ್ಷಸ ಸಂಹಾರಕ್ಕಾಗಿ ನರಾವತಾರವನ್ನೆತ್ತಿದ ಪುರು ಷೋತ್ತಮನೇ ಶ್ರೀ ರಾಮನು ಎಂಬ ವಿಚಾರದಲ್ಲಿ ಆತನಲ್ಲಿ ಅತ್ಯಂತ ಭಕ್ತಿ ಭಾವಗಳುದಿಸಿದುವು ಮನಸ್ಸು ಪ್ರೇಮಮಯವಾಯಿತು. ರಾಮನ ಪಾದಗಳನ್ನು ಬಿಟ್ಟು ಅನ್ಯತ್ರ ಚಲಿಸದಾಯಿತು ನಾಲಿಗೆಯು ರಾಮನಾ ಮಪಾರಾಯಣದಿಂದ ಅಹರ್ನಿಶಿಯೆಲ್ಲಾ ಧನ್ಯತೆಯನ್ನು ಹೊಂದುತ್ತಿದ್ದಿತು. ಕರಚರಣಾದಿಗಳು ಆ ಜಾನಕೀರಮಣನ ಪೂಜಾಸಾಮಗ್ರಿಗಳ ಸಂಗ್ರಹಣ ಕಾರ್ಯದಲ್ಲಿ ತೊಡಗಿ ಧನ್ಯವಾದುವು ತುಲಸೀರಾಮನು ಆ ಬಾಲ್ಯ ವಯ ಸ್ಸಿನಲ್ಲೇ ನೋಡಿದವರ ಕಣ್ಮನಗಳನ್ನು ಆಕರ್ಷಿಸುತ್ತ, ಬರುಬರುತ್ತಾ ರಾಮ ನಾಮದ ಸಿಧಿಯಾಗುತ್ತಾ ಬೆಳೆದನು.

ಕಾಲವು ನಿದಾನವಾಗಿ ಸಾಗಿತು. ಬಾಲಕ ತುಲಾರಾಮನು ತನ್ನ ಪೋಷಕನಾದ ಸಾಧುವಿನೊಂದಿಗೆ, ಅನೇಕ ಪುಣ್ಯಕ್ಷೇತ್ರಗಳಿಗ ಸಂಚರಿಸಿ, ದಿವ್ಯ ತೀರ್ಥಗಳಲ್ಲ ಸ್ನಾನಮಾಡಿ, ಆಯಾ ಸ್ಥಳಗಳಲ್ಲದ್ದ ಭಗವಾನನ ಮೂರ್ತಿಗಳ ದರ್ಶನಮಾಡಿ ಧನ್ಯತೆಯನ್ನು ಹೊಂದಿದನು. ಹೀಗೆ ತೀರ್ಥ ಕ್ಷೇತ್ರಾದಿಗಳನ್ನು ಸುತ್ತುತ್ತಾ ಗುರುಶಿಷ್ಯರಿಬ್ಬರೂ ಶುಕ್ರಕ್ಷೇತ್ರವೆಂಬ ಸ್ಥಳಕ್ಕೆ ಬಂದರು. ಆ ವೇಳೆಗ ತುಳಾರಾಮನು ಪ್ರಾಯಸ್ಥನೂ ದೃಢಾಂ ಗನೂ ದಿವ್ಯ ಸುಂದರ ರೂಪನೂ ಆಗಿದ್ದನು. ಆತನ ವಿನಯ ವಿಧೇಯತೆ, ಸೌಮ್ಯಮುಖಭಾವ ಬ್ರಹ್ಮವರ್ಚಸ್ವಿತೆ ಮುಂತಾದುವುಗಳನ್ನು ಕಂಡು ಅದೇ ಕ್ಷೇತ್ರವಾಸಿಯಾಗಿದ್ದ ದೀನಬಂಧು ಪಾಠಕನೆಂಬ ಒಬ್ಬ ಸದ್ಗೃಹ ಸ್ಥನು ತನ್ನ ಮಗಳಾವ ರತ್ನಾವಳಿ ಎಂಬ ಕನ್ಯೆಯನ್ನು ಆತನಿಗೆ ಕೊಟ್ಟು ಲಗ್ನಮಾಡಿದನು. ಮುಂದೆ ರತ್ನಾವಳಿಯು ಪುಷ್ಪವತಿಯಾಗಿ ಮನೆಗೆ ಬಂ ದಳು. ತುಲಾರಾಮನು ಪತ್ನಿಯಲ್ಲಿ ವಿಶೇಷ ಪ್ರೀತಿಯಿಂದ ಸಂಸಾರ ಸುಖಾನುಭವ ಮಾಡುತ್ತಾ ಕೆಲವರ್ಷಕಾಲ ಇರುವಷ್ಟರಲ್ಲಿ ರತ್ನಾವಳಿಯು ಗರ್ಭಿಣಿಯಾಗಿ ಒಂದು ಪುರುಷ ಶಿಶುವನ್ನು ಪ್ರಸವಿಸಿದಳು ತುಲಾರಾಮನ ಸಂಸಾರವು ಸುಖಮಯವಾಗಿ ಸಾಗಿತು. ಆದರೆ ಮಗುವಿಗೆ ಮೂರು ವರ್ಷ ಗಳು ತುಂಬುವುದರೊಳಗಾಗಿಯೇ ಮೃತ್ಯುವು ಸನ್ನಿಹಿತವಾಯಿತು; ಮುಂದೆ ಕೆಲವು ದಿನಗಳಲ್ಲೇ ರತ್ನಾವಳಿಯೂ ವಿಧಿವಶಳಾದಳು. ತುಲಾರಾಮನು ವ್ಯಸನ ಸಾಗರದಲ್ಲಿ ಮುಳುಗಿ ದಡಕಾಣದಿದ್ದನು.

ಆದರ ಸಂಸಾರದಲ್ಲಿ ಸುಖವು ಹೇಗೆ ಶಾಶ್ವತವಲ್ಲವೋ ದುಃಖವೂ ಹಾಗೆಯೇ ನಿರಂತರ ಇರತಕ್ಕುದಲ್ಲವಷ್ಟೆ ! ತುಲಾರಾಮನಿಗೆ ಪುನಃ ವಿವಾಹವಾಯಿತು ಕೆಲವು ದಿನಗಳೊಳಗಾಗಿ ಆ ಪತ್ನಿಯೂ ತೀರಿಹೋದಳು. ತರುವಾಯ ಕಾಂಚನಪುರವೆಂಬ ಗ್ರಾಮದ ನಿವಾಸಿಯಾಗಿದ್ದ ಲಕ್ಷ್ಮಣ ಉಪಾಧ್ಯಾಯನೆಂಬಾತನ ಮಗಳಾದ 'ಬುದ್ಧಿಮತಿ' ಎಂಬ ಕನ್ಯೆಯೊಂದಿಗೆ ತುಲಾರಾಮನಿಗೆ ಮೂರನೆಯ ಮದುವೆಯು ಬಹು ವಿಜೃಂಭಣೆಯಿಂದ ನಡೆಯಿತು ಈ ತೃತೀಯ ಭಾರ್ಯೆಯು ತನ್ನ ಹೆಸರಿಗೆ ತಕ್ಕಂತೆ ಬಹು ಬುದ್ಧಿಶಾಲಿನಿಯೂ ಒಳ್ಳೆದ ಸ್ವರೂಪಿಯೂ ರಾಮಭಕ್ತಳೂ ಆಗಿದ್ದಳು ಆಕೆಯಲ್ಲಿ ತುಲಾರಾಮನಿಗೆ ಅತಿಶಯ ಮೋಹವು ಉತ್ಪತ್ತಿಯಾಯಿತು ಆಕೆಯ ರೂಪು ಲೇಖಾವಿಲಾಸಗಳೂ ಚತುರತೆಯೂ ಆತನ ಸಂಪೂರ್ಣ ಹೃದಯವನ್ನೂ ಆಕರ್ಷಿಸಿಬಿಟ್ಟವು ಆ ಬಾಲಿಕೆಯ ಸ್ವಾಭಾವಿಕವಾದ ಚಂಚಲನೋಟ, ಪ್ರಸನ್ನಮುಖ ಮೃದುಭಾಷಣ ಮುಂತಾದುವು ಕೆಲಕೆಲವು ವೇಳೆ ಆತನನ್ನು ಮುಗ್ಧನನ್ನಾಗಿಸಬಿಡುತ್ತಿದ್ದವು ಬರುತ್ತಾ ಬರುತ್ತಾ ತುಲಾರಾಮನು, ಒಂದು ದಿನವಲ್ಲ - ಗಂಟೆಯಲ್ಲ - ಗಳಿಗೆಯಲ್ಲ, ಕ್ಷಣಮಾತ್ರವೂ ತನ್ನ ಪತ್ನಿಯನ್ನು ಬಿಟ್ಟಿರಲಾರದವನು ಪತ್ನಿಯನ್ನು ಅಗಲಿ ಮನೆಯಿಂದ ಎಂದೂ ಹೊರಡದಾದನು. ಬಾಲ್ಯದಲ್ಲಿ ಹೃದಯಕ್ಷೇತ್ರದಲ್ಲಿ ನಡಲ್ಪಟ್ಟು ಕಲಕಾಲ ಬೆಳೆದಿದ್ದ ಶ್ರೀ ರಾಮಭಕ್ತಿಲತೆಯು ಈಗ ತಾರುಣ್ಯದ ಭರದಲ್ಲಿ ಬಾಡಿ ಬಸವಳಿದು ಹೋಯಿತು ಹೃದಯದಲ್ಲಿ ಪ್ರಭುವರನಾದ ರಘುಪ್ರವರನಿಗೆ ಕೊಟ್ಟಿದ್ದ ಸ್ಥಾನವು ಈಗ ಬುದ್ಧಿಮತಿಯ ಮೋಹನ ಮೂರ್ತಿಗೆ ವಹಿಸಲ್ಪಟ್ಟಿತು

ಆದರೆ ವಿಧಿಯ ಚರ್ಯೆಗಳು ವಿಚಿತ್ರಗಳಲ್ಲವೆ ? ತುಲಾರಾಮನ ಜೀವಿತವು ಆ ಮೋಹ ಪ್ರವಾಹದಲ್ಲಿ ಕೊಚ್ಚಿ ಹೋಗದಂತಿರಬೇಕೆಂದು ವಿಧಿಯು ಬಗೆದಂತೆ ತೋರುತ್ತದೆ. ಮುಂದೊಂದು ದಿನ ಒಂದು ವಿಚಿತ್ರ ಪ್ರಸಂಗ ನಡೆಯಿತು ಪತ್ನಿಯನ್ನು ಕ್ಷಣಕಾಲವೂ ಬಿಟ್ಟಿರದಿದ್ದ ತುಲಾರಾಮನು ಒಂದಾನೊಂದು ಕೆಲಸಕ್ಕಾಗಿ, ಅಗತ್ಯವಾಗಿ ಹೊರಕ್ಕೆ ಹೋಗಿಯೇ ತೀರಬೇಕಾಯಿತು, ಅಷ್ಟೇ ಅಲ್ಲ, ಒಂದೆರಡು ದಿನಗಳವರೆಗೆ ಹಿಂದಿರುಗಿ ಬರಲೂ ಅನುಕೂಲಿಸಲಿಲ್ಲ ಈ ವಿಯೋಗವು ಆ ಪ್ರೇಮ ಭರ್ತನಿಗೆ ಅಸಹನೀಯವಾಗಿತ್ತು. ಎಂತೂ ಕೆಲಸವನ್ನು ಮಾಡಿಕೊಂಡು ಎರಡು ದಿನಗಳ ಮೇಲೆ ಮನೆಗೆ ಬಂದನು ಆದರೆ ಈ ಮಧ್ಯ ಮನೆಯಲ್ಲೊಂದು

ಸಂಗತಿ ನಡೆದಿತ್ತು. ಬಹು ದಿನಗಳಿಂದಲೂ ತೌರುಮನೆಗೆ ಹೋಗಿರದಿದ್ದ ಬುದ್ಧಿಮತಿಯು, ತಾಯಿಯ ಕಡೆಯವರು ಕರೆಯಲು ಬಂದುದರಿಂದ ಅವರೊಂದಿಗೆ ಹೊರಟು ಹೋಗಿದ್ದಳು ಆ ವಿಚಾರವು ಮನೆಗೆ ಬಂದೊಡನೆಯೇ, ತುಲಾರಾಮನಿಗೆ ತಿಳಿಸಲ್ಪಟ್ಟಿತು ಪತ್ನಿಯು ತಾಯಿಯ ಮನೆಗೆ ಹೊರಟು ಹೋದಳೆಂಬ ವಾರ್ತೆಯನ್ನು ಕೇಳಿ ಆತನು ಸ್ತಂಭಿತನಾದನು ಕ್ಷಣಕಾಲ ಏನೂ ತೋರದೆ ನಿಂತುಬಿಟ್ಟನು ಆದರೆ ತನ್ನ ಮೋಹದ ಪತ್ನಿಯನ್ನು ಅಗಲಿ ಮನೆಯಲ್ಲಿ ನಿಲ್ಲುವುದು ಆತನಿಂದ ಸಾಧ್ಯವಾಗಲಿಲ್ಲ ಒಡನೆ ಮನೆಯಿಂದ ಹೊರಟವನು ರಾತ್ರಿಯ ಕತ್ತಲೆ, ಕಲ್ಲು ಮುಳ್ಳುಗಳು, ಜೋರೆಂದು ಸುರಿಯುತ್ತಿದ್ದ ಮಳೆ ಇವುಗಳಲ್ಲೊಂದರ ಲಕ್ಷ್ಯವೂ ಇಲ್ಲದೆ ನೇರವಾಗಿ ತನ್ನ ಪತ್ನಿಯಿದ್ದ ಕಾಂಚನಪುರಗ್ರಾಮಕ್ಕಾಗಿ ಪ್ರಯಾಣಮಾಡಿದನು ಮಧ್ಯ ಮಾರ್ಗದಲ್ಲಿ ತುಂಬಿಹರಿಯುತ್ತಿದ್ದ ಒಂದು ನದಿಯೂ ಸಿಕ್ಕಿತು ಅದನ್ನು ದಾಟುವ ಸಾಧನಗಳಾವುವೂ ಹತ್ತಿರವಿರಲಿಲ್ಲ ಆದರೆ ತುಲಾರಾಮನು ಬೆದರದೆ, ಕೇವಲ ಪರವಶನಂತೆ ಆ ನದಿಯಲ್ಲಿ ಧುಮುಕಿ ಈಜತೊಡಗಿದನು ದಾರಿ ತಪ್ಪಿತು ಆತನು ಆ ರಾತ್ರಿ ಪಟ್ಟ ಕಷ್ಟವನ್ನು ವರ್ಣಿಸಲಳವಲ್ಲ ! ಕಲ್ಲು ಮುಳ್ಳುಗಳೊತ್ತಿ ಪಾದಗಳು ರಕ್ತಮಯವಾದುವು. ಉಟ್ಟು ಹೊದಿದ ಒಟ್ಟೆಗಳೆಲ್ಲಾ ಹರಿದು ಜೋಲತೊಡಗಿದುವು. ಎಂತಾದರಾಗಲಿ ಮಧ್ಯರಾತ್ರಿಯ ವೇಳೆಗೆ ಕಾಂಚನಪುರವನ್ನು ಸೇರಿ, ಆ ಕತ್ತಲಲ್ಲೂ ಮಾವನ ಮನೆಯನ್ನು ಗುರ್ತಿಸಿದನು ಆ ವೇಳೆಗೆ ಮನೆಯವರೆಲ್ಲರೂ ಮಲಗಿ ಗಾಢ ನಿದ್ರಾಸಕ್ತರಾಗಿದ್ದರು ಆ ನಡುರಾತ್ರಿಯಲ್ಲಿ ಕೂಗಿ ಎಲ್ಲರನ್ನೂ ಎಬ್ಬಿಸುವುದು ತುಲಾರಾಮನಿಗೆ ಸರಿತೋರಲಿಲ್ಲ. ತನ್ನ ಪತ್ನಿಯು ಮಲಗಿದ್ದ ಕೊಟಡಿಗೆ ಮಾತ್ರ ಹೇಗಾದರೂ ಸೇರಿಬಿಟ್ಟರೆ ಸಾಕೆಂದು ಚಿಂತಿಸಿ, ಮನೆಯ ಮೇಲಕ್ಕೆ ಹತ್ತಿ ಮಾಳಿಗೆಯಿಂದ ಒಳಕ್ಕಿಳಿಯಲು ಯೋಚಿಸಿದನು. ಮನೆಯನ್ನು ಹತ್ತಲಿಕ್ಕಾದರೂ, ಏಣಿ ಮುಂತಾದ ಯಾವ ಸಾಧನವೂ ಇದ್ದಂತೆ ತೋರಲಿಲ್ಲ. ಪುನಃ ಸುತ್ತಲೂ ಸುತ್ತಿ ನೋಡಿದನು ಏನೊಂದು ಸಾಧನವೂ ದೊರೆಯಲಿಲ್ಲ ಕೊನೆಗೆ ಏನು ಮಾಡಲೆಂದು ಯೋಚಿಸುತ್ತಿರುವಷ್ಟರಲ್ಲಿ, ಒಂದು ಮೂಲೆಯಲ್ಲಿ ಕಪ್ಪನೆಯ ಏನೋ ಒಂದು ಪದಾರ್ಥವು ಇಳಿಯ ಬಿದ್ದಿದ್ದಂತೆ ಕಾಣಿಸಿತು ಒಡನೆ ಅದರ ಬಳಿಗೆ ನಡೆದು ನೋಡಲು, ಅದೊಂದು ಹಗ್ಗವಿರಬಹುದೆಂದು ಬೋಧೆಯಾಯಿತು. ಅದನ್ನು ಕಂಡು ಆತನಿಗಾದ ಆನಂದವನ್ನು ವರ್ಣಿಸ

ಶಕ್ಯವಿಲ್ಲ.-"ಆಹಾ ನನ್ನ ಪತ್ನಿಗೆ ನನ್ನ ಮೇಲೆ ಎಷ್ಟು ಪ್ರೇಮ! ನಾನು ಒರುತ್ತೇನೆಂದೂ, ಹಾಗೆ ಬಂದರೆ ಒಳಕ್ಕಿಳಿಯಲು ಅವಕಾಶವಿರಲೆಂದೂ, ಇಲ್ಲೊಂದು ಹಗ್ಗವನ್ನು ಇಳಿಯಬಿಟ್ಟಿದ್ದಾಳೆಂದು" ಹೇಳಿಕೊಂಡು ಅದನ್ನು ಹಿಡಿದು ಕ್ಷಣಮಾತ್ರದಲ್ಲಿ ಮೇಲಕ್ಕೆ ಹತ್ತಿದನು ಮತ್ತು ತನ್ನ ಪತ್ನಿಯು ಮಲಗಿದ್ದ ಕೊಂಡಿಯ ಬಳಿಗೆ ಬಂದು, ಬಿಸಿಲು ಮಾಳಿಗೆಯಿಂದ ಉಪಾಯವಾಗಿ ಒಳಕ್ಕಿಳಿದು, ಮಂಚದಮೇಲೆ ಮಲಗಿದ್ದ ತನ್ನ ಮೋಹದ ಭಾರ್ಯೆಯನ್ನು ಕಂಡು ಪರವಶನಂತೆ ಮುಂದರಿದು ಹೋಗಿ, ದೇಹಸ್ಪರ್ಶ ಮಾಡಿದನು ನಟ್ಟಿರುಳಲ್ಲಿ, ಗಾಢನಿದ್ರೆಯಲ್ಲಿದ್ದ ಆಕೆಯು, ಯಾರೋ ಮುಟ್ಟಿದಂತಾಗಲು ಗಾಬರಿಪಟ್ಟು, ಒಡನೆ ಎಚ್ಚತ್ತು ನೋಡಲು:-ಪತಿ, ತುಲಾರಾಮ ! ಬಟ್ಟೆಗಳೆಲ್ಲಾ ತೊಯ್ದು-ಹರಿದು ಛಿದ್ರವಾಗಿವೆ ಕಾಲು ಗಳಿಂದ ಗಾಯವಾಗಿ ರಕ್ತವು ಸುರಿಯುತ್ತಿದೆ. ಮೈಯೆಲ್ಲಾ ನೆನೆದು ಚಳಿಯಿಂದ ನಡುಗುತ್ತಿದೆ. ಈ ವಿಚಿತ್ರ ಪ್ರಸಂಗವನ್ನು ಕಂಡು ಆಕೆಯು ಒಡನೆ ಎದ್ದು, ಬೇರೆ ವಸ್ತ್ರಗಳನ್ನು ಕೊಟ್ಟು, ತನ್ನ ಮಂಚದಮೇಲೆ ಕುಳ್ಳಿರಿಸಿ ಉಪಚರಿಸಿದಳು. ತುಲಾರಾಮನು,-" ಪ್ರಿಯೆ ನನ್ನೊಬ್ಬ ನನ್ನೇ ಬಿಟ್ಟು ನೀನು ಹೊರಟು ಬಂದುಬಿಡುವುದು ಉಚಿತವೆ ? ಪ್ರಾಣ ಮನೋಹರೆಯಾದ ನಿನ್ನನ್ನು ಬಿಟ್ಟು ನಾನು ಹೇಗೆ ಜೀವಿಸಲಿ ?" ಎಂದು ಅಂಗಲಾಚಿಕೊಂಡನು. ಅದಲ್ಲದೆ, ಆಕೆಯು ತನ್ನ ಮೇಲೆ ಮಮತೆಯಿಲ್ಲದೆ ಬಿಟ್ಟು ಬಂದರೂ ತಾನು ಬಿಟ್ಟಿರಲಾರದೆ, ಕಲ್ಲು ಮುಳ್ಳುಗಳು, ಕತ್ತಲೆ, ಮಳೆ ಗುಡುಗು ಮಿಂಚುಗಳು, ತುಂಬಿಹರಿವ ತೊರೆ ಒಂದನ್ನೂ ಲಕ್ಷ್ಯಮಾಡದೆ ಹೊರಟುಬಂದ ವೃತ್ತಾಂತವನ್ನು ಕಥೆಯಂತೆ ನಿರೂಪಿಸಿದನು ಅದನ್ನು ಕೇಳಿದ ಆ ಸಾಧ್ವಿಯು ಆಶ್ಚರ್ಯಪಡುತ್ತಾ, ಮನೆಯ ಒಳಗೆ ಇಳಿದ ಬಗೆ ಹೇಗೆಂದು ವಿಚಾರಿಸಿದಳು—"ನೀನು ಇಳಿಯಬಿಟ್ಟಿದ್ದ ಹಗ್ಗವನ್ನು ಹಿಡಿದು ಹತ್ತಿ ಒಳಕ್ಕಿಳಿದ"ನೆಂದನು. ಆಕೆಗೆ ಅತಿಶಯ ಕೌತುಕವನ್ನಿಸಿತು. ಒಡನೆ ಇಬ್ಬರೂ ಹೊರಟು ದೀಪದ ಬೆಳಕಿನಲ್ಲಿ ಹೊರಕ್ಕೆ ಬಂದು ಅದೇನೆಂದು ನೋಡಿದರು. ಆ ವೇಳೆಗೆ, ಭಾರವಾಗಿ ಮನುಷ್ಯನೊಬ್ಬನು ತನ್ನ ಮೇಲೆ ಭಾರವನ್ನು ಬಿಟ್ಟು ಹತ್ತಿದುದರಿಂದ ಹೀಚಿಹೋಗಿ, ಬಾಯಿಂದ ರಕ್ತವು ಸುರಿದು, ಸತ್ತು ನೇತಿದ್ದ ಒಂದು ಕರಿಯ ಘಟಸರ್ಪವು ದೃಷ್ಟಿಗೋಚರ ವಾಯಿತು. ಅದನ್ನು ಕಂಡು ಇಬ್ಬರೂ ಗಾಬರಿಪಟ್ಟರು. ಮನೆಯವ ರೆಲ್ಲರೂ ಆತನ ಚರ್ಯೆಗಳನ್ನು ಕಂಡು, ಆಶ್ಚರ್ಯಪಡಸಾಗಿದರು. ತುಲಾ

ರಾಮನಿಗೂ ತನ್ನ ಆ ದಿನದ ಸಾಹಸವನ್ನು ಕುರಿತು ಆಶ್ಚರ್ಯವೆನಿಸಿದಿರಲಿಲ್ಲ ಆಗ ಪತ್ನಿಯು ಆ ತನ್ನ ಭರ್ತನನ್ನು ಕುರಿತು, ಒಂದು ಮಾತನ್ನು ಹೇಳಿದಳು. ಅದನ್ನು ಮೂಲ ಪದಗಳಲ್ಲಿಯೇ ಕೊಡುತ್ತೇನೆ.

"ಲಾಜ ನ ಲಾಗತ ಆಪುಕೋ ದೌರೆ ಆ ಏಹು ಸಾಥ' |
ಧಿಕ' ಧಿಕ' ಐಸೇ ಪ್ರೇಮ ಕೋ ಕಹಾ ಕಹಹುಂ ವೈನಾಥ' ||
ಅಸ್ಥಿ ಚರಮ ಮಯ ದೇಹ ಮಮ ತಾ ಮೇ ಜೈಸೀ ಪ್ರೀತಿ |
ತೈಸೀ ಜೋ ಶ್ರೀರಾಮ ಮಹಂ ಹೋತ ನತೌ ಭವ ಭೀತಿ ||

"ಪ್ರಿಯರೇ ಇದೇನು ಕಾರ್ಯವು ! ಒಂದು ದಿನ ನಾನು ಅಗಲಿ ಬಂದುದನ್ನು ಸಹಿಸಲಾರದೆ, ಪ್ರಾಣಾಪಾಯಕರಗಳಾದ ಇಷ್ಟು ಕಷ್ಟಗಳನ್ನು ಅನುಭವಿಸಿಕೊಂಡು ಇಷ್ಟುದೂರ ಬರಬಹುದೆ ! ಒಂದುವೇಳೆ ಆ ಸರ್ಪವು ಕಚ್ಚಿಬಿಟ್ಟಿದ್ದರೆ ಪ್ರಾಣವೇ ಹೋಗಿಬಿಡುತ್ತಿದ್ದಿತಲ್ಲವೆ ? ರಕ್ತ ಮಾಂಸ ಎಲುಬು ಚರ್ಮ ಮಲಮೂತ್ರಾದಿಗಳಿಂದ ತುಂಬಿದ ನನ್ನ ಈ ಹೇಸಿ ದೇಹದ ವಿಷಯದಲ್ಲಿ ಇಷ್ಟು ಮಾತ್ರ ಪ್ರೀತಿಯಿಟ್ಟು ಲುಬ್ಧರಾಗಬಹುದೆ ? ಇಂತಹ ಪ್ರೇಮವನ್ನೇ ಜಾನಕೀಪತಿಯಾದ ಶ್ರೀರಾಮಚಂದ್ರಮೂರ್ತಿಯ ಪಾದಕಮಲಗಳಲ್ಲಿಟ್ಟರೆ ಜನ್ಮಸಾರ್ಥಕವಾಗಿ ಭವಭೀತಿಯೇ ನಾಶವಾಗಿ ಹೋಗಬಹುದಲ್ಲವೆ?" ಎಂದು ಹೇಳಿ, ಪಕ್ಕದ ಗೋಡೆಗೆ ತಗುಲಹಾಕಿದ್ದ ಶ್ರೀರಾಮಮೂರ್ತಿಯ ಪಟವನ್ನು ಕೈಯಿಂದ ತೋರಿಸಿದಳು. ಪತ್ನಿಯಾಡಿದ ಆ ಮಾತುಗಳು, ಆ ಸಂದರ್ಭ, ರಾಮಮೂರ್ತಿಯ ಚಿತ್ರ ದರ್ಶನ ಇವುಗಳೆಲ್ಲವೂ ಏಕಕಾಲದಲ್ಲಿ ಸೇರಲು ತುಲಾರಾಮನಿಗೆ ತನ್ನ ಕೃತ್ಯವು ಎಂತಹ ಹೇಯವಾದುದೆಂಬುದೂ, ಬುದ್ಧಿಯು ಎಷ್ಟು ಹೀನವಾದುದೆಂಬುದೂ, ವಿಚಾರವು ಎಷ್ಟು ಅಪ್ರಬುದ್ಧವಾದುದೆಂಬುದೂ ಗೋಚರವಾಯಿತು. ಒಂದಗೇ ಪತ್ನಿಯಿಂದ ತೋರಿಸಲ್ಪಟ್ಟ ಶ್ರೀ ರಾಮಚಂದ್ರನ ಚಿತ್ರವೂ ಸ್ಪಷ್ಟರೀತಿಯಿಂದ ದೃಗ್ಗೋಚರವಾಯಿತು. ಒಂದುಕಡೆ ರಕ್ತ ಮಜ್ಜೆ ಮಾಂಸ ಮಲಮೂತ್ರಮಯವಾದ ಪತ್ನಿಯ ಹೇಸಿ ಮನುಷ್ಯದೇಹ—ಮತ್ತೊಂದು ಕಡೆ ಸಚ್ಚಿದಾನಂದ ಮಯವೂ ಪರಬ್ರಹ್ಮಸಾಧಕವೂ ಆದ ಶ್ರೀ ರಾಮಚಂದ್ರಸ್ವಾಮಿಯ ಪವಿತ್ರಮೂರ್ತಿ ತುಲಾರಾಮನ ಮನಸ್ಸು ಒಡನೆ ವ್ಯತ್ಯಸ್ತವಾಯಿತು. ವಿಷಯವಾಸನೆಯು ದೂರವಾಯಿತು. ಬುದ್ಧಿಯು ನಿರ್ಮಲವಾಯಿತು ಇಂತು, ರಾಗಕ್ಕೆ ಕಾರಣವಾಗಿದ್ದ ತುಲಾರಾಮನ ವಿವಾಹವು ವಿರಾಗಕ್ಕೂ ಕಾರಣವಾಯಿತು.

## ಅಧ್ಯಾಯ ೩ "ಸಾಧನೆ—ಗ್ರಂಥರಚನೆ"

"ನನ್ನ ಮೇಲಿಟ್ಟಿರುವ ಅನಿರ್ವಾಚ್ಯಪ್ರೇಮವನ್ನೇ ಶ್ರೀರಾಮಚಂದ್ರನ ಪಾದಕಮಲಗಳಲ್ಲಿಟ್ಟರೆ ಜನ್ಮಸಾರ್ಥಕವಾಗುವುದಲ್ಲಾ!" ಎಂದ ತನ್ನ ಪತ್ನಿಯ ಮಾತುಗಳು ರಾಮಬಾಣಗಳಂತೆ ಕಿವಿಗಳನ್ನು ಪ್ರವೇಶಿಸಿ ತುಲಾರಾಮನನ್ನು ಜಾಗ್ರತಗೊಳಿಸಿದುವು ಪತ್ನಿಯಾಡಿದ ಮಾತು ನಿಶ್ಚಯವೆಂದು ಮನವರಿಕೆಯಾಯಿತು. ಒಡನೆ ಮೇಲಕ್ಕೆದ್ದು, ಪತ್ನಿಯನ್ನುದ್ದೇಶಿಸಿ ಕೈಮುಗಿದು—'ಬುದ್ಧಿಮತೀ, ನಿನ್ನ ಮಾತು ನಿಶ್ಚಯ, ನಾನು ಅಜ್ಞಾನಿಯಾಗಿ ಮಾರ್ಗ ತಪ್ಪಿ ಬಹುದೂರ ಬಂದುಬಿಟ್ಟಿದ್ದೆ ಹಾಗೆ ವಿವೇಕಹೀನನಾಗಿದ್ದ ನನ್ನನ್ನು ನೀನು, ನನ್ನ ಭಾಗದ ಗುರುವೂ ದೈವವೂ ಆಗಿ ಬಂದು ಎಚ್ಚರಗೊಳಿಸಿದೆ. ಸಾಧ್ವೀಮಣಿ ನಿನ್ನ ಈ ಉಪಕಾರವು ಅಸಾಮಾನ್ಯವಾದುದು. ಎಂದಿಗೂ ಮರೆಯಲಾರೆನು ನಿನಗೆ ಶುಭವಾಗಲಿ!' ಎಂದು ನುಡಿದು ಮನೆಯಿಂದ ಹೊರಹೊರಟನು. ಆಗ ಆತನ ಮುಖಭಾವವು ಕೋಪತಾಪಗಳೊಂದೂ ಇಲ್ಲದ ಗಂಭೀರವಾಗಿತ್ತು ಬುದ್ಧಿಯು ಅಂತರ್ಮುಖವಾಗಿದ್ದಂತೆ ತೋರುತ್ತಿದ್ದಿತು. ಕಣ್ಣುಬಿಟ್ಟು ಬಾಹ್ಯವಸ್ತುಗಳನ್ನು ನೋಡುತ್ತಿದ್ದನಾದರೂ ಮನಸ್ಸೆಲ್ಲವೂ ಯಾವುದೋ ಅವ್ಯಕ್ತ ವಿಚಾರದಲ್ಲಿ ಅಡಗಿಹೋಗಿದ್ದಿತು ತುಲಾರಾಮನು ಏಕಾಏಕಿ ಎದ್ದು ಹೊರಟುದನ್ನು ಕಂಡು ಬುದ್ಧಿಮತಿಯು ಗಾಬರಿಪಟ್ಟು,—'ನಾಥಾ, ನಾನೆಂದ ಮಾತುಗಳನ್ನು ವಿರೋಧವಾಗಿ ಅರ್ಥಮಾಡಿಕೊಳ್ಳಬಾರದು. ನಾನು ಲೋಕಸಾಮಾನ್ಯವಾಗಿ ಹೇಳಿದೆನಲ್ಲದೆ, ತಮ್ಮನ್ನು ಆಕ್ಷೇಪಿಸುವ ಉದ್ದೇಶದಿಂದಲ್ಲ! ಬನ್ನಿ, ಬಹು ಆಯಾಸಪಟ್ಟಿರುವಿರಿ. ವಿಶ್ರಮಿಸಿಕೊಳ್ಳಿ! ನಾಳಿನ ಪ್ರಾತಃಕಾಲವೇ ಭೋಜನತೀರಿಸಿಕೊಂಡು, ಇಲ್ಲಿಂದ ಇಬ್ಬರೂ ಹೊರಟುಬಿಡೋಣ. ಇನ್ನೆಂದಿಗೂ ತಮ್ಮ ಆಜ್ಞೆ ವಿನಹ ನಾನು ಮನೆಯಿಂದ ಹೊರಟುಬರುವುದಿಲ್ಲ. ಕೋಪಗೊಳ್ಳದಿರಿ!' ಎಂದು ಎಷ್ಟೋ ಬಗೆಯಿಂದ ಪ್ರಾರ್ಥಿಸಿಕೊಂಡಳು ಎರಡು ಕಾಲುಗಳನ್ನೂ ಹಿಡಿದುಕೊಂಡಳು. ಪಾದಗಳಮೇಲೆ ಮುಖವನ್ನಿಟ್ಟು ಕಣ್ಣೀರು ಸುರಿಸಿದಳು. ಆದರೂ ಏನೂ ಪ್ರಯೋಜನವಾಗಲಿಲ್ಲ. ತುಲಾರಾಮನಿಗೆ ಆಕೆಯಾಡಿದ ಮಾತುಗಳಲ್ಲೊಂದೂ ಕೇಳಿಸಿದಂತೆಯೇ ತೋರಲಿಲ್ಲ. ಹೊರಟವನು ನೇರವಾಗಿ ನಡೆದೇಬಿಟ್ಟನು, ಬುದ್ಧಿಮತಿಯು ತನ್ನ ಬುದ್ಧಿಗೇಡಿತನಕ್ಕಾಗಿ ತಲೆತಲೆ ಚಚ್ಚಿಕೊಂಡಳು. ನೆಲದಮೇಲೆ ಬಿದ್ದು ಹೊರಳಾಡಿದಳು. ಕೂಗಿ

ಕೊಂಡಳು. ಮನೆಯುವರೆಲ್ಲರೂ ಅನೇಕ ಬಗೆಯಿಂದ ಆತನನ್ನು ಹಿಂದಿರುಗಿಸ ಲೆತ್ನಿಸಿದರು. ಆದರೆ ತುಲಾರಾಮನೇನೋ ನಡೆದೇ ಬಿಟ್ಟನು.

ಮನುಷ್ಯನ ಜೀವಿತಯಾತ್ರೆಯು ಅದೃಶ್ಯವೂ ವಿಚಿತ್ರವೂ ಆದ ರೀತಿ ಯಲ್ಲಿ ಸಾಗುತ್ತಿರುವುದು! ಜೀವಿತದ ಮಾರ್ಗಗಳೆರಡುಂಟು ಪ್ರವೃತ್ತಿಪರ- ನಿವೃತ್ತಿಪರ ಪ್ರವೃತ್ತಿಪರಮಾರ್ಗದಲ್ಲಿ ನಡೆಯುತ್ತಿದ್ದವನು ಕಾಮಕ್ರೋಧ ಲೋಭಮೋಹಾದಿಗಳಲ್ಲಿ ತೊಳಲಿಬಳಲುತ್ತಾ ದಿನದಿನಕ್ಕೂ ಅವುಗಳ ಸಂಬಂಧ ದಲ್ಲೇ ಹೆಚ್ಚು ಹೆಚ್ಚು ಮಗ್ನನಾಗುತ್ತಾ ಇದ್ದುಬಿಡುವನು. ಅವುಗಳ ಅನುಭವವು ಪೂರ್ತಿಯಾಗದಿದ್ದರೆ, ಅವನಿಗೆ ಆ ಮಾರ್ಗದಿಂದ ಬಿಡುಗಡೆಯಾ ಗದು ಕೆಲವರು, ಅನೇಕಾನೇಕ ಜನ್ಮಗಳಲ್ಲ ಈ ಪ್ರವೃತ್ತಿಮಾರ್ಗದ ಬಹು ದೂರ ಪ್ರಯಾಣವನ್ನು ಮುಗಿಸಿಕೊಂಡು ಅಂತಿಮಸ್ಥಿತಿಗೆ ಬಂದಿರುವರು. ಆ ಮಾರ್ಗದ ಅಂತಿಮಸ್ಥಿತಿಯಲ್ಲಿ ಅವರಿದ್ದಾಗ, ಅವರ ಜೀವಿತಚರ್ಯೆ ಗಳಿಂದ ತೋರಿಬಂದ ಕಾಮಕ್ರೋಧ ಲೋಭ ಮದ ಮಾತ್ಸರ್ಯ ಮುಂತಾ ದುವುಗಳ ಅತ್ಯುತ್ಕಟಾವಸ್ಥೆಯು ಗೋಚರವಾಗುವುದು. ಅದೇ ಅವರ ಜೀ ವಿತ ಚಕ್ರದ ಪರಿವರ್ತನ ಸಮಯವು ಆ ಸಮಯದಲ್ಲಿ ನಮ್ಮ ಕಥಾನಾ ಯಕರ ಪತ್ನಿಯಂತೆ ಯಾರಾದರೂಬ್ಬರು ಕಾರಣರಾಗಿ ಒದಗುವರು ಆಗ ಹೊರಗಿನಿಂದ ಬೇಕಾಗಿರುವ ಸಹಾಯವು ಲೇಶಮಾತ್ರ! ಅಂತರ್ಯ ಅನು ಭವವು ಅಕ್ಷಯವಾಗಿ-ಪರಿಪೂರ್ಣವಾಗಿ ಇರುವುದು. ಎಣ್ಣೆಯಿಂದ ತುಂಬಿ ದ್ದ ದೀವಿಗೆಯ ಬತ್ತಿಯ ಕೊನೆಗೆ ಲೇಶಮಾತ್ರ ಅಗ್ನಿಯ ಸಂಬಂಧವಾದರೆ ಮುಂದೆ ದೀಪವು ಉರಿಯುತ್ತಾ ಹೋಗುವುದಲ್ಲವೆ? ಉರಿಯುವ ಶಕ್ತಿಯೂ ಅದಕ್ಕೆ ಬೇಕಾದ ವಸ್ತುತತ್ವವೂ ಎಣ್ಣೆಬತ್ತಿಗಳಲ್ಲಿ ಮೊದಲೇ ತುಂಬಿದ್ದರೂ ಹೊರಗಿನಿಂದ ಅಷ್ಟು ಮಾತ್ರ ಸಹಾಯವು ಬಂದು ಕೂಡದಿದ್ದರೆ, ಅದು ಹೇಗೆ ಉರಿಯತೊಡಗಲಾರದೋ ಹಾಗೆಯೇ, ನಮ್ಮ ಕಥಾನಾಯಕರಂತಹ ಅನೇಕ ಮಂದಿ ಅನುಭವಿಗಳ ಜೀವಿತದಲ್ಲೂ-ಅವರವರಿಗೆ ಸ್ವಾಭಾವಿಕವಾ ಗಿದ್ದ ಗುಣಗಳ ಉತ್ಕಟಾವಸ್ಥೆಯಲ್ಲಿ, ಕ್ಷಣಮಾತ್ರದಲ್ಲಿ ಇಂತಹ ವ್ಯತ್ಯಾಸ ವುಂಟಾಗಿದ. ಕಾಮಕ್ಕೆ ವಶರಾಗಿದ್ದ ನಮ್ಮ ಕಥಾನಾಯಕರು ಪತ್ನಿಯಿಂದ ಜಾಗ್ರತರಾದಂತೆಯೇ, ಲೋಭದಿಂದ ಅಂಧರಾಗಿದ್ದ ಪುರಂದರಗಡದ ಕೃಷ್ಣ ಪ್ಪನಾಯಕರೂ ತಮ್ಮ ಪತ್ನಿಯ ನುಡಿಯಿಂದ ಜಾಗ್ರತರಾಗಿ ತಮ್ಮ ಮಹ ದೈಶ್ವರ್ಯವನ್ನೆಲ್ಲ ದಾನಮಾಡಿ ಪುರಂದರದಾಸಶ್ರೇಷ್ಠರೆನ್ನಿಸಿಕೊಂಡರು. ಧನಲೋಭದಿಂದ ಕ್ರೋಧಪೂರಿತನಾಗಿ ಮಾರ್ಗಕಟ್ಟಿ ತಲೆ ಹೊಡೆಯುತ್ತಿದ್ದ

ಬೇಡನಿಗೆ-ಅವನ ಆ ಕೃತ್ಯದ ಅತ್ಯುತ್ಕಟಾವಸ್ಥೆಯಲ್ಲೇ ನಾರದರ ದರ್ಶನವಾಗಿ ಮಾರ್ಗದ ಪರಿವರ್ತನವಾದುದು ಭಾರತ ಯುದ್ಧದ ಪ್ರಾರಂಭಕಾಲದಲ್ಲಿ ಮೋಹವಶನಾಗಿದ್ದ ಅರ್ಜುನನು ಶ್ರೀ ಕೃಷ್ಣಪರಮಾತ್ಮನ ಉಪದೇಶದಿಂದ ತನ್ನ ಮಾರ್ಗವಿಂಥದೆಂದು ತಿಳಿದನು ಕ್ರೋಧಮದಮಾತ್ಸರ್ಯಾದಿಗುಣ ಗಳಿಂದ ಕೂಡಿದ್ದ ರಾವಣ ಹಿರಣ್ಯಕಶಿಪು ದುರ್ಯೋಧನ ಕಂಸ ಶಿಶುಪಾಲ ಮುಂತಾದವರ ಜೀವಿತಗಳಲ್ಲೂ, ಅವರವರಲ್ಲಿ ಕಂಡುಬಂದ ಗುಣಗಳು ಅತ್ಯುತ್ಕಟಸ್ಥಿತಿಗೆ ಬಂದುವೆಂದು ತೋರಿದಾಗ ಸೌಮ್ಯರೀತಿ ಯಿಂದ ಪರಿವರ್ತಿತವಾಗಲಿಲ್ಲವಾದರೂ, ಅವುಗಳ ಸಮಾನ ಬಲದ ವಿರೋಧ ಶಕ್ತಿಗಳು ಎದುರಾಗಿ ಆಯಾ ದೇಹಪಾತ್ರೆಗಳನ್ನೇ ಧ್ವಂಸಮಾಡಿದುವು ಇಂತಹ ಸಂಭವಗಳು ಅನೇಕರ ಜೀವಿತಗಳಲ್ಲಿ ಒದಗುತ್ತವೆಂಬುದನ್ನು ಲೋಕಚರಿತ್ರೆಯನ್ನು ಕಣ್ಣಿಟ್ಟುನೋಡಿ ತಿಳಿಯಬಹುದು

ಎಂತೂ ಮನೆಯಿಂದ ಹೊರಟ ತುಲಾರಾಮನು, ಎಲ್ಲಿಗೆ ಹೋಗ ಬೇಕೆಂಬ ವಿಚಾರವನ್ನರಿಯದೆ, ಕಾಲು ಕಣ್ಣುಗಳು ನಡೆಸಿದ ಮಾರ್ಗದಲ್ಲಿ ಸಾಗಿ, ಮೂರನೆಯ ದಿನದ ಮಧ್ಯಾಹ್ನಕಾಲಕ್ಕೆ ಗಂಗಾತೀರದ ಒಂದಾ ನೊಂದು ಅರಣ್ಯಪ್ರದೇಶಕ್ಕೆ ಬಂದನು. ಕಾಲುಗಳು ಮಾರ್ಗಾಯಾಸ ದಿಂದ ಸೋತುವು ದೇಹದಲ್ಲಿ ಹಸಿವು ಬಾಯಾರಿಕೆಗಳಿಂದ ಅತಿಶಯ ಬಳಲಿಕೆ ತೋರಿತು ಸುತ್ತಲೂ ನೋಡಿಕೊಳ್ಳಲು ಹತ್ತಿರದಲ್ಲೆ ಇದ್ದ ಒಂದು ಮಂಟಪವು ಕಣ್ಣಿಗೆ ಕಾಣಿಸಿತು, ಒಡನೆ ಅಲ್ಲಿಗೆ ಹೋಗಿ ನೋಡಲು, ಅದು ವಾಸಯೋಗ್ಯವಾಗಿದ್ದು—ಚಳಿಗಾಳಿ ಮಳೆಬಿಸಿಲುಗಳಿಂದ ತಪ್ಪಿಸಿಕೊಂಡು ಸುರಕ್ಷಿತವಾಗಿರಲು ಯೋಗ್ಯಸ್ಥಳವೆಂದು ಬೋಧವಾಯಿತು. ತುಲಾ ರಾಮನು ನಿರ್ಬಾಧಕವಾಗಿದ್ದ ಆ ನಿರ್ಜನಪ್ರದೇಶದಲ್ಲಿ ನಿಂತು ಶ್ರೀ ರಾಮ ಚಂದ್ರಮೂರ್ತಿಯ ಪಾದಾರವಿಂದಗಳ ಧ್ಯಾನಾಸಕ್ತನಾದನು ಜನ ಗಳ ಗಲಭೆಯಿಲ್ಲದೆ, ಲೌಕಿಕ ವಿಚಾರಗಳ ಪ್ರವೇಶಕ್ಕೆ ಆಸ್ಪದವಿಲ್ಲದೆ, ನಿರ್ಜನವೂ ಶಾಂತವೂ ಪವಿತ್ರವೂ ಆದ ಆ ಸ್ಥಳವು ತುಲಾರಾಮನು ತನ್ನ ಚದುರಿದ ಮನಸ್ಸನ್ನೂ ಮತ್ತು ಮಾರ್ಗತಪ್ಪಿ ಓಡುತ್ತಿದ್ದ ಇಂದ್ರಿಯಾಶ್ವ ಗಳನ್ನೂ ಒಂದು ಸ್ತಿಮಿತಕ್ಕೆ ತರಲು ಯೋಗ್ಯವಾದ ಸ್ಥಳವಾಗಿದ್ದಿತು. ಪವಿತ್ರವಾದ ಗಂಗಾತೀರ್ಥದಲ್ಲಿ ತ್ರಿಕಾಲಸ್ನಾನಮಾಡಿ ನಿರ್ಮಲ ವಾತಾ ವರಣವುಳ್ಳ ಆ ಸ್ಥಳದಲ್ಲಿ ಮರಗಳ ಕೆಳಗೆ ನಿರಾತಂಕನಾಗಿ ಕುಳಿತು ತನ್ನ ಇಷ್ಟದೈವವನ್ನು ಮನಸಾರೆ ಪ್ರಾರ್ಥಿಸುತ್ತಾ ಶ್ರೀ ರಾಮನಾಮ ಪಾರಾ

ಯಣವನ್ನು ಅಖಂಡವಾಗಿ ಮಾಡುತ್ತಾ ತುಲಾರಾಮನು ಅಮಿತಾನಂದ ವನ್ನು ಅನುಭವಿಸಿದನು. ಹೀಗೆ ಒಂದೆರಡು ದಿನಗಳಲ್ಲ-ಹನ್ನೆರಡು ವರ್ಷ ಕಾಲ ಕಳೆಯಿತು !

ನಿಶ್ಚಂಚಲತೆಯಿಂದ ಮಾಡುತ್ತಿದ್ದ ಆ ಬಗೆಯ ತಪಸ್ಸಿಗೆ ಫಲವು ಒಂದು ವಿಚಿತ್ರರೀತಿಯಿಂದ ಪ್ರಾಪ್ತಿಸಿತು. ತುಲಾರಾಮನು ನಿತ್ಯದ ಶೌಚ ವಿಧಿ (ಮಲ ವಿಸರ್ಜನೆ)ಯನ್ನು ತೀರಿಸಿಕೊಂಡು ಒರುತ್ತಾ ಪಾತ್ರೆಯಲ್ಲಿ ಮಿಕ್ಕಿದ್ದ ನೀರನ್ನು ಅಲ್ಲೊಂದು ಮಾವಿನಮರದ ಬುಡಕ್ಕೆ ಹೊಯ್ಯುತ್ತಿದ್ದುದು ಪದ್ಧತಿಯಾಗಿತ್ತು. ಅದನ್ನು ಆತನು ಉದ್ದೇಶಪೂರ್ವಕವಾಗಿ ಮಾಡುತ್ತಿದ್ದನೆಂದಲ್ಲ, ಏನೋ ಮೊದಲುದಿನ ಮಾಡಿದಂತೆಯೇ, ಎರಡನೆಯ ಮೂರನೆಯ ನಾಲ್ಕನೆಯ ದಿನಗಳಲ್ಲೂ ನಡೆದು, ಕೊನೆಗೆ ಅದೇ ಒಂದು ಪದ್ಧತಿಯಾಗಿ ಹೋಯಿತು. ಹೀಗಾಗಿ ಹನ್ನೆರಡು ವರ್ಷಗಳ ಕಾಲವು ಕಳೆದು ಮುಂದೆ ಒಂದಾನೊಂದು ದಿನ ಆತನು ಹಾಗೆಯೇ ನೀರು ಹಾಕಿ ಹೊರಡಲನುವಾಗಲು-ಆ ಮರದಿಂದ ಒಂದು ಭೂತವು ಹೊರಟು ಬಂದು ಎದುರಿಗೆ ನಿಂತಿತು. ಅದನ್ನು ಕಂಡು ಆ ಸಾಧುವರ್ಯನು 'ನೀನಾರು ?' ಎಂದು ಪ್ರಶ್ನಿಸಿದನು ಆಗಲಾ ಭೂತವು, ಮನುಷ್ಯ ಭಾಷೆಯಿಂದ,-"ಅಯ್ಯಾ ನಾನೊಬ್ಬ ಬ್ರಹ್ಮರಾಕ್ಷಸನು ಈ ಮರವನ್ನು ಆಶ್ರಯಿಸಿ ಬಹುದಿನಗಳಿಂದ ಬಳಲುತ್ತಿದ್ದೇನೆ ಪಿಶಾಚಜನ್ಮದಲ್ಲಿರುವ ನನಗೆ ಬಾವಿ ಕೆರೆ ನದಿಗಳನ್ನು ಮುಟ್ಟಿ ಜಲಪಾನಮಾಡುವ ಯೋಗ್ಯತೆಯಿಲ್ಲ. ಹೀಗಿದ್ದು ಬಾಯಾರಿಕೆಯಿಂದ ಕಂಗೆಟ್ಟಿದ್ದ ನನಗೆ, ಪುಣ್ಯಾತ್ಮನಾದ ನೀನು ಹನ್ನೆರಡು ವರ್ಷಗಳಿಂದ ಅಖಂಡ ಜಲಪಾನಮಾಡಿಸಿ ಮಹೋಪಕಾರಮಾಡಿದ್ದೀಯೆ ! ಅದಕ್ಕೆ ಯಾವ ಒಗೆಯ ಪ್ರತ್ಯುಪಕಾರಮಾಡಿ ನನ್ನ ಕೃತಜ್ಞತೆಯನ್ನು ತೋರಿಸಿಕೊಳ್ಳಲಿ ! ಆಜ್ಞಾಪಿಸು. ಅದನ್ನು ಮಾಡಲು ನಾನು ಸಿದ್ಧನಿದ್ದೇನೆ" ಎಂದಿತು ಬ್ರಹ್ಮರಾಕ್ಷಸನ ಆ ಮಾತನ್ನು ಕೇಳಿದ ತುಲಾರಾಮನು:-'ಅಯ್ಯಾ ಭೂತವೇ ನನಗೆ ಶ್ರೀರಾಮಚಂದ್ರಸ್ವಾಮಿಯ ಪಾದದರ್ಶನಮಾಡಬೇಕೆಂಬ ಆಸೆಯು ಅತಿಶಯವಾಗಿದೆ ನಿನ್ನಿಂದ ಸಾಧ್ಯವಿದ್ದರೆ ಆ ಕೆಲಸ ಮಾಡಿಸು' ಎಂದನು. 'ಶ್ರೀರಾಮಚಂದ್ರ'ನೆಂಬ ಮಾತು ಕಿವಿಗೆ ಬಿದ್ದೊಡನೆಯೇ ಆ ಭೂತವು ಗಡಗಡನೆ ನಡುಗಲಾರಂಭಿಸಿ,-'ಬ್ರಾಹ್ಮಣೋತ್ತಮಾ ಆ ಪವಿತ್ರನಾಮದ ಶ್ರವಣವು ಈ ನನ್ನ ಪಾಪಿದೇಹವನ್ನು ದಹಿಸುತ್ತಿದೆ, ನೋಡು. ಆ ಪಾವನಮೂರ್ತಿಯ

ದರ್ಶನಮಾಡಿಸುವ ಯೋಗ್ಯತೆಯು ನನಗಿಲ್ಲ ಆದರೆ ಆ ಭಾಗದಲ್ಲಿ ಒಂದು ಉಪಾಯವನ್ನು ಹೇಳುವೆನು ಕೇಳು ಇಲ್ಲಿಗೆ ಸಮೀಪವಾಗಿರುವ ಗ್ರಾಮದ ಅಮುಕಮಂದಿರದಲ್ಲಿ ನಿತ್ಯವೂ ರಾಮಾಯಣ ಪುರಾಣವು ನಡೆಯುತ್ತಿದೆ ಆ ಸ್ಥಳಕ್ಕೆ ಮಾಸಿದ ಹರುಕು ಹಳೆಯ ವಸ್ತ್ರಗಳನ್ನುಟ್ಟ ಒಬ್ಬ ಹಣ್ಣುಹಣ್ಣು ಮುದುಕನು ಬರುತ್ತಾನೆ ಆತನು ಎಲ್ಲರಿಗಿಂತಲೂ ಮುಂಚಿತವಾಗಿ ಬಂದು, ಎಲ್ಲರೂ ಹೋದಮೇಲೆ ಹೊರಟುಹೋಗು ತ್ತಾನೆ. ಆತನು ಶ್ರೀ ರಾಮದೂತನಾದ ಹನುಮಂತನೆಂದು ತಿಳಿ ಆತ ನನ್ನು ಗುರುತಿಸಿ ಆಶ್ರಯಿಸಿದೆಯಾದರೆ, ನಿನ್ನ ಕಾರ್ಯವಾಗುವುದು'' ಎಂದು ಹೇಳಿ ಅದೃಶ್ಯವಾಯಿತು.

ಅಕಸ್ಮಾತ್ತಾಗಿ ಪ್ರಾಪ್ತವಾದ ಈ ಸಲಹೆಯಿಂದ ಉತ್ತೇಜಿತನಾದ ತುಲಾರಾಮನು ಅಲ್ಲಿಂದ ಹೊರಟು ಪುರಾಣವಾಗುತ್ತಿದ್ದ ಆ ಗ್ರಾಮವನ್ನು ಕುರಿತು ಪ್ರಯಾಣಮಾಡಿದನು. ಅಲ್ಲಿ ನೋಡುವಲ್ಲಿ, ಆಬ್ರಹ್ಮ ರಾಕ್ಷಸನು ಹೇಳಿದಂತೆಯೇ, ಅತಿವೃದ್ಧನೊಬ್ಬನು, ಹರುಕು ಹಳೆಯಬಟ್ಟೆಗಳನ್ನುಟ್ಟು ಒಂದು ಮೂಲೆಯಲ್ಲಿ ಕೂತಿದ್ದುದು ಕಾಣಿಸಿತು. ಪುರಾಣವು ಮುಗಿಯುವವರೆಗೆ ಒಂದೆಡೆಯಲ್ಲಿ ಕುಳಿತು ಕೇಳುತ್ತಿದ್ದು ಎಲ್ಲರೂ ಹೊರಟುಹೋದ ನಂತರ ಮೇಲಕ್ಕೆದ್ದು ಆತನ ಬೆನ್ನುಹತ್ತಿ ಹೋದನು ಊರು ದಾಟುವವರೆಗೆ ಮೆಲ್ಲಮೆಲ್ಲನೆ ನಡೆಯುತ್ತಿದ್ದ ಆ ಮುದುಕನು ಊರ ಹೊರಕ್ಕೆ ಬಂದೊಡನೆಯೇ ಮಾರಿಗೊಂದು ಕಾಲನ್ನಿಡುತ್ತಾ ವೇಗವಾಗಿ ನಡೆಯತೊಡಗಿದನು ತುಲಾರಾಮನು ಓಡಿಹೋಗಿ, ಆತನ ಆ ಜೀರ್ಣವಸ್ತ್ರವನ್ನು ಹಿಡಿದುಕೊಂಡು ಪಾದಕ್ಕೆಬಿದ್ದು ರಕ್ಷಿಸಬೇಕೆಂದು ಬೇಡಿದನು ಆಗಲಾ ವೃದ್ಧನು ಗಾಬರಿಪಟ್ಟವನಂತೆ–'ಯಾರು ಯಾರು, ಯಾರು ನೀನು? ನಡ ನನ್ನನ್ನೇಕೆ ತೊಂದರೆ ಪಡಿಸುವೆ ? ಎಂದು ಕೊಡಹಿಕೊಂಡು ಮತ್ತೂ ವೇಗವಾಗಿ ನಡೆಯತೊಡಗಿದನು ಆದರೆ ತುಲಾರಾಮನು ಬಿಡದೆ ಓಡಿಹೋಗಿ,–'ಪ್ರಭೋ ನೀನೇ ಶ್ರೀರಾಮದೂತ ಆಂಜನೇಯನೆಂದು ದೃಢವಾಗಿ ನಂಬಿದ್ದೇನೆ. ನನಗೆ ಶ್ರೀರಾಮನ ಪಾದ ದರ್ಶನಮಾಡಿಸಬೇಕು,' ಎಂದು ಎರಡುಪಾದಗಳನ್ನೂ ಹಿಡಿದುಕೊಂಡನು. ಆ ಮಾತನ್ನು ಕೇಳಿದೊಡನೆಯೇ ಆ ವೃದ್ಧನು ಪುನಃ ಯಾವಮಾತನ್ನೂ ಆಡದೆ, ಹಳ್ಳದಿಣ್ಣೆಗಳೆನ್ನದೆ ಕಲ್ಲು ಮುಳ್ಳುಗಳೆನ್ನದೆ ಓಡತೊಡಗಿದನು. ಆತನೊಂದಿಗೇ ಬಿಡದೆ ಓಡುತ್ತಿದ್ದ ತುಲಾರಾಮನಿಗೆ ಮೈಕೈಕಾಲು

ಗಳಿಲ್ಲಾ ತೆರದು ರಕ್ತವು ಸುರಿಯುತೊಡಗಿತು. ಸಾಲದುದಕ್ಕೆ ಆ ಮುದು ಕನು ಹೊಡೆದನು, ಪರಚಿದನು. ಕಚ್ಚಲು ಬಂದನು ಏನಾದರೂ ತುಲಾ ರಾಮನು ಹಿಡಿದಿದ್ದ ಆತನ ವಸ್ತ್ರದ ಸೆರಗನ್ನು ಬಿಡಲಿಲ್ಲ ಕೊನೆಗೆ ಆತನ ಧೈರ್ಯವನ್ನೂ ದೃಢಭಕ್ತಿಯನ್ನೂ, ಚಿತ್ತಸ್ಥೈರ್ಯವನ್ನೂ ಕಂಡು ಮಾರು ತಿಗೆ ಸಂತೋಷವಾಯಿತು. ಹೀಗೆ ಜನಸಂದಣಿಯಿಂದ ಬಹುದೂರಕ್ಕೆ ಹೋದಮೇಲೆ ಅಲ್ಲೊಂದು ಸ್ಥಳದಲ್ಲಿ ಕುಳಿತು, ಆತನನ್ನೂ ಒಳಿಯಲ್ಲಿ ಕುಳ್ಳಿರಿಸಿಕೊಂಡು,-"ವತ್ಸಾ ಬೆದರಬೇಡ. ನೀನು ಇಲ್ಲಿಂದ ಚಿತ್ರಕೂಟಕ್ಕೆ ಹೋಗಿ, ಅಲ್ಲಿ ಶ್ರೀರಾಮದರ್ಶನವನ್ನು ನಿರೀಕ್ಷಿಸಿಕೊಂಡಿರು" ಎಂದು ಹೇಳಿ, ಆಂಜನೇಯನು ಅದೃಶ್ಯನಾದನು.

ರಾಮದೂತನ ಆಜ್ಞಾನುಸಾರ ತುಲಾರಾಮನು ರಾಮದರ್ಶನಾ ಕಾಂಕ್ಷಿಯಾಗಿ ಚಿತ್ರಕೂಟಕ್ಕೆ ಪ್ರಯಾಣಮಾಡಿ ಅಲ್ಲಿ ವಾಸವಾಗಿದ್ದನು. ಒಂದಾನೊಂದು ದಿನ ಆಶ್ರಮದ ಹೊರಗಿನ ಒಂದು ಶಿಲಾಪೀಠದ ಮೇಲ ರಾಮಧ್ಯಾನತತ್ಪರನಾಗಿ ಕುಳಿತಿದ್ದ ತುಲಾರಾಮನಿಗೆ, ದೂರದಲ್ಲಿ ಹಾರಿ ಹಾರಿಕೊಂಡು ಓಡುತ್ತಿದ್ದ ಒಂದು ಹರಿಣವು ದೃಷ್ಟಿಗೋಚರವಾಯಿತು ಅದರ ನಡಿಗೆಯ ಅಂದಚಂದಗಳು ಆತನ ಮನಸ್ಸನ್ನು ಆಕರ್ಷಿಸಿದುವು ದೃಷ್ಟಿಯೂ ಅದರ ನಡಿಗೆಯೊಂದಿಗೇ ಸಾಗಿತ್ತು. ಅಷ್ಟರಲ್ಲಿ, ಅದರ ಹಿಂದ ಉನ್ನತವಾದ ಕುದುರೆಗಳನ್ನೇರಿದ ಗೌರವರ್ಣದ ಸುಂದರ ರಾಜಕುಮಾರ ರಿಬ್ಬರು ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದು. ಆ ಹರಿಣವನ್ನು ಬೆಂಬತ್ತಿ ಹೋಗುತ್ತಿದ್ದುದೂ ಕಾಣಿಸಿತು. ಅವರ ದಿವ್ಯಸುಂದರವಿಗ್ರಹ-ಅಪೂರ್ವ ದೇಹಕಾಂತಿ ಮುಂತಾದುವುಗಳನ್ನು ಕಂಡು ಆಶ್ಚರ್ಯಗೊಂಡನಾದರೂ ತುಲಾರಾಮನು ಅವರು ಯಾರೆಂದು ತಿಳಿಯಲಾರದೆಹೋದನು. ಅವರು ಕಣ್ಮರೆಯಾಗಿ ಹೋದ ಸ್ವಲ್ಪಹೊತ್ತಿನೊಳಗಾಗಿಯೇ ವೃದ್ಧರೂಪದ ಹನು ಮಾನನು ಪ್ರತ್ಯಕ್ಷವಾಗಿ—'ಏನು ವಿಶೇಷ—ಈಗ ಏನಾದರೂ ನೋಡಿ ದೆಯೋ ?" ಎಂದು ಪ್ರಶ್ನಿಸಿದನು ತುಲಾರಾಮನು-'ಹೌದು, ನೋಡಿದೆ. ಒಂದು ಹರಿಣವನ್ನು ಬೆನ್ನಟ್ಟಿ ಅಶ್ವಾರೂಢವಾಗಿ ಬಂದ ಧನುರ್ಧಾರಿಗಳಾ ಗಿದ್ದ ಇಬ್ಬರು ಸುಂದರ ರಾಜಕುಮಾರರನ್ನು ನೋಡಿದೆ. ಅವರಾರು ?" ಎಂದನು. ಹನುಮಾನನು-'ಅವರೇ ಅವರೇ-ರಾಮಲಕ್ಷ್ಮಣರು' ಎಂದನು.

ತನ್ನ ಚರ್ಮಚಕ್ಷುಗಳಿಗೆ ರಾಮದರ್ಶನವಾಯಿತೆಂಬ ಆ ಮಾತನ್ನು ಕೇಳಿ ಮಾತನೆಯೇ ತುಲಾರಾಮನ ನೇತ್ರಗಳಿಂದ ಆನಂದಬಾಷ್ಪಗಳುದುರಿದುವು. ಅವರ ದಿವ್ಯಮನೋಹರರೂಪಚಿತ್ರವು ಆತನ ಮನಸ್ಸೆಂಬ ಭಿತ್ತಿಯಲ್ಲಿ ಸ್ಥಿರರೂಪದಿಂದ ಚಿತ್ರಿತವಾಗಿ ನಿಂತುಹೋಯಿತು.



## ಅಧ್ಯಾಯ ೪ "ಗ್ರಂಥರಚನೆ"

ಕರ್ಮ ಜ್ಞಾನ ಮತ್ತು ಉಪಾಸನಾ ಅಥವ ಭಕ್ತಿ ಈ ಮೂರು ಅಂಗಗಳು ಅತಿ ಪ್ರಾಚೀನಕಾಲದಿಂದ ಭಾರತೀಯ ಜನಾಂಗ ಜೀವನವನ್ನು ರೂಪಿಸುತ್ತಾ ಬಂದಿವೆ. ಮಾನವ ಜೀವನದ ವರ್ಣನೆಯು ಈ ಮೂರರ ಮಿಲನದಿಂದಲ್ಲದೆ ಸಂಪೂರ್ಣತೆಯನ್ನು ಹೊಂದಲರಿಯದು. ಲೋಕದ ಮತಗಳಲ್ಲಿ ಒಂದು ಈ ಮೂರರಲ್ಲೊಂದರ ಆಧಿಕ್ಯತೆಯನ್ನುಂಟಾಗಿದ್ದರೆ, ಮತ್ತೊಂದು ಬೇರೊಂದರ ಆಧಿಕ್ಯತೆಯನ್ನುಂಟಾಗಿರುವುದು. ಭಾರತದೇಶದಲ್ಲಿ ಯಾವ ಕಾಲದಲ್ಲಿ ಈ ಮೂರರಲ್ಲೊಂದರ ಅಭಾವವು ತೋರಿಬಂದಿತೆಂದರೆ, ಅದನ್ನು ಪುನಃ ಸ್ಥಾಪಿಸಿ, ಜನಮನವನ್ನು ಆಯಾ ಕಾಲದ ಸ್ಥಿತಿಗತಿಗಳಿಗೆ ತಕ್ಕಂತೆ ರೂಪಿಸುವುದಕ್ಕಾಗಿ ಒಬ್ಬಾನೊಬ್ಬ ಮಹಾತ್ಮನು ಅವತರಿಸುತ್ತಿದ್ದಾನೆ. ಒಂದಾನೊಂದು ಕಾಲದಲ್ಲಿ ಕರ್ಮಕಾಂಡವು ಪ್ರಬಲವಾಗಿರಲು ಶ್ರೀ ಯಾಜ್ಞವಲ್ಕ್ಯ ಮಹರ್ಷಿಗಳು ಉದ್ಭವಿಸಿ ಉಪನಿಷದ್‌ಗಳ ದ್ವಾರಾ ಜ್ಞಾನಕಾಂಡದ ಶ್ರೇಷ್ಠತೆಯನ್ನು ಪ್ರಚಾರಗೊಳಿಸಿದರು. ಅದು ಆಗಿನ ಜನಕಾದಿ ರಾಜರ್ಷಿಗಳಿಂದ ಅಂಗೀಕೃತವಾಗಿ ಜನಾಂಗದಿಂದ ಪುರಸ್ಕರಿಸಲ್ಪಟ್ಟಿತು. ಕೆಲಕಾಲ ಕರ್ಮಕಾಂಡದ ಪ್ರತಿಷ್ಠೆಯು ತಗ್ಗಿತು. ಮುಂದೆ ಕಾಲಕ್ರಮದಲ್ಲಿ ಅದು ಪುನಃ ಪ್ರಬಲಿಸಿ ಅರ್ಥವಿಲ್ಲದ ಪಶುಬಲಿ ಮುಂತಾದುವುಗಳೇ ಯಜ್ಞಯಾಗಾದಿ ಕ್ರಿಯೆಗಳೆಂಬ ಭ್ರಾಂತಿಯು ಜನಮನವನ್ನು ಮುಸುಕಿದ್ದಾಗ ಭಗವಾನ್ ಬುದ್ಧದೇವನು ಅವತರಿಸಿ ಜ್ಞಾನವೈರಾಗ್ಯ ಬೋಧಕವಾದ ಬೌದ್ಧಧರ್ಮವನ್ನು ಬೋಧಿಸಿದನು. ಆದರೆ ಆ ಧರ್ಮದಲ್ಲಿ

ಉಪಾಸನೆಯ ಅಭಾವವಿದ್ದುದರಿಂದ ಕುಮಾರಿಲಭಟ್ಟನೇ ಮುಂತಾದ ಕೆಲಮಂದಿ ಮಹನೀಯರು ಅದನ್ನು ಖಂಡಿಸಿ-ಮಾನವನ ಜೀವನಸಾರ್ಥಕ್ಯಕ್ಕೆ ಅರ್ಥಾತ್ ಮುಕ್ತಿಗೆ ಕರ್ಮಾಚರಣೆಯೇ ಅವಶ್ಯಕವೆಂದು ಸಾರಿದರು. ಆದರೆ ಜನಾಂಗದ ಮನಸ್ಸನ್ನು ತೃಪ್ತಿಗೊಳಿಸಲು ಅದೊಂದು ಮಾತ್ರವೇ ಸಾಕಾಗಲಿಲ್ಲ. ಆಗ ಶ್ರೀ ಶಂಕರಾಚಾರ್ಯರು ಉದ್ಭವಿಸಿ ಜ್ಞಾನದಿಂದಲೇ ಮುಕ್ತಿಯುಂಟೆಂದೂ ಮುಕ್ತಿಸಾಧನಸಾಮಗ್ರಿಗಳಲ್ಲಿ ಭಕ್ತಿಯೇ ಶ್ರೇಷ್ಠವಾದುದೆಂದೂ ಸಾರಿದರು. ಆದರೆ ಶಾಂಕರತತ್ತ್ವದ ಒಲವು ಹೆಚ್ಚಾಗಿ ಜ್ಞಾನದ ಕಡೆಗಿದ್ದುದರಿಂದ, ಅವರಿಂದ ಬೋಧಿತವಾದ ಉಪಾಸನಾ (ಭಕ್ತಿ) ತತ್ತ್ವಕ್ಕೆ ಗೊತ್ತಾದ ಒಂದು ಆಶ್ರಯ-ಅವಲಂಬನವು ದೊರೆಯದಿರಲು ಜನಮನವು ಪುನಃ ಚಿಂತೆಗೊಳಗಾಯಿತು. ಹಾಗೆ ಉತ್ಪನ್ನವಾದ ಭಕ್ತಿತತ್ತ್ವಕ್ಕೆ ಪ್ರಾಧಾನ್ಯತೆಯನ್ನುಂಟುಮಾಡಿ, ಅದಕ್ಕೊಂದು ಗೊತ್ತಾದ ಅವಲಂಬನವನ್ನುಂಟುಮಾಡಿ ಜಗತ್ತನ್ನು ಉದ್ಧರಿಸುವ ಮಹತ್ಕಾರ್ಯಕ್ಕಾಗಿ ಶ್ರೀರಾಮಾನುಜಾಚಾರ್ಯರವರು ಅವತರಿಸಿದರು. ಆದರೆ ಲೋಕದಲ್ಲಿ ಮನುಷ್ಯನಾಗಿ ಹುಟ್ಟಿದವನು, ಬೆಳೆದು ಬಾಲ್ಯ ಯೌವನ ಕೌಮಾರ ವೃದ್ಧಾಪ್ಯಾದಿ ಅವಸ್ಥೆಗಳನ್ನು ಅನುಭವಿಸಿ ಪ್ರಾಪಂಚಿಕನಾಗಿ ಮಾಡಬೇಕಾದ ಸಮಸ್ತ ಕರ್ತವ್ಯಗಳನ್ನೂ ನೆರವೇರಿಸಬೇಕಿದ್ದರೆ, ಲೋಕಜೀವಿತವು ಸಾಗಬೇಕಾದ್ದರಿಂದ, ಪ್ರಪಂಚಕ್ಕೆ ಕೇವಲ ಮುಕ್ತಿಗೆಂದು ಜ್ಞಾನಮಾರ್ಗವೇ ಆಗಲಿ ಅಥವಾ ಉಪಾಸನಾ ಮಾರ್ಗವೇ ಆಗಲಿ ಸಾಕಾಗಲಿಲ್ಲ. ನಿಷ್ಕಾಮಭಾವದಿಂದ ಲೌಕಿಕಧರ್ಮದಲ್ಲಿ ತೊಡಗಬೇಕಾದ ಆವಶ್ಯಕತೆಯೂ ತೋರಿತು. ಅದನ್ನು, ಎಂದರೆ ಲೋಕಯಾತ್ರೆಯನ್ನು ಭಗವತ್ಸೇವೆಯೆಂಬ ನಿಷ್ಕಾಮಭಾವದಿಂದ ಸಾಗಿಸಬೇಕಾದ ಜ್ಞಾನಯುಕ್ತ ಭಕ್ತಿಪೂರ್ವಕವಾದ ಕರ್ಮಮಾರ್ಗವನ್ನು ಶ್ರೀಮದಾನಂದತೀರ್ಥ ಭಗವತ್ಪಾದರು (ಶ್ರೀ ಮಧ್ವಾಚಾರ್ಯರವರು) ಬೋಧಿಸಿದರು. ಇವುಗಳಲ್ಲೊಂದೊಂದೂ ಭಾರತೀಯ ಜನಮನವನ್ನಾಶ್ರಯಿಸಿ ವಿಶೇಷರೀತಿಯಿಂದ ಪ್ರಚಾರದಲ್ಲಿವೆ. ಇದಂತಿರಲಿ. ಮೇಲ್ಕಂಡಂತೆ ಶ್ರೀ ರಾಮಾನುಜಾಚಾರ್ಯರವರು ಉಜ್ಜೀವನಗೊಳಿಸಿದ ವೈಷ್ಣವಭಕ್ತಿಪಂಥವು ದಕ್ಷಿಣದೇಶದಲ್ಲಿ ಮಾತ್ರವಲ್ಲದೆ, ಉತ್ತರದೇಶದಲ್ಲೂ ವ್ಯಾಪಿಸಿತು. ಉತ್ತರದೇಶದಲ್ಲಿ ಅದನ್ನು ವಿಶೇಷರೀತಿಯಿಂದ ಪ್ರಸಿದ್ಧಗೊಳಿಸಿದವರು ಶ್ರೀರಾಘವಾನಂದರ ಕರಕಮಲ

ಸಂಜಾತರಾದ ಶ್ರೀ ರಾಮಾನಂದರು. ಈ ಮಹರ್ಷಿಯರು ಕ್ರಿ.ಶ. ೧೩-೧೪ನೆಯ ಶತಮಾನಗಳಲ್ಲಿ ಜೀವಿಸಿದ್ದರು. ಇವರ ಶಿಷ್ಯವೃಂದದಲ್ಲಿ ಕಬೀರ ಮುಂತಾದ ಸಾಧುವರ್ಯರೂ ಸೇರಿದ್ದರು. ಶ್ರೀ ಸುರಸುರಾನಂದ, ಶ್ರೀ ಮಾಧವಾನಂದ, ಶ್ರೀ ಗರೀಬಾನಂದ, ಶ್ರೀ ಲಕ್ಷ್ಮೀದಾಸಜೀ, ಶ್ರೀ ಗೋಪಾಲದಾಸಜೀ ಮತ್ತು ಶ್ರೀ ನರಹರಿದಾಸಜೀ ಈ ಮಹರ್ಷಿಯರು ಶ್ರೀ ರಾಮಾನಂದರ ಪರಂಪರೆಯಲ್ಲಿ ಬಂದ ಪೀಠಾಧಿಪತಿಗಳು.

ಚಿತ್ರಕೂಟದಲ್ಲಿ ಶ್ರೀರಾಮದರ್ಶನದಿಂದ ಧನ್ಯತೆಯನ್ನು ಹೊಂದಿದ ನಂತರ ನಮ್ಮ ಕಥಾನಾಯಕರು ಅಲ್ಲಿಂದ ದೇಶಪರ್ಯಟನಕ್ಕಾಗಿ ಹೊರಟರು. ಮಾರ್ಗದಲ್ಲಿ ಹಂಸನಗರ, ಗಾಯಘಾಟ, ಬ್ರಹ್ಮಪುರ ಮುಂತಾದ ಸ್ಥಳಗಳನ್ನೂ ಅಲ್ಲಲ್ಲಿಯ ದೇವಮೂರ್ತಿಗಳನ್ನೂ ದರ್ಶನಮಾಡಿಕೊಂಡು ಕಾಂತ ಎಂಬ ಹೆಸರಿನ ಒಂದು ಊರಿಗೆ ಬಂದರು. ಅಲ್ಲಿ ಅಹೀರರೆಂಬ ಒಂದು ಬಗೆಯ ಕ್ರೂರಜನಗಳು ವಾಸಮಾಡುತ್ತಿದ್ದರು. ಅವರು ಕನ್ನಾಕಳವು, ದಾರಿಕಟ್ಟಿ ತಲೆಯೊಡೆಯುವಿಕೆ ಮುಂತಾದ ರಾಕ್ಷಸಕೃತ್ಯಗಳನ್ನಾಚರಿಸುವವರಾಗಿದ್ದರು. ತುಲಾರಾಮರು ಅದನ್ನು ಕಂಡು ಅವರನ್ನು ಹೇಗಾದರೂ ಸನ್ಮಾರ್ಗಕ್ಕೆ ಹಚ್ಚಬೇಕೆಂದು ಬಗೆದು ಸ್ವಲ್ಪ ಮುಂದಕ್ಕೆ ಅವರ ಪಾಳೆಯದ ಸಮೀಪಕ್ಕೆ ಹೋದರು. ಅಲ್ಲಿ ಮಂಗರೂಅಹೀರ ಎಂಬೊಬ್ಬ ತರುಣನು ತುಲಾರಾಮರ ಸಾಧುಸ್ವರೂಪ ತೇಜಸ್ವಿತೆಗಳಿಂದ ಆಕರ್ಷಿತನಾಗಿ ಒಡನೆ ಎದ್ದು ಪೀಠವಿತ್ತು ಉಪಚರಿಸಿ, ದಾಹಶಾಂತಿಗೆಂದು ಸ್ವಲ್ಪ ಹಾಲು ಕೊಟ್ಟನು. ತುಲಾರಾಮರು ಅದನ್ನು ಯೋಗ್ಯವಾ ಮಾಡಿಕೊಂಡು ತಿಂದು ಅವನ ಸೌಜನ್ಯಕ್ಕೆ ತೃಪ್ತರಾಗಿ-'ನಿನಗೆ ಬೇಕಾದ ವರವನ್ನು ಕೇಳಿಕೊ' ಎಂದರು. ಅವನು-'ಮಹಾಸ್ವಾಮಿ, ನನಗೆ ಪ್ರಭುಚರಣದಲ್ಲಿ ದೃಢವಿಶ್ವಾಸವು ನೆಲೆಗೊಳ್ಳಲಿ-ಮತ್ತು ನನ್ನವಂಶವು ಅಭಿವೃದ್ಧಿಯಾಗಲಿ' ಎಂದು ಎರಡು ವರಗಳನ್ನು ಕೇಳಿಕೊಂಡನು. ಅದನ್ನು ಕೇಳಿ ಹರ್ಷಿಸಿದ ಆ ಸಾಧುವರರು,-'ನೀನೂ ನಿನ್ನ ವಂಶೀಕರೂ ಇನ್ನುಮುಂದೆ ನಿಮ್ಮ ಚೋರವೃತ್ತಿಯನ್ನು ಬಿಟ್ಟು, ಯಾರಿಗೂ ದುಃಖವನ್ನುಂಟುಮಾಡದೆ ಇರುವಿರಾದರೆ, ನೀನು ಕೇಳಿಕೊಂಡಹಾಗೆಯೇ ಆಗುವುದು' ಎಂದರು. ಅವರ ಈ ಆಶೀರ್ವಾದವು ಸಫಲತೆಯನ್ನು ಹೊಂದಿತು.

ಶಪಬಾದ್ ಜಿಲ್ಲೆಯ ಅಹೀರ ಜಾತಿಯವರು ಕಳ್ಳತನದಲ್ಲಿ ಸುಪ್ರಸಿದ್ಧರಾಗಿದ್ದರೂ, ಯದ್ಯಪಿ ಮಂಗರೂಅಹೀರನ ವಂಶೀಕರು ಬಹು ಉಚ್ಛ್ರಾಯಸ್ಥಿತಿಯಲ್ಲಿದ್ದಾರಂದೂ ಅತಿಥಿ ಅಭ್ಯಾಗತರ ವಿಷಯದಲ್ಲಿ ಅವರಲ್ಲಿ ಕಂಡು ಬರುವ ಉದರಾತಿಥ್ಯಗಳು ಅನುಕರಣೀಯಗಳಾಗಿನೆಯೆಂದೂ ಪ್ರಸಿದ್ಧವಿದೆ.

ಅಲ್ಲಿಂದ ಪ್ರಯಾಣಮಾಡಿ ಅವರು ಬೋಲಾಪಗೌತವೆಂಬ ಸ್ಥಳಕ್ಕೆ ಬಂದರು. ಅಲ್ಲಿ ಗೋವಿಂದಮಿಶ್ರನೆಂಬ ಬ್ರಾಹ್ಮಣನೂ ರಘುನಾಥಸಿಂಹನೆಂಬ ಕ್ಷತ್ರಿಯನೂ ಅವರನ್ನು ಅತ್ಯಾದರದಿಂದ ಕಂಡು ಆತಿಥ್ಯಮಾಡಿದರು. ತೃಪ್ತರಾದ ನಮ್ಮ ಕಥಾನಾಯಕರು, ರಘುನಾಥಸಿಂಹನ ಸ್ಮಾರಕವಾಗಿರಲೆಂದೂ, ಲಕ್ಷಾಂತರಮಂದಿಗೆ ಅನಾಯಾಸವಾಗಿ ಭಗವನ್ನಾಮಸ್ಮರಣಭಾಗ್ಯವು ಲಭಿಸಲೆಂದೂ, ಆ ಊರಿನ ಹೆಸರನ್ನು 'ರಘುನಾಥಪುರ'ವೆಂದು ಬದಲಾಯಿಸಿದರು. ತರುವಾಯ ಮುಂದಕ್ಕೆ ಪ್ರಯಾಣಮಾಡಿ ಅಯೋಧ್ಯೆಯನ್ನು ಸೇರಿ ಅಲ್ಲಿ ಕೆಲಕಾಲ ನಿಂತರು.

ಜೀವಿತಯಾತ್ರೆಯಲ್ಲಿ ಗೊತ್ತಾದ ಮಾರ್ಗವು, ಅಜ್ಞಾನಾಂಧಕಾರನಿವಾರಕನಾದ ಗುರುವಿನಹ ಲಭಿಸದೆಂದು ತಿಳಿದ ತುಲಾರಾಮರು, ಮೇಲೆ ಹೇಳಿಕೊಂಡುಬಂದ ವೈಷ್ಣವಪಂಥದ ಮುಖ್ಯಗುರುವಾದ ಶ್ರೀ ನರಹರಿದಾಸಜೀಯವರನ್ನು ಆಶ್ರಯಿಸಿದರು. ಆ ಗುರುವರ್ಯರು ಶಿಷ್ಯನ ತೇಜಸ್ವಿತೆ ವೈರಾಗ್ಯಸಂಪನ್ನತೆಗಳನ್ನು ಕಂಡು ಪರಮಾನಂದಭರಿತರಾದರು. ಇವರಿಂದಲೇ ನಮ್ಮ ಕಥಾನಾಯಕರಿಗೆ 'ತುಲಸೀದಾಸ'ರೆಂದು ನಾಮಕರಣವಾಯಿತೆಂಬ ಪ್ರಸಿದ್ಧಿಯುಂಟು.

ಶ್ರೀ ರಾಮಾನಂದರ ಮಠದ ಗುರುಸೀಳಿಗೆಯಲ್ಲಿ ಶ್ರೀ ನರಹರಿದಾಸಜೀಯವರ ತರುವಾಯ ಶ್ರೀ ತುಲಸೀದಾಸರು ಬರುವಂತೆ ಕಂಡುಬಂದರೂ, ತುಲಸೀಚರಿತದಲ್ಲಿ ಅವರ ಗುರುಗಳ ಹೆಸರು ರಾಮದಾಸರೆಂದು ಇದ್ದಂತೆ ಈ ಕೆಳಗಿನ ಚೌಪಾಯಿಗಳಿಂದ ಸಿದ್ಧವಾಗುತ್ತದೆ.

''ತಬಗುರು ರಾಮದಾಸ ಪಹಚಾನೀ | ರಾಮ ಯಜ್ಞ ಬಿಧಿ ಶ್ರುತಿಮತರಾನೀ |
ದ್ವಾದಶದಿನ ಫಲಾಹಾರ ಕರಾಯಿ | ದಿಯೋ ಪೌನವ್ರತ ಮೇರೀ ತಾಇ ||
ರಾಮ ಬೀಜ ಜುತ ಮಂತ್ರಜಪಾವಾ | ಕಷ್ಟಸಾಧ್ಯಸಬ ನಿಯಮಕರಾವಾ |
ಬೀಜಮಂತ್ರತುಲಸೀಕೇಯಾನಾ | ಲಿಖಿ ತ್ರಿಕಾಲಸ್ಯಾವತ ಹಿತಜ್ಞಾನಾ || ''

ಆದರೆ ರಾಮಾಯಣ ಗ್ರಂಥಪ್ರಾರಂಭದಲ್ಲಿ'

''ಬಂದ ಊಂ ಗುರುಪದ ಕಂಜ ಕೃಪಾಸಿಂಧು ನರರೂಪಹರಿ |
ಮಹಾಮೋಹತಮ ಪುಂಜ ಜಾಸು ಬಚನ ರವಿಕರ ನಿಕರ ||''

ಎಂದು ತಮ್ಮ ಗುರು ಶ್ರೀ ನರಹರಿದಾಸಜೀಯವರನ್ನು ತಮ್ಮ ಭಾಗದ ನರರೂಪಹರಿಯೆಂದು ವರ್ಣಿಸಿರುತ್ತಾರ

ಶ್ರೀ ತುಲಸೀದಾಸರಿಂದ ಲೋಕೋಪಕಾರಕ್ಕಾಗಿ ಹಲವು ಗ್ರಂಥಗಳು ರಚಿಸಲ್ಪಟ್ಟುವು ಅವುಗಳಲ್ಲಿ ಮುಖ್ಯವಾದುವ ಹನ್ನೆರಡು ೧ ದೋಹಾವಲಿ ೨. ಕವಿತ್ತ ರಾಮಾಯಣ ೩ ಗೀತಾವಲಿ ೪ ರಾಮಚರಿತ ಮಾನಸ ೫ ರಾಮಾಜ್ಞಾ ೬ ವಿನಯಪತ್ರಿಕಾ ಈ ಆರು ದೊಡ್ಡ ಗ್ರಂಥಗಳು ೧ ರಾಮಲಲಾನಹಛೂ ೨ ಪಾರ್ವತೀಮಂಗಲ, ೩. ಜಾನಕೀಮಂಗಲ. ೪ ಬರವೈರಾಮಾಯಣ ೫ ವೈರಾಗ್ಯ ಸಂದೀಪಿನಿ ೬ ಕೃಷ್ಣಗೀತಾವಲಿ ಈ ಆರು ಸಣ್ಣ ಗ್ರಂಥಗಳು ಇವು ಹನ್ನೆರಡಲ್ಲದೆ, ಶ್ರೀ ತುಲಸೀದಾಸಜೀಯವರು, ೧ ರಾಮಸತ್ಸಯಿ ೨ ಸಂಕಟಮೋಚನ ೩ ಹನುಮದ್ಬಾಹುಕ ೪ ರಾಮಸಲಾಕಾ ೫ ಛಂದಾವಲಿ ೬ ಛಪ್ಪಯರಾಮಾಯಣ ೭ ಕಡಖಾ ರಾಮಾಯಣ ೮ ರೋಲಾ ರಾಮಾಯಣ ೯. ಝೂಲನಾರಾಮಾಯಣ ೧೦ ಕುಂಡಲಿಯಾ ರಾಮಾಯಣ ಎಂಬ ಈ ಹತ್ತು ಗ್ರಂಥಗಳನ್ನೂ ರಚಿಸಿದರೆಂಬ ಪ್ರತೀತಿಯಿದೆ. ಆದರ ಇವುಗಳಲ್ಲೆಲ್ಲಾ ರಾಮಚರಿತಮಾನಸಗ್ರಂಥವೇ ಸರ್ವಶ್ರೇಷ್ಠವೂ. ಸರ್ವಾದರಣೀಯವೂ ಆಗಿ ಜಗನ್ಮಾನ್ಯವಾಗಿದೆ.

ಇವುಗಳಲ್ಲಿ ವಿನಯಪತ್ರಿಕಾ, ರಾಮಾಜ್ಞಾ ಮುಂತಾದ ಕೆಲವು ಗ್ರಂಥಗಳ ರಚನೆಗೆ ಒದಗಿದ ಕಾರಣಗಳು ಅತಿ ಕೌತುಕವಾಗಿದೆ. ಸ್ಥಳ ಸಂಕೋಚದಿಂದ ಕೇವಲ ಒಂದೆರಡನ್ನು ಮಾತ್ರ ಇಲ್ಲಿ ಹೇಳುತ್ತೇನೆ

**ವಿನಯಪತ್ರಿಕಾ ಗ್ರಂಥರಚನೆ**– ಒಂದಾನೊಂದು ದಿನ ಗೋಸ್ವಾಮಿ ತುಲಸೀದಾಸರು, ಕಾಶಿಯಲ್ಲಿ ತಮ್ಮ ಮಠದಲ್ಲಿರುತ್ತಿರಲು, ಮಧ್ಯಾಹ್ನಕಾಲಕ್ಕೆ ಸರಿಯಾಗಿ ಅವರ ಬಾಗಿಲಲ್ಲಿ–'ಸೀತಾರಾಮ ಸೀತಾರಾಮ ಭೋ ಪುಣ್ಯಾತ್ಮರಿರಾ ನಾನೊಬ್ಬ ನರಹಂತಕನು, ಶ್ರೀರಾಮನಾಮದಲ್ಲಿ ಪ್ರೇಮವುಳ್ಳ ಯಾರಾದರೂ ಪುಣ್ಯಾತ್ಮರಿದ್ದರ ನನಗೊಂದು ಹಿಡಿ ಅನ್ನ

ಹಾಕಿ' ಎಂದು ಕೂಗಿದಂತಾಯಿತು. ತಮ್ಮ ಇಷ್ಟದೈವವಾದ ಶ್ರೀರಾಮನ ದಿವ್ಯ ನಾಮವನ್ನು ಕೇಳಿದೊಡನೆಯೇ, ಗೋಸ್ವಾಮಿಯವರು ಹೊರಕ್ಕೆ ಬಂದು ಆತನನ್ನು ಆದರಪೂರ್ವಕ ಒಳಕ್ಕೆ ಕರೆದೊಯ್ದು ಭಗವಾನನಿಗೆ ಸಮರ್ಪಿತವಾದ ಆಹಾರ ಪದಾರ್ಥಗಳನ್ನು, ಆತನೊಂದಿಗೆ ಸಹಪಙ್ಕ್ತಿಯಲ್ಲಿ ಕುಳಿತು ಭೋಜನಮಾಡಿದರು. ಈ ವಿಚಾರವು ಕಾಶಿಯಲ್ಲಿದ್ದ ಕರ್ಮನಿಷ್ಠ ಬ್ರಾಹ್ಮಣರ ಕಿವಿಗೆ ಬಿದ್ದೊಡನೆ ಅವರು ಗೋಸ್ವಾಮಿಯವರನ್ನು ಕುರಿತು-''ನರಹಂತಕನಾದ ಅವನೊಂದಿಗೆ ಕುಳಿತು ಹೇಗೆ ಭೋಜನ ಮಾಡಿದೆ ? ಮತ್ತು, ಒಂದು ಸಾರಿ 'ರಾಮ' ಎಂದ ಮಾತ್ರಕ್ಕೆ ಅವನ ಪಾಪವೆಲ್ಲ ಹೇಗೆ ನಾಶವಾಯಿತು?'' ಎಂದು ಆಕ್ಷೇಪಿಸಿದರು. ಆಗ ತುಲಸೀದಾಸರು-''ಅಯ್ಯಾ, ನೀವು ಶ್ರೀ ರಾಮನಾಮದ ಮಹಿಮೆಯನ್ನು ಕುರಿತು ಪುಸ್ತಕಗಳಲ್ಲಿ ಓದಿದ್ದೀರಲ್ಲದೆ,-ಅದರಲ್ಲಿ ನಿಮಗೆ ವಿಶ್ವಾಸವಿಲ್ಲವಾದ್ದರಿಂದ ನಿಮಗೆ ಅದರ ನಿಶ್ಚಿತಾರ್ಥವು ತಿಳಿಯಲಾರದು'-ಎಂದರು. ಆದರೆ ಅವರ ಸಂಶಯವು ಈ ಪ್ರತ್ಯುತ್ತರದಿಂದ ಪರಿಹಾರವಾಗಲಿಲ್ಲ. ಆಗ ತುಲಸೀದಾಸರು-'ಏನು ಮಾಡಿದರೆ, ನಿಮ್ಮ ಸಂದೇಹವು ಪರಿಹಾರವಾಗುವುದು'' ಎಂದು ಕೇಳಿದರು. ಆಗಲಾ ಬ್ರಾಹ್ಮಣರು 'ಶ್ರೀ ವಿಶ್ವನಾಥನ ಮುಂದಿರುವ ಕಲ್ಲಿನ ನಂದೀಶನ ವಿಗ್ರಹವು, ಈ ಪತಿತನ ಕೈಯ ಹುಲ್ಲು ತಿಂದರೆ, ನಮ್ಮ ಸಂಶಯವು ಪರಿಹಾರವಾಗುವುದು,' ಎಂದರು. ಒಡನೆ, ತುಲಸೀದಾಸರು ಹಿಂಜರಿಯದ ಎಲ್ಲರೊಂದಿಗೆ ದೇವಸ್ಥಾನಕ್ಕೆ ನಡೆದು ಆ ಪತಿತನ ಕೈಯಿಂದ ನಂದಿಗೆ ಹುಲ್ಲು ಕೊಡಿಸಿದರು. ನಂದೀಶ್ವರನೂ, ಸಕಲರೂ ಆಶ್ಚರ್ಯಪಡುತ್ತಿರಲು ಒಡನೆ ಆ ಹುಲ್ಲನ್ನು ತಿಂದಿತು. ಇದನ್ನು ಕಂಡ ಅವರ ವಿರೋಧಿಗಳು ಲಜ್ಜಿತರಾಗಿ, ಹೊರಟುಹೋದರು. ಇದು ಒಬ್ಬರಿಂದೊಬ್ಬರಿಗೆ ಅನೇಕ ಕಡೆ ಹಬ್ಬಿ, ಅವರ ಬೋಧನೆಗಳನ್ನು ಕೇಳಲು ಜನಗಳು ಹಿಂಡು ಹಿಂಡಾಗಿ ಬರತೊಡಗಿದರು. ಅನೇಕರು ಭಕ್ತರಾದರು. ಭಕ್ತಿಪಂಥವು ಪಸರಿಸಿತು. ಇದನ್ನು ಕಂಡ ಕಲಿಯುಗದ ಅಧಿಪತಿಯಾದ ಕಲಿಪುರುಷನು, ರೋಷಗೊಂಡು ಅವರ ಬಳಿಗೆ ಬಂದು,-ನೀನು ಹೀಗೆ ನನ್ನ ಸಂಕಲ್ಪಕ್ಕೆ ವಿರೋಧವಾಗಿ ನಡೆಯತೊಡಗಿದರೆ, ನಿನ್ನನ್ನು ಧ್ವಂಸಮಾಡಿಬಿಡುವೆನು ಎಂದು ಬೆದರಿಸಿದನು. ತುಲಸೀದಾಸರು ಆ ವಿಚಾರವನ್ನು ಹನುಮಾನ

ನಲ್ಲಿ ವಿಜ್ಞಾಪಿಸಿ ಅವನ ಬಾಧೆಯನ್ನು ತಪ್ಪಿಸೆಂದು ಪ್ರಾರ್ಥಿಸಿದರು. ಆಂಜನೇಯನು-'ವತ್ಸಾ ಅವನು ಈ ಯುಗಕ್ಕೆ ಅಧಿಪತಿ. ತನ್ನ ಅಧಿಕಾರಕ್ಕೊಳಪಟ್ಟಿರುವ ಈ ಭೂಮಿಯಲ್ಲಿ ತನ್ನ ಆಧಿಪತ್ಯವನ್ನು ನಡೆಯಿಸಲು ಅವನಿಗೆ ಈಗ ಸರ್ವಸ್ವಾತಂತ್ರ್ಯವಿದೆ. ಪ್ರಭುರಾಮಚಂದ್ರನ ಆಜ್ಞೆಯಿಲ್ಲದೆ, ಅವನಿಗೆ ಪ್ರತೀಕಾರ ಮಾಡತೊಡಗಕೂಡದು. ನೀನು ಶ್ರೀ ರಾಮಚಂದ್ರಮೂರ್ತಿಯ ಸೇವಾಕಾರ್ಯವೆಂದು ಒಂದು ವಿನಯಪತ್ರವನ್ನು ಬರೆ. ತರುವಾಯ ನಾನು ಪ್ರಭು ಸನ್ನಿಧಿಯಲ್ಲಿ ತಕ್ಕಂತೆ ಪ್ರಸ್ತಾಪಿಸಿ ಕಲಿಪುರುಷನನ್ನು ಶಿಕ್ಷಿಸಲು ಆಜ್ಞೆ ಪಡೆಯುತ್ತೇನೆ' ಎಂದನು. ಆಂಜನೇಯನ ಈ ಆದೇಶವನ್ನನುಸರಿಸಿ ಗೋಸ್ವಾಮಿಯವರು 'ವಿನಯಪತ್ರಿಕಾ'ಗ್ರಂಥವನ್ನು ಬರೆದರು.

"**ರಾಮಾಜ್ಞಾ ಗ್ರಂಥರಚನೆ**"—ರಾಜಘಾಟ್ ಎಂಬ ಸಂಸ್ಥಾನದ ರಾಜನ ಮಗನು ಒಂದಾನೊಂದು ದಿನ ಬೇಟೆಗೆ ಹೋಗಿದ್ದನು. ಆಗ ಅವನೊಂದಿಗಿದ್ದ ಒಬ್ಬ ಆಳನ್ನು ಹುಲಿ ಕೊಂದು ತಿಂದಿತು ಊರಿನಲ್ಲಿದ್ದ ರಾಜನಿಗೆ ರಾಜಪುತ್ರನೇ ಮೃತನಾದನೆಂಬ ವಾರ್ತೆಯು ತಲ್ಪಿತು. ರಾಜನು ಒಹು ಗಾಬರಿಗೊಂಡು ಗಂಗಾನದಿಯ ದಡದಲ್ಲಿ ಪ್ರಹ್ಲಾದ ಘಾಟಿನಲ್ಲಿ ವಾಸವಾಗಿದ್ದ ಗಂಗಾರಾಮನೆಂಬ ಸುಪ್ರಸಿದ್ಧ ಜ್ಯೋತಿಷ್ಯನನ್ನು ಕರೆಸಿ, ಈ ವಿಷಯದಲ್ಲಿ ಪ್ರಶ್ನೆಯನ್ನು ಕೇಳಿದನು. ಮತ್ತು-'ನೀನು ಹೇಳುವ ಪ್ರಶ್ನೆಯ ಫಲವು ನಿಶ್ಚಯವಾದರೆ ಒಂದು ಲಕ್ಷ ರೂಪಾಯಿ ಬಹುಮಾನ ಕೊಡುತ್ತೇನೆ. ಸುಳ್ಳಾದರೆ, ನಿನ್ನ ತಲೆಯನ್ನು ತೆಗೆಯಿಸುತ್ತೇನೆ' ಎಂದು ಹೇಳಿದನು ಪ್ರಶ್ನೆಯ ಫಲನಿರ್ಣಯವು ಅಷ್ಟು ಕಠಿಣವಿದ್ದುದರಿಂದ ಗಂಗಾರಾಮನು ಒಂದು ದಿನದ ಗಡುವನ್ನು ಕೇಳಿಕೊಂಡು ಪ್ರಹ್ಲಾದಘಾಟಿಗೆ ಒಂದು ಚಿಂತಾಮಗ್ನನಾಗಿದ್ದನು ಅಷ್ಟರಲ್ಲಿ ಅಲ್ಲಿಗೆ ಶ್ರೀ ತುಲಸೀದಾಸರೂ ಬಂದರು. ಪಂಡಿತ ಗಂಗಾರಾಮನು ತುಲಸೀದಾಸರ ಅತ್ಯಂತ ಆಪ್ತ ಮಿತ್ರನು. ಗೋಸ್ವಾಮಿಯವರು ತಮ್ಮ ಮಿತ್ರನ ಬಾಡಿದ ಮುಖವನ್ನು ಕಂಡು ಕಾರಣವನ್ನು ವಿಚಾರಿಸಿದರು. ಗಂಗಾರಾಮನು ಸಂಗತಿಯನ್ನೆಲ್ಲ ಹೇಳಿದನು. ಆಗಲಾ ಸಾಧುವರ್ಯರು ಬೆದರಬೇಡವೆಂದು ಆತನಿಗೆ ಧೈರ್ಯ ಹೇಳಿ, ಕಾಗದಕಂಠಗಳನ್ನು ಹಿಡಿದು ಕುಳಿತು ರಾಮಸ್ಮರಣೆಪೂರ್ವಕ ಪ್ರಾರಂಭಿಸಿ ಆರು ಗಂಟೆಗಳ ಕಾಲದಲ್ಲಿ ಈ ಗ್ರಂಥವನ್ನು ಬರದು-

'ಈ ರಾಮಾಜ್ಞೆಯನ್ನು ತೆಗೆದುಕೊಂಡು ಹೋಗಿ ರಾಜನಲ್ಲಿ ಕೊಡು" ಎಂದು ತಮ್ಮ ಮಿತ್ರನನ್ನು ಕಳುಹಿಸಿದರು. ಗಂಗಾರಾಮನು ಅದನ್ನು ಕೊಂಡೊಯ್ದು ತಲುಪಿಸಿ, ಅದರಲ್ಲಿರುವಂತೆ ಫಲವಾಗುವುದೆಂದು ನುಡಿದನು. ಆದರ ರಾಜನಿಗೆ ನಂಬಿಕೆಯಾಗಲಿಲ್ಲ. ಆ ದಿನ ಸಾಯಂಕಾಲದವರೆಗೆ ಕೈದಿನಲ್ಲಿರಬೇಕೆಂದು, ಆತನನ್ನು ನಿರ್ಬಂಧಗೊಳಿಸಿದನು. ಆ ದಿನದ ಸಂಧ್ಯಾಕಾಲಕ್ಕೆ ಬೇಟೆಗೆ ಹೋಗಿದ್ದ ರಾಜಪುತ್ರನು ಸುರಕ್ಷಿತವಾಗಿ ಊರಿಗೆ ಬರಲು, ರಾಜನು ಪರಮಸಂತೋಷದಿಂದ ಗಂಗಾರಾಮನನ್ನು ಕರೆಸಿ, ಬಹುಪರಿಯಿಂದ ಆದರಿಸಿ, ತನ್ನ ಮಾತಿನಂತೆಯೇ ಆತನಿಗೆ ಲಕ್ಷ ರೂಪಾಯಿಗಳ ಬಹುಮಾನವನ್ನಿತ್ತು ಕಳುಹಿಸಿದನು. ಗಂಗಾರಾಮನು ಆ ಹಣವನ್ನೆಲ್ಲಾ, ತನ್ನ ಮಿತ್ರರಾದ ತುಲಸೀದಾಸರಿಗೆ ಒಪ್ಪಿಸಿದನು. ಆದರೆ ಅವರು ಅದರಲ್ಲಿ ಒಂದು ಕಾಸನ್ನೂ ಮುಟ್ಟಲು ಇಷ್ಟಪಡಲಿಲ್ಲ. ಕೊನೆಗೆ ಗಂಗಾರಾಮನ ಬಲವಂತವು ಅಧಿಕವಾಗಲು ಹನ್ನೆರಡು ಸಹಸ್ರ ರೂಪಾಯಿಗಳನ್ನು ಮಾತ್ರ ಸ್ವೀಕರಿಸಿ, ಆ ಹಣದಿಂದ ಹನ್ನೆರಡು ಮಾರುತಿ ದೇವಾಲಯಗಳನ್ನು ಸ್ಥಾಪಿಸಿದರು. ಅವು ಈಗಲೂ ಇವೆಯೆಂದೂ, ಅವುಗಳಲ್ಲೆಲ್ಲಾ ಹನುಮಾನನ ಮೂರ್ತಿಯು ದಕ್ಷಿಣಮುಖವಾಗಿಯೇ ಇದೆಯೆಂದೂ ಹೇಳಲ್ಪಟ್ಟಿದೆ.

**ಶ್ರೀರಾಮ ಚರಿತಮಾನಸ**—ಶ್ರೀ ತುಲಸೀದಾಸಕೃತ ಗ್ರಂಥಗಳಲ್ಲೆಲ್ಲಾ 'ಶ್ರೀರಾಮಚರಿತ ಮಾನಸ' ವೆಂಬ ರಾಮಾಯಣ ಗ್ರಂಥವೇ ಸರ್ವಶ್ರೇಷ್ಠವಾದುದು. ಇದನ್ನು ತುಲಸೀದಾಸರು ಶ್ರೀರಾಮಚಂದ್ರಮೂರ್ತಿಯ ಆಜ್ಞಾನುಸಾರ ಬರೆದುದಾಗಿ ಪ್ರತೀತಿ ಇದೆ. ಅವರು ಅಯೋಧ್ಯೆಯಲ್ಲಿ ವಾಸವಾಗಿದ್ದಾಗ ಒಂದು ದಿನ ರಾತ್ರಿ ಶ್ರೀರಾಮನು ತುಲಸೀದಾಸರ ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ 'ದೇಶಭಾಷೆಯಲ್ಲಿ ರಾಮಾಯಣ ಗ್ರಂಥವನ್ನು ಬರೆ' ಎಂದು ಆಜ್ಞಾಪಿಸಲಾಗಿ ಶ್ರೀ ದಾಸರು ವಿಕ್ರಮಶಕೆ ೧೬೩೧ನೆಯ ಚೈತ್ರ ಶುದ್ಧ ೯ (ಶ್ರೀರಾಮನವಮಿ) ಮಂಗಳವಾರದ ಶುಭದಿನದಲ್ಲಿ ಪ್ರಾರಂಭಿಸಿ ಬಾಲಕಾಂಡ ಅಯೋಧ್ಯಾಕಾಂಡ ಅರಣ್ಯಕಾಂಡಗಳನ್ನು ಅಲ್ಲೇ ಬರೆದರು. ಮುಂದೆ ಅಲ್ಲಿಯ ಪಂಡಿತರೊಂದಿಗೆ ಕಾರಣಾಂತರದಿಂದ ವಿವಾದವುಂಟಾಗಲು, ಅಲ್ಲಿರಲಿಷ್ಟಪಡದೆ ಕಾಶಿಗೆ ಪ್ರಯಾಣಮಾಡಿ, ಅಸ್ಸಿಘಾಟಿನ

ಲೋಲಾರ್ಕ ಕುಂಡದ ಹತ್ತಿರ ವಾಸಿಸಿದ್ದಾಗ ಕಿಷ್ಕಿಂಧಾಕಾಂಡ ಸುಂದರ ಕಾಂಡ ಲಂಕಾಕಾಂಡ ಉತ್ತರಕಾಂಡಗಳನ್ನು ಬರೆದು ಮುಗಿಸಿದರು ಕಾಶಿಯಲ್ಲಿ ತುಲಸೀದಾಸಜೀ ಘಾಟ, ಗೋಪಾಲಮಂದಿರ, ಪ್ರಹ್ಲಾದಘಾಟ, ಮುಂತಾದ ಸ್ಥಳಗಳಲ್ಲೆಲ್ಲಾ ಇವರು ವಾಸಿಸಿದ್ದರು. ಅಸ್ಸೀಘಾಟನಲ್ಲಿ ಸಂಕಟಮೋಚನ ಹನುಮಾನ್‌ಮೂರ್ತಿಯೊಂದು ತುಲಸೀದಾಸರಿಂದ ಸ್ಥಾಪಿತವಾಗಿ ಈಗಲೂ ಪೂಜೆಗೊಳ್ಳುತ್ತಿದೆ.

ಶ್ರೀರಾಮಚರಿತಮಾನಸ ಗ್ರಂಥದ ಮಹತ್ವವನ್ನು ಹೆಚ್ಚಿಸುವ ಒಂದು ಕಥೆಯು ಶ್ರೀ ತುಲಸೀದಾಸಚರಿತ್ರೆಯಲ್ಲಿ ಉಕ್ತವಾಗಿದೆ. ಲಂಕೆಯಲ್ಲಿ ನಡೆದ ರಾಮರಾವಣ ಯುದ್ಧಕಾಲದಲ್ಲಿ ಲಕ್ಷ್ಮಣನಿಗೆ ರಾವಣನಿಂದ ಶಕ್ತಿ ಪ್ರಯೋಗವಾದ ಸಂದರ್ಭದಲ್ಲಿ ಶ್ರೀರಾಮನು ತನ್ನ ಅಂತರಂಗಭಕ್ತನಾದ ಹನುಮಂತನನ್ನು ಕುರಿತು ಇತರ ಸಂಗತಿಗಳನ್ನು ಹೇಳುತ್ತಾ ಪ್ರಸಂಗಾನುಸಾರ-'...ನಾನು ವಾಲ್ಮೀಕಿ ರಾಮಾಯಣದಲ್ಲಿ ಹೇಗೆ ವರ್ಣಿತವಾಗಿದೆಯೋ ಅದಕ್ಕೆ ಅನುಸಾರವಾಗಿ ನಡೆಯುಲುಳ್ಳವನು' ಎಂದನು. ಆಗ ಹನುಮಂತನು ಹತ್ತಿರದಲ್ಲಿದ್ದ ಶಿಲೆಗಳಮೇಲೆ ತನ್ನ ಉಗುರಿನಿಂದ ರಾಮಾಯಣ ಕಥೆಯನ್ನು ಬರೆದು, ಅದನ್ನು ಶ್ರೀರಾಮನಲ್ಲಿಗೆ ತಂದು ಅದರ ಮೇಲೆ ಹಸ್ತಾಕ್ಷರ (ಸಹಿ-ರುಜು) ಮಾಡಬೇಕೆಂದು ರಾಮನನ್ನು ಪ್ರಾರ್ಥಿಸಿದನು. ರಾಮನು, 'ನಾನು ವಾಲ್ಮೀಕಿಯ ರಾಮಾಯಣಕ್ಕೆ ರುಜು ಮಾಡಿದ್ದೇನಾದ್ದರಿಂದ ಇದಕ್ಕೂ ಸಹಿ ಮಾಡಲಾಗುವುದಿಲ್ಲ—ನೀನು ವಾಲ್ಮೀಕಿಯಿಂದಲೇ ರುಜು ಮಾಡಿಸು' ಎಂದನು. ಆಗ ಹನುಮಾನನು ವಾಲ್ಮೀಕಿಯ ಬಳಿಗೆ ಹೋಗಿ ಇದಕ್ಕೆ ಸಹಿ ಮಾಡೆನ್ನಲು, ಆತನು ಹನುಮಾನಕೃತ ರಾಮಾಯಣವನ್ನು ಓದಿ ನೋಡಿ, ತಾನು ಬರೆದುದಕ್ಕಿಂತಲೂ ಅದು ಉತ್ಕೃಷ್ಟವಾಗಿದ್ದುದರಿಂದ ಅದು ಪ್ರಚಾರಕ್ಕೆ ಬಂದರ ತನ್ನ ರಾಮಾಯಣಕ್ಕ ಯಶಃಪ್ರಾಪ್ತಿಯಾಗಲಾರದೆಂದು ಬಗೆದು ಹನುಮಾನನನ್ನು ಬಹುಬಗೆಯಿಂದ ಸ್ತೋತ್ರ ಮಾಡಲಾರಂಭಿಸಿದನು. ಪ್ರಸನ್ನನಾದ ಆಂಜನೇಯನು ಬೇಕಾದ ವರವನ್ನು ಬೇಡೆನ್ನಲು, ವಾಲ್ಮೀಕಿಯು 'ನಿನ್ನೀ ರಾಮಾಯಣವನ್ನು ಸಮುದ್ರದಲ್ಲಿ ಹಾಕಿ ಮುಳುಗಿಸಿಬಿಡೆ'ಂದು ಕೇಳಿಕೊಂಡನು. ಆ ಮಾತನ್ನು ಕೇಳಿದ ಹನುಮಂತನು 'ಆಗಬಹುದು, ಈಗ ಇದನ್ನು ನಿನ್ನ ಪ್ರಾರ್ಥನೆಯಂತೆ

ಸಮುದ್ರದಲ್ಲಿ ಹಾಕುತ್ತೇನೆ. ಆದರೆ ಕಲಿಯುಗದಲ್ಲಿ ತುಲಸೀ ಎಂಬೊಬ್ಬ ಬ್ರಾಹ್ಮಣನ ನಾಲಗೆಯಲ್ಲಿ ಕುಳಿತು ನಾನು ದೇಶಭಾಷೆಯಲ್ಲಿ ಒಂದು ರಾಮಾಯಣ ಗ್ರಂಥವನ್ನು ಬರೆಯಿಸುತ್ತೇನೆ ಆದರಿಂದ ನಿನ್ನ ರಾಮಾಯಣವು ನಷ್ಟಪ್ರಾಯವಾಗುವುದು' ಎಂದು ಹೇಳಿ ಹೊರಟು ನಡೆದನು.

ತುಲಸೀದಾಸರರಾಮಾಯಣಕ್ಕೂ ವಾಲ್ಮೀಕಿರಾಮಾಯಣಕ್ಕೂ ಕೆಲ ಕೆಲಭಾಗಗಳಲ್ಲಿ ವ್ಯತ್ಯಾಸಗಳಿವೆ. ವಾಲ್ಮೀಕಿರಾಮಾಯಣದಲ್ಲಿ ಸಂಕ್ಷೇಪವಾಗಿರುವ ಭಾಗಗಳು ಇದರಲ್ಲಿ ವಿಸ್ತಾರವಾಗಿಯೂ, ಅಲ್ಲಿ ವಿಸ್ತಾರವಾಗಿರುವ ಭಾಗಗಳು ಇಲ್ಲ ಸಂಕ್ಷೇಪವಾಗಿಯೂ ವರ್ಣಿತವಾಗಿವೆ ತುಲಸೀದಾಸರು ತಮ್ಮ ರಾಮಾಯಣದ ರಚನೆಗೆ ವಾಲ್ಮೀಕಿ ರಾಮಾಣವನ್ನು ಮಾತ್ರವಲ್ಲದೆ ಅಧ್ಯಾತ್ಮರಾಮಾಯಣ, ಕಾಕಭುಸುಂಡೀ ರಾಮಾಯಣ ಮುಂತಾದ ಇತರ ಕೆಲವು ರಾಮಾಯಣಗಳ ಆಧಾರವನ್ನೂ ತೆಗೆದುಕೊಂಡಿದ್ದಾರೆಂದು ಉಕ್ತವಾಗಿದ.

'ರಾಮಚರಿತಮಾನಸ'ವೆಂದರ, 'ಶ್ರೀರಾಮಚಂದ್ರನ ಅಮಾನುಷ ಲೀಲೆಗಳ ವರ್ಣನೆಯುಳ್ಳ ಮಾನಸಸರೋವರ'ವೆಂದು ಅರ್ಥ ಆದರೆ ಇದನ್ನು ಶ್ರೀ ತುಲಸೀದಾಸರರಾಮಾಯಣವೆಂದು ಕರೆಯುವುದೇ ವಿಶೇಷ ರೂಢಿಯಾಗಿದ. ವಾಲ್ಮೀಕಿ ರಾಮಾಯಣದಲ್ಲಿನ ಕಥಾಕ್ರಮದಂತೆ ಇದರಲ್ಲಿ ಆ ಕ್ರಮವು ಅನುಸರಿಸಲ್ಪಡದಿದ್ದರೂ, ಇದರಲ್ಲಿನ ಶ್ರೀರಾಮಕಥೆಯು ನವೀನರೀತಿಯಲ್ಲಿ ಬಹು ಚಿತ್ತಾಕರ್ಷಕವಾಗಿ ರಚಿತವಾಗಿದೆ. ಮಹಾಪುಣ್ಯಪ್ರದವಾದ ಶ್ರೀರಾಮಕಥೆಯನ್ನು ಸಂಸ್ಕೃತಭಾಷೆಯಲ್ಲಿ ಬರೆಯದೆ ಪ್ರಜೆಗಳ ನಿತ್ಯವ್ಯವಹಾರದ ಭಾಷೆಯಾದ ಹಿಂದಿಯಲ್ಲಿ ರಚಿಸಿದ್ದಕ್ಕಾಗಿ ಆಗಿನ ಸಂಸ್ಕೃತಪಂಡಿತರು ತುಲಸೀದಾಸರನ್ನು ಆಕ್ಷೇಪಿಸದೆ ಇರಲಿಲ್ಲ. ಕಾಶಿಗೆ ಬಂದು ಶ್ರೀ ರಾಮಾಯಣ ಗ್ರಂಥವನ್ನು ಪೂರ್ತಿಗೊಳಿಸಿದ ತರುವಾಯ ಒಂದು ದಿನ ಅವರು ಮಣಿಕರ್ಣಿಕಾ ಘಟ್ಟದಲ್ಲಿ ಸ್ನಾನಮಾಡುತ್ತಿದ್ದಾಗ ಒಬ್ಬಾನೊಬ್ಬ ಸಂಸ್ಕೃತಪಂಡಿತನು ಅವರ ಬಳಿಗೆ ಬಂದು,-'ರಾಮಾಯಣದಂತಹ ಉತ್ಕೃಷ್ಟಗ್ರಂಥವನ್ನು ದೇವವಾಣಿಯಲ್ಲಿ ಬರೆಯದೆ ಹೊಲಸು ಹಿಂದಿಯಲ್ಲಿ ಏಕೆ ಬರೆದೆ?' ಎಂದು ಆಕ್ಷೇಪಿಸಿ ಕೇಳಲಾಗಿ,-ಶ್ರೀ ತುಲಸೀದಾಸರು, -'ಮಹಾಸ್ವಾಮಿ, ಪವಿತ್ರವಾದ ಸಂಸ್ಕೃತಭಾಷೆಯಲ್ಲಿ ನಾಯಕನಾಯಿಕಾ-

ಪ್ರಣಯವರ್ಣನಾದಿ ಹೊಲಸು ವಿಚಾರಗಳನ್ನು ಬರೆಯುವುದಕ್ಕಿಂತಲೂ, ದೇಶಭಾಷೆಯಲ್ಲಿ ಧರ್ಮಗ್ರಂಥವನ್ನು ಬರೆಯುವುದು ಹೆಚ್ಚು ಅಸಹ್ಯವೋ ? ಚಿನ್ನದ ಬಟ್ಟಲನಲ್ಲಿ ವಿಷವನ್ನೂ ಮಣ್ಣಿನ ಬಟ್ಟಲಲ್ಲಿ ಅಮೃತವನ್ನೂ ಇಟ್ಟು ತೆಗೆದುಕೊಳ್ಳಹೇಳಿದರೆ ತಾವು ಯಾವುದನ್ನು ಗ್ರಹಿಸಲಿಚ್ಛಿಸುವಿರಿ, ಸ್ವಾಮಿ?" ಎಂದು ಪ್ರಶ್ನಿಸಿದರು. ಅದನ್ನು ಕೇಳಿದ ಆ ಪಂಡಿತನು ಮುಂದೆ ಮಾತನಾಡಲಾರದೆ ತಲೆಯನ್ನು ತಗ್ಗಿಸಿಕೊಂಡು ಹೊರಟುಹೋದನು. ಆದರೆ, ಇತರ ಪಂಡಿತರಿಗೆ ಆ ಪ್ರತ್ಯುತ್ತರವು ತೃಪ್ತಿಯನ್ನುಂಟುಮಾಡಲಿಲ್ಲ -ಶ್ರೀ ವಿಶ್ವನಾಥನು ಆ ರಾಮಾಯಣ ಗ್ರಂಥವನ್ನು ಸ್ವೀಕರಿಸಿದರೆ ಮಾತ್ರ ಅದು ತಮ್ಮಿಂದ ಮಾನ್ಯವಾಗುವುದೆಂದು ತಿಳಿಸಿದರು. ಶ್ರೀ ತುಲಸೀದಾಸರು ಅದಕ್ಕೂ ಒಪ್ಪಿ, ಆ ಗ್ರಂಥವನ್ನು ಒಂದು ದಿನ ರಾತ್ರಿ ಶ್ರೀ ವಿಶ್ವನಾಥನ ಮಂದಿರದಲ್ಲಿರಿಸಿದ್ದರು. ಮಾರನೆಯ ಪ್ರಾತಃಕಾಲದಲ್ಲೆದ್ದು ನೋಡಲು ಅದರಮೇಲೆ ಶ್ರೀ ವಿಶ್ವನಾಥನು ತನ್ನ ಸಮ್ಮತಿವಚನವನ್ನು ಬರೆದಿದ್ದುದನ್ನು ಕಂಡು ಸಕಲರೂ ಪರಮಾಶ್ಚರ್ಯಪಟ್ಟು, ಅದನ್ನು ಭಗವದ್ದತ್ತವಾದುದೆಂದೇ ಒಪ್ಪಿಕೊಂಡರು. ಅಂದಿನಿಂದ ಅದು ಪಂಡಿತಪಾಮರರೆಂಬ ವ್ಯತ್ಯಾಸವಿಲ್ಲದೆ ಸರ್ವಜನಾದರಣೀಯವಾದ ಗ್ರಂಥವಾಯಿತು.

ಈ ಮಹಾ ಗ್ರಂಥದ ಪ್ರೌಢಿಮೆ-ಮಹತ್ವ-ಉಪಯುಕ್ತತೆಗಳನ್ನು ಕುರಿತು ಕನ್ನಡದಲ್ಲಿ ತುಲಸೀರಾಮಾಯಣದ ತರ್ಜುಮೆ ಪ್ರಕಟನೆ ಮುಂತಾದ ಮಹತ್ಕಾರ್ಯಭಾರವನ್ನು ಕೈಕೊಂಡಿರುವ ಶ್ರೀಯುತ ದತ್ತಾತ್ರೇಯ ಕೃಷ್ಣ ಭಾರದ್ವಾಜರವರು ಹೀಗೆಂದು ಬರೆದಿರುತ್ತಾರೆ. *" ಮುಖ್ಯವಾಗಿ ಈ ಗ್ರಂಥವು (ಶ್ರೀ ರಾಮಚರಿತಮಾನಸ) ತುಲಸೀದಾಸರನ್ನೂ ಹಿಂದೀ ಸಾಹಿತ್ಯವನ್ನೂ ಅಮರನಾಗಿ ಮಾಡಿರುವುದು. ಉತ್ತರ ಹಿಂದೂಸ್ಥಾನದಲ್ಲಿ ಹಿಂದಿಯನ್ನು ಮಾತನಾಡಬಲ್ಲ ಹಿಂದೂವಾದವನು ಪ್ರತಿಯೊಬ್ಬನೂ ಈ ಗ್ರಂಥದ ನಾಲ್ಕು ಚೌಪಾಯಿಗಳನ್ನಾದರೂ ಅರಿಯದೆ ಇಲ್ಲ. ಈ ಗ್ರಂಥಕ್ಕಿರುವ ಪ್ರಚಾರವು ಆವ ಭೂಭಾಗದಲ್ಲಿಯೂ ಆವ ಗ್ರಂಥಕ್ಕೂ ಇಲ್ಲವೆಂ

* ಬೆಂಗಳೂರಿನ ಸುಬೋಧ ಪ್ರಕಟನಾಲಯದಿಂದ ಪ್ರಚುರಿಸಲ್ಪಡುತ್ತಿರುವ "ಸುಬೋಧ" ಮಾಸಪತ್ರಿಕೆಗೆ ಅಕ್ಷಯ ಸಂ||ದ ಆಶ್ವಯುಜ ಸಂಚಿಕೆಗೆ, ಬರೆದ ಲೇಖನದಿಂದ ಎತ್ತಿ ಬರೆದುದು.

ದರ ಅತ್ಯುಕ್ತಿಯಾಗದು. ಈ ಗ್ರಂಥದೊಳಗೆ ಮನುಷ್ಯ ಜೀವನದಲ್ಲಿ ಸಾಮಾನ್ಯವಾಗಿ ಬರುವ ಪ್ರತಿಯೊಂದು ದೆಶೆಯೂ ಮತ್ತು ಪ್ರತಿಯೊಂದು ಪರಿಸ್ಥಿತಿಯು ಸನ್ನಿವೇಶವೂ ಆ ದೆಶೆ ಮತ್ತು ಪರಿಸ್ಥಿತಿಗಳ ಅತ್ಯಂತ ಸ್ವಾಭಾವಿಕವೂ ಮರ್ಮಸ್ಪರ್ಶಿಯೂ ಸರ್ವಗ್ರಾಹ್ಯವೂ ಆದ ರೂಪವೂ ಚಿತ್ರಿತವಾಗಿದೆ ಉತ್ತರ ಹಿಂದೂಸ್ಥಾನದಲ್ಲ ಎಲ್ಲಿ ಹೆಚ್ಚು ಶ್ರೋತೃಗಳಿರುವರೋ, ಮತ್ತು ಎಲ್ಲ ಜನರು ಕೆಲವುವೇಳೆ ನಗುತ್ತಲೂ ಕೆಲವು ವೇಳೆ ಅಳುತ್ತಲೂ ಇರುವರೋ, ಅಲ್ಲ ತುಲಸೀದಾಸರ ರಾಮಾಯಣ ಪಠನವಾಗುತ್ತಿದೆಯೆಂದು ತಿಳಿಯಬಹುದು. ಅಲ್ಲಿ ಇದಕ್ಕೆ ಇತರರು ಹಿಂದುಗಳ ಕುರಾನ್ ಗ್ರಂಥವೆನ್ನುವರು. ಅಲ್ಲ ಮುಸಲ್ಮಾನರು ಯಾವುದಾದರೂ ಮಾತಿಗೆ ಕುರಾನಿನ ಆಧಾರವನ್ನು ಹೇಳಿದರೆ, ಹಿಂದೂಗಳು ಈ ರಾಮಾಯಣದ ಆಧಾರವನ್ನು ಹೇಳುವರು.

‘ ಅಲ್ಲಿ ಜನಸಾಮಾನ್ಯಕ್ಕೆ ಈ ಗ್ರಂಥದಿಂದ ನೀತಿಯ ಉಪದೇಶ, ಸದ್ಧರ್ಮಕ್ಕೆ ಉತ್ತೇಜನ,ದುಃಖದಲ್ಲಿ ಧೈರ್ಯ, ಆನಂದೋತ್ಸವದಲ್ಲ ಉತ್ಸಾಹ ಸಂಕಷ್ಟ ಸಮಯದಲ್ಲ ಪಾರುಮಾಡುವ ಶಕ್ತಿ ಇವೆಲ್ಲವೂ ಲಭಿಸುತ್ತಿರುವುವು. ಆದ್ದರಿಂದ ಅಲ್ಲ ಬಾಲಕರೂ ವೃದ್ಧರೂ, ಮೂರ್ಖರೂ ಪಂಡಿತರೂ ತಮ್ಮ ತಮ್ಮ ಬುದ್ಧಿಗನುಸಾರವಾಗಿ ಈ ಗ್ರಂಥದಲ್ಲಿ ಮಗ್ನರಾಗುವರು. ಮನುಷ್ಯ ಜೀವನದೆಶೆಯ ದೃಷ್ಟಿಯಿಂದ ನೋಡಿದರ ತುಲಸೀದಾಸ ರಾಮಾಯಣದ ಬಾಲಕಾಂಡದಲ್ಲಿ ಆನಂದೋತ್ಸವವು ತನ್ನ ಮೇರೆಯನ್ನು ಮುಟ್ಟಿರುವುದು. ಅಯೋಧ್ಯಾಕಾಂಡದಲ್ಲ ಗಾರ್ಹಸ್ಥ್ಯದ ವಿಷಮಸ್ಥಿತಿಯು ಎದುರಿಗೆ ಬಂದು ನಿಲ್ಲುವುದು ಅರಣ್ಯ-ಕಿಷ್ಕಿಂಧ ಮತ್ತು ಸುಂದರ ಕಾಂಡಗಳಲ್ಲ ಕರ್ಮ ಉದ್ಯೋಗ ಮತ್ತು ಕಾಲಸೂಚಿತವಾಗುವುದು. ಲಂಕಾಕಾಂಡದಲ್ಲಿ ವಿಜಯ ಮತ್ತು ವಿಭೂತಿಯ ಚಿತ್ರವು ಗೋಚರವಾಗುವುದು ”

ಮಹಾತ್ಮಾ ತುಲಸೀದಾಸರ ಇಂತಹ ಅಮೌಲ್ಯ ಗ್ರಂಥ ಸಮೂಹ ರಚನೆಯಿಂದ ಜಗತ್ತಿಗೆ ಅಮೋಘ ಉಪಕಾರವಾಯಿತು, ಯದ್ಯಪಿ ಆಗುತ್ತಿರುವುದು , ಮುಂದೂ ಅನೇಕ ಕಾಲಗಳವರೆಗೆ ಆಗಲಿರುವುದು.



## ಅಧ್ಯಾಯ ೫ ಮಾಹಾತ್ಮ್ಯಾದಿ ವಿಚಾರ

ಭಗವದ್ಭಜನನಿರತರಾದ ಸಾಧುವರ್ಯರೂ, ಯೋಗಿಗಳೂ, ಸಿದ್ಧರೂ ಕೆಲಕೆಲವು ಮಾಹಾತ್ಮ್ಯಾದಿಗಳನ್ನು ಪ್ರಕಟಿಸುವುದುಂಟು. ಇವುಗಳು ಅವರ ಕೀರ್ತಿಪ್ರತಿಷ್ಠೆಗಳನ್ನು ಹೆಚ್ಚಿಸಿ, ಶಿಷ್ಯಸಂಗ್ರಹಣಕ್ಕೂ ಜನಾಕರ್ಷಣಕ್ಕೂ ಸಹಾಯಕವಾಗುವುವು. ಗ್ರಂಥಪ್ರಾರಂಭದಲ್ಲಿ ಹೇಳಿದಂತೆ, ಯಾರು ಸ್ವಾರ್ಥಿಗಳಾಗಿ, ಹಟಯೋಗಾದಿ ಸಾಧನೆಗಳಿಂದ ಅಲ್ಪಸ್ವಲ್ಪ ಚಮತ್ಕಾರಗಳನ್ನು ಕಲಿತು ಜನಗಳನ್ನು ಮರುಳುಮಾಡುವ ಯಕ್ಷಿಣಿಗಾರರಂತೆ, ಆ ಯೋಗಶಕ್ತಿಯನ್ನು ಸ್ವಾರ್ಥಸಾಧನೆಗೆ ಉಪಯೋಗಿಸುವರೋ ಅಂತಹ ಅಲ್ಪಮತಿಗಳಿಗೆ ಅವುಗಳೇ ಅತಿಶಯ ಬಂಧಕವೂ ಅಧೋಗತಿದಾಯಕವೂ ಆಗುವುದರಲ್ಲಿ ಸಂಶಯವಿಲ್ಲ. ಆದರೆ ನಮ್ಮ ಕಥಾನಾಯಕರಂತೆ ಯಾರು ಕೇವಲ ಪರತಂತ್ರರಂತಿರುವರೋ ಅವರಿಂದ ನಡೆವ ಅಂತಹ ಮಾಹಾತ್ಮ್ಯಗಳು ಪ್ರಪಂಚಕ್ಕೆ ಚಮತ್ಕಾರಿಕವಾಗಿ ತೋರಿದರೂ, ಅವು ಅವರ ಸ್ವಾರ್ಥಕ್ಕೆ ಲೇಶಮಾತ್ರವೂ ಸಂಬಂಧಿಸುವುದಿಲ್ಲವಾದುದರಿಂದ ಅವರ ತೇಜಸ್ಸೂ ಕೀರ್ತಿಯೂ ಅವುಗಳ ಮೂಲಕ ಮೇಲೆ ಮೇಲೆ ಹೆಚ್ಚುತ್ತಾ ಹೋಗುವುದಲ್ಲದೆ, ಜನಾಂಗಜೀವನಕ್ಕೆ ಕನ್ನಡಿಯಂತಿರುವ ಅಂತಹ ಮಹಾಪುರುಷರ ಆದರ್ಶದಿಂದ ಸಾಮಾನ್ಯರೂ ಭಗವನ್ಮಹಿಮೆಯನ್ನು ತಿಳಿದು, ಸನ್ಮಾರ್ಗದಲ್ಲಿ ನಡೆಯತೊಡಗಲು ಸಹಾಯಕವಾಗುವುವು. ಮಾಹಾತ್ಮ್ಯಗಳನ್ನು ಪ್ರಕಟಿಸಬೇಕೆಂದು ಅವರು ಇಚ್ಛಿಸಬೇಕಾದ್ದಿಲ್ಲ-ಮರಗಳಿಂದ ಅವುಗಳ ಪ್ರಯತ್ನ ಲೇಶವೂ ಇಲ್ಲದೆಯೇ ಬೀಳುವ ನೆರಳು ಬಿರುಬಿಸಿಲಿನಲ್ಲಿ ಬಳಲಿದ ಪ್ರಾಣಿಗಳಿಗೆ ಆಪ್ಯಾಯನವನ್ನುಂಟುಮಾಡುವಂತೆ, ಅವರಿಂದ ತಾನೇತಾನಾಗಿ-ಸ್ವಾಭಾವಿಕವಾಗಿಯೋ ಎಂಬಂತೆ ಪ್ರಕಟವಾಗುವ ಅಂತಹ ಮಾಹಾತ್ಮ್ಯವು ಜಗದುದ್ಧಾರಕ ಹೇತುವಾಗುವುದು. ಈ ಅಧ್ಯಾಯದಲ್ಲಿ ನಮ್ಮ ಕಥಾನಾಯಕರಿಂದ ಪ್ರಕಟವಾದ ಅಂತಹ ಮಹಾತ್ಮೆಗಳಲ್ಲಿ ಕೆಲವನ್ನು ಹೇಳುತ್ತೇವೆ.

ಶ್ರೀರಾಮಚರಿತಮಾನಸಾದಿ ಗ್ರಂಥಗಳು ರಚನೆಯಾಗಿ ಪಂಡಿತಪಾಮರವರ್ಗಗಳೆರಡರಿಂದಲೂ ಗೃಹೀತವಾಗಿ ತುಲಸೀದಾಸರ ಕೀರ್ತಿಯು ಶುಕ್ಲಪಕ್ಷದ ಚಂದ್ರಕಾಂತಿಯಂತೆ ಮನೆಯಿಂದ ಮನೆಗೆ ಗ್ರಾಮದಿಂದ ಗ್ರಾ

ಮಕ್ಕೆ ಊರಿನಿಂದ ಊರಿಗೆ ದೇಶದಿಂದ ದೇಶಕ್ಕೆ ಹಬ್ಬುತ್ತಾ ಹೋಯಿತು. ಅದನ್ನು ಕೇಳಿದವರೆಲ್ಲರೂ, ಆ ಮಹನೀಯರನ್ನು ಕಣ್ಣಾರೆ ದರ್ಶನಮಾಡಿ ಧನ್ಯರಾಗಬೇಕೆಂದು ಅವರಿದ್ದ ಸ್ಥಳಕ್ಕೆ ಯಾತ್ರೆ ಹೊರಡತೊಡಗಿದರು. ಅವರ ವಾಸಸ್ಥಳವಾದ ಆಶ್ರಮವು ದಿವ್ಯಕ್ಷೇತ್ರವೆಂಬಂತಾಯಿತು. ಸಾಮಾನ್ಯಜನರು ಮಾತ್ರವಲ್ಲ-ಮೊಗಲ್‌ಚಕ್ರವರ್ತಿ ಅಕ್ಬರನ ಮಂತ್ರಿಶೇಖರನಾದ ತೋಡರಮಲ್ ಎಂಬ ಮಹಾಪ್ರತಾಪಿ ಜಹಗೀರ್‌ದಾರನೂ ಅಂಬರ್ ಸಂಸ್ಥಾನದ ಮಹಾರಾಜಾ ಮಾನ್‌ಸಿಂಗ್, ಆತನ ಸಹೋದರ ಜಗತ್‌ಸಿಂಗ ಮುಂತಾದ ಬಹು ಪ್ರತಾಪಿ ಜನರೂ ಆತನ ದರ್ಶನಕ್ಕೆಂದು ಆಗಾಗ ಬಂದು ಆತನನ್ನು ಗೌರವಿಸಿ ಹೋಗುತ್ತಿದ್ದುದು ಪದ್ಧತಿಯಾಗಿತ್ತು. ಒಂದುದಿನ ಒಬ್ಬಾನೊಬ್ಬ ಮನುಷ್ಯನು-ಗೋಸ್ವಾಮಿಯವರನ್ನು ಕುರಿತು—'ಮಹಾಸ್ವಾಮಿಾ, ಹಿಂದೆ ತಮ್ಮನ್ನು ನೋಡಲು ಒಬ್ಬರೂ ಬರುತ್ತಿರಲಿಲ್ಲ. ಈಗ ಏನು ಇಂತಹ ದೊಡ್ಡ ಮನುಷ್ಯರೆಲ್ಲರೂ ತಮ್ಮ ದರ್ಶನಕ್ಕೆಂದು ಬರುತ್ತಿದ್ದಾರಯಲ್ಲ-ಇದಕ್ಕೆ ಕಾರಣವೇನು?" ಎಂದು ಪ್ರಶ್ನಿಸಿದನಂತೆ ! ಅದಕ್ಕೆ ಅವರು:—ಅಪ್ಪಾ, ಹಿಂದೆ ನಾನು ಮನೆಯಿಂದಮನೆಗೆ ಭಿಕ್ಷವನ್ನೆತ್ತಿ ಜೀವಿಸಿದೆನು. ಆಗ ನನಗೆ ಜನರು ಒಂದು ಕವಡೆಯನ್ನು ಕೊಡುವುದೂ ಕಷ್ಟವಾಗಿತ್ತು. ಆಗ ನನ್ನಿಂದ ಯಾರಿಗೇನು ಪ್ರಯೋಜನವಿತ್ತು ? ಆದರ ದೀನರಕ್ಷಕನಾದ ಶ್ರೀರಾಮಮೂರ್ತಿಯು ನನ್ನ ಬೆಲೆಯನ್ನು ಹೆಚ್ಚಿಸಿದನು. ಮನೆಮನೆಗೆ ಭಿಕ್ಷೆಗಾಗಿ ತಿರುಗುತ್ತಿದ್ದ ನನ್ನ ಪಾದಗಳನ್ನು ಈಗ ರಾಜರು ಪೂಜಿಸುತ್ತಿದ್ದಾರೆ. ಇದರಲ್ಲಿ ಇಷ್ಟೇ ವ್ಯತ್ಯಾಸ. ಇದನ್ನು ತಿಳಿ. ಆಗ ನಾನು ರಾಮವಿರಹಿತನಾಗಿದ್ದೆನು. ಈಗ ರಾಮಸಹಿತನಾಗಿದ್ದೇನೆ."

ಐಶ್ವರ್ಯವಂತರು ಬಡವರು ಎಂಬ ಭೇದವಿಲ್ಲದೆ, ಅಧಿಕ ಸಂಖ್ಯೆಯ ಭಕ್ತಾದಿಗಳು ಶ್ರೀ ಗೋಸ್ವಾಮಿಯವರ ಆಶ್ರಮಕ್ಕೆ ಬಂದು ಹೋಗತೊಡಗಿದರು. ಕಾಣಿಕೆ ದಾನಧರ್ಮಾದಿಗಳೂ ವಿಶೇಷರೀತಿಯಿಂದ ಅರ್ಪಿತವಾಗುತ್ತಿದ್ದುವು. ಆಶ್ರಮದಲ್ಲಿನ ಪಾತ್ರೆಪದಾರ್ಥಗಳೂ ಬೆಳ್ಳಿಬಂಗಾರದುವಾದುವು. ಕೇವಲ ವಿರಾಗಿಗಳಾದ ಅವರ ಆಶ್ರಮದಲ್ಲಿ ಬೆಳ್ಳಿಬಂಗಾರದ ಪದಾರ್ಥಗಳೆಂದು ಅವುಗಳನ್ನು ಸಹ ಗಮನವಿಟ್ಟು ಭದ್ರಪಡಿಸುವ ವ್ಯವಸ್ಥೆ ಇರ

ಲಿಲ್ಲ. ಇದನ್ನು ಕಂಡ ಕೆಲವುಂದಿ ಕಳ್ಳರಿಗೆ ದುರ್ಬುದ್ಧಿ ಹುಟ್ಟಿತು. ಒಂದ
ದಿನ ರಾತ್ರಿ ಅವರಲ್ಲಿಬ್ಬರು, ಎಲ್ಲರೂ ಮಲಗಿದ್ದಾಗ ಆಶ್ರಮವನ್ನು ಪ್ರವೇಶಿಸಿ,
ಒಡವೆ ವಸ್ತ್ರ ಪಾತ್ರ ಪದಾರ್ಥಗಳನ್ನು ಸಂಗ್ರಹಿಸಿಕೊಂಡು ಹೊರಡಲನು
ವಾಗುವ ವೇಳೆಗೆ, ಬಾಗಿಲಬಳಿ ಧನುರ್ಬಾಣಧಾರಿಗಳಾಗಿ ನಿಂತ ದಿವ್ಯ ಶ್ಯಾಮ
ಸುಂದರ ವಿಗ್ರಹದ ಶಿಪಾಯಿಗಳಿಬ್ಬರು ಅವರಿಗೆ ದೃಷ್ಟಿಗೋಚರರಾದರು.
ಆ ಅಪೂರ್ವಮೂರ್ತಿಗಳನ್ನು ಕಂಡ ಅವರು ಬೆದರಿ, ಆ ಪದಾರ್ಥಗಳನ್ನು ಅಲ್ಲೇ
ಬಿಟ್ಟು ಹೊರಟರು. ಹಾಗೆ ಬರಿಗೈಲಿ ಹೊರಹೊರಟ ಅವರಿಗೆ ಆ ಮೂ
ರ್ತಿಗಳೂ ಕಾಣಿಸಲಿಲ್ಲ, ಅಲ್ಲದೆ ಹೊರಕ್ಕೆ ಹೋಗಲು ಯಾವ ತಡೆಯೂ
ಉಂಟಾಗಲಿಲ್ಲ. ಆದರೆ ಅವರು ಅಷ್ಟಕ್ಕೇ ನಿರಾಶರಾಗಲಿಲ್ಲ. ಪುನಃ
ಮತ್ತೊಂದು ದಿನ ಬಂದು, ಅವುಗಳನ್ನು ಸಂಗ್ರಹಿಸಿಕೊಂಡರು. ಬಾಗಿ
ಲಿಗೆ ಬರುವವೇಳೆಗೆ, ಪುನಃ ಆ ಸೇವಕರ ದರ್ಶನವಾಯಿತು. ಆಗ ಅವರು
ಬೆದರಿ ನಡುಗಿಹೋದರು. ಬೆಳಗಿನವರಗೂ ಅಲ್ಲಾಡದೆ ಹೊರಡಲಾರದೆ,
ಶಿಲಾಪ್ರತಿಮೆಗಳಂತೆ ನಿಂತುಬಿಟ್ಟರು. ಬೆಳಗಾದಮೇಲೆ ಆಶ್ರಮಕ್ಕೆ ಕಳ್ಳರು
ಬಿದ್ದರೆಂಬ ವಾರ್ತೆಯು ಗೋಸ್ವಾಮಿಯವರಲ್ಲಿಗೆ ತರಲ್ಪಟ್ಟಿತು. ಶ್ರೀ
ತುಲಸೀದಾಸರು, ಆ ಪದಾರ್ಥಗಳ ಗಂಟುಗಳೊಂದಿಗೆ ಅವರನ್ನು ಕರೆಸಿ
ಕೊಂಡು,–'ಅಯ್ಯಾ ಇವುಗಳನ್ನು ಗಂಟುಕಟ್ಟಿಕೊಂಡು ಸಿದ್ಧರಾದ ನೀವು,
ಕತ್ತಲಲ್ಲೇ ಹೊರಟು ಪಾರಾಗಿಹೋಗದೆ, ಹೀಗೆ ಸಿಕ್ಕಿಬೀಳಲು ನಿಂತಿ
ರೇಕೆ?'' ಎಂದು ಪ್ರಶ್ನೆ ಮಾಡಲು, ಆ ಕಳ್ಳರು–'ಮಹಾಸ್ವಾಮಿ ನಮ್ಮ
ಅಪರಾಧವನ್ನು ಕ್ಷಮಿಸಿ ಕಾಪಾಡಬೇಕು. ದುರ್ಬುದ್ಧಿಗಳಾದ ನಾವು ಈ
ದುಷ್ಕಾರ್ಯಮಾಡಿ, ಬಾಗಿಲಿಗೆ ಬರುವ ವೇಳೆಗೆ ಯಾರೋ ಶ್ಯಾಮವರ್ಣದ
ಧನುರ್ಧಾರಿಗಳಿಬ್ಬರು, ತೀಕ್ಷ್ಣನೋಟದಿಂದ ನಮ್ಮನ್ನು ನೋಡತೊಡಗಿ
ದರು. ಒಡನೆ ನಮ್ಮ ಕೈಕಾಲು ಸತ್ವವಡಗಿ, ಮುಂದೆ ಹೆಜ್ಜೆ ಇಡಲು
ಕಾಲುಬಾರದೆ ಇಲ್ಲೇ ನಿಂತುಬಿಟ್ಟೆವು' ಎಂದು ವಿಜ್ಞಾಪಿಸಿದರು. ಒಡನೆ
ತುಲಸೀದಾಸರು–'ಅಕಟಾ ನಾನೆಂತಹ ದ್ರೋಹಿಯಾದೆನಲ್ಲಾ! ತುಚ್ಛ
ವಾದ ಈ ಪದಾರ್ಥಗಳ ರಕ್ಷಣೆಗಾಗಿ ಪ್ರಭು ರಾಮಚಂದ್ರನು ಇಲ್ಲಿ ಕಾವ
ಲುಗಾರನಾಗಬೇಕಾಯಿತೆ?'' ಎಂದು ಮರುಗಿ, ಅವುಗಳನ್ನೆಲ್ಲಾ ಅವರಿಗೇ
ಕೊಡಿಸಿ ಹೊರಟುಹೋಗೆಂದರು. ಈ ಪ್ರಸಂಗವನ್ನು ನೋಡಿದ ಆ ಚೋ

ರರು, ತಮ್ಮ ಹೇಯವೃತ್ತಿಗಾಗಿ ನಾಚಿಕೆಪಟ್ಟು, ಪಶ್ಚಾತ್ತಾಪದಿಂದ, ಆ ಸಾಧುವರ್ಯರ ಪಾದಗಳಿಗೆ ಅಡ್ಡಬಿದ್ದು, ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡುದಲ್ಲದೆ, ಮುಂದೆ ತಮ್ಮಾ ಚೌರ್ಯವೃತ್ತಿಯನ್ನು ಬಿಟ್ಟು, ಅವರ ಶಿಷ್ಯರಾಗಿ ಅವರ ಬಳಿಯಲ್ಲೇ ನಿಂತುಬಿಟ್ಟರು.

ಮತ್ತೊಂದು ದಿನ ಇನ್ನೊಂದು ವಿಚಿತ್ರ ನಡೆಯಿತು. ಒಬ್ಬಾನೊಬ್ಬ ಬ್ರಾಹ್ಮಣನು ಮೃತನಾದನು. ಅವನ ಶವವನ್ನು ಅನುಬಂಧಿಗಳು ದಹನಕ್ಕಾಗಿ ಒಯ್ಯುತ್ತಿದ್ದರು. ಆತನ ಪತ್ನಿಯು ಸಹಗಮನಕ್ಕಾಗಿ ಶೃಂಗರಿಸಿಕೊಂಡು ಹಿಂದ ಹೋಗುತ್ತಿದ್ದಳು. ಮಾರ್ಗದಲ್ಲಿ ಶ್ರೀ ಗೋಸ್ವಾಮಿಯವರ ಆಶ್ರಮವು ದೊರಕಲು, ಆ ಸಾಧ್ವಿಯು ಅವರ ಪಾದಗಳಿಗೆ ನಮಸ್ಕರಿಸಿದಳು. ಒಡನೆ ಅವರು-'ಸೌಭಾಗ್ಯವತೀಭವಾ' ಎಂದು ಆಶೀರ್ವದಿಸಿದರು. ಅದನ್ನು ಕೇಳಿದ ಸುತ್ತಲಿದ್ದ ಜನರು,-'ಸ್ವಾಮೀ ಈಕೆಯ ಗಂಡನು ಮೃತನಾಗಿದ್ದಾನೆ. ಈಕೆ ಈಗ ಸಹಗಮನಕ್ಕಾಗಿ ಹೋಗುತ್ತಿದ್ದಾಳೆ. ಇವಳಿಗೆ ಗೋಸ್ವಾಮಿಯವರು ಹೀಗೆ ಆಶೀರ್ವಾದ ಮಾಡೋಣವಾಯಿತಲ್ಲಾ!" ಎಂದು ನುಡಿದರು. ಆಗಲಾಸಾಧುವರ್ಯರು ಲೇಶಮಾತ್ರವೂ ಕಾತರರಾಗದೆ ಹಸನ್ಮುಖದಿಂದ-'ಅಯ್ಯಾ ನನ್ನ ಬಾಯಿಂದ ಶ್ರೀರಾಮನು ಆಶೀರ್ತಿ ನುಡಿಸಿದ್ದಾನೆ. ಶ್ರೀರಾಮನು ಸತ್ಯಪ್ರತಿಜ್ಞನು. ಅದನ್ನು ಸತ್ಯಮಾಡುವ ಭಾರವು ಆತನ ಮೇಲೆಯೇ ಬಿದ್ದಿದೆ' ಎಂದು ನುಡಿದು ಸ್ನಾನಕ್ಕೆ ತೆರಳಿದರು. ಅತ್ತ ಶವವು ಜೀವಿಸಿ-ಆ ಬ್ರಾಹ್ಮಣನೆದ್ದು ಮನೆಗೆ ನಡದನು. ಎಲ್ಲರೂ ಪರಮಾಶ್ಚರ್ಯಮಗ್ನರಾಗಿ ಹೋದರು.

ಶವವು ಪುನಃ ಜೀವಂತನಾಗಿ ಎದ್ದ ವಾರ್ತೆಯೂ-ಶ್ರೀ ಗೋಸ್ವಾಮಿಯವರ ಮಹಿಮೆಯೂ ಕ್ಷಣಮಾತ್ರದಲ್ಲಿ ಎಲ್ಲೆಲ್ಲೂ ಹಬ್ಬಿ ಬಾದಷಹನ ಕಿವಿಯವರೆಗೆ ಹೋಯಿತು ಆತನು ತುಲಸೀದಾಸರನ್ನು ಕರೆಸಿ 'ಏನಾದರೂ ಚಮತ್ಕಾರ ಮಾಡಿರಿ' ಎಂದನು. ಗೋಸ್ವಾಮಿಯವರು-'ಅಯ್ಯಾ ಶ್ರೀರಾಮನಾಮವೊಂದಲ್ಲದೆ ನನಗೆ ಬೇರಾವ ಚಮತ್ಕಾರವೂ ತಿಳಿಯದು, ಎಂದರು. ಎಷ್ಟು ಹೇಳಿದರೂ ಕೇಳದ, ಮೂರ್ಖಸ್ವಭಾವದ ಆ ಬಾದಷಹನು ಅವರನ್ನು ಕೈದಿನಲ್ಲಿರಿಸಿ, ಏನಾದರೊಂದು ಚಮತ್ಕಾರ ತೋರಿಸುವವರೆಗೆ ಹೊರಕ್ಕೆ ಬಿಡುವುದಿಲ್ಲವೆಂದು ನಿರ್ಬಂಧಿಸಿದನು. ಆಗ ಗೋಸ್ವಾಮಿ

ಗಳು, ಶ್ರೀ ಹನುಮಾನನನ್ನು ಪ್ರಾರ್ಥಿಸಿ, ತಮ್ಮ ಕಷ್ಟವನ್ನು ವಿಜ್ಞಾಪಿಸಿಕೊಂಡರು. ಆತನ ಅನುಗ್ರಹದಿಂದ ಒಡನೆ ಕಪಿಸೇನೆಯು ಬಂದು ಡಿಲ್ಲಿ ಪಟ್ಟಣವನ್ನೆಲ್ಲಾ ಮುತ್ತಿಕೊಂಡಿತು. ಪಟ್ಟಣಿಗರು ಕಪಿಗಳ ಉಪದ್ರವವನ್ನು ತಡೆಯಲಾರದೆ, ಬಾದಷಹನಲ್ಲಿ ಮೊರೆಯಿಟ್ಟುಕೊಂಡರು. ಆಗ ಆತನು ಗೋಸ್ವಾಮಿಗಳಲ್ಲಿಗೆ ಬಂದು ತನ್ನ ಅಪರಾಧವನ್ನು ಕ್ಷಮಿಸಿ, ಆ ಕಪಿಗಳ ಬಾಧೆಯನ್ನು ತಪ್ಪಿಸಬೇಕೆಂದು ಪ್ರಾರ್ಥಿಸಿಕೊಂಡನು ಒಡನೆ ದಯಾಮಯರಾದ ಅವರು ಪ್ರಜೆಗಳಿಗುಂಟಾದ ಬಾಧೆಗಾಗಿ ಮರುಗಿ ಹನುಮಾನನನ್ನು ಪ್ರಾರ್ಥಿಸಿದರು ಕಪಿಸೈನ್ಯವು ಕ್ಷಣಮಾತ್ರದಲ್ಲಿ ಅದೃಶ್ಯವಾಯಿತು.

ಡಿಲ್ಲಿಯಿಂದ ಮುಂದಕ್ಕೆ ಪ್ರಯಾಣಮಾಡಿದ ತುಲಸೀದಾಸರು ಬೃಂದಾವನಕ್ಕೆ ನಡೆದು ಅಲ್ಲಿ ಶ್ರೀಕೃಷ್ಣಸ್ವಾಮಿಯನ್ನು ದರ್ಶನಮಾಡಿದರು. ಅಲ್ಲೂ ಅವರ ಬಾಯಿಂದ ಅವರ ಇಷ್ಟದೈವವಾದ ಶ್ರೀರಾಮಪರಸ್ತೋತ್ರವೇ ಶ್ಲೋಕರೂಪವಾಗಿ ಹೊರಬಿದ್ದಿತು. ಅಲ್ಲಿದ್ದವರು-'ಅಯ್ಯಾ ಸಾಧುವೇ ಇಲ್ಲಿರುವ ಸ್ವಾಮಿಯು ಮದನಗೋಪಾಲನು. ಶ್ರೀರಾಮನಲ್ಲ'ವೆನ್ನಲು, ತುಲಸೀದಾಸರು-'ಅಯ್ಯಾ ಕಪಟನಾಟಕಸೂತ್ರಧಾರಿಯಾದ ನಮ್ಮ ರಾಮನು, ಯಾವ ವೇಷವನ್ನು ಬೇಕಾದರೂ ಧರಿಸಬಲ್ಲನು' ಎಂದು ನುಡಿದರು. ಭಕ್ತ್ಯಾಧಿಕ್ಯದಿಂದ ಭಜನೆಮಾಡಿದ ಅವರ ಪ್ರಾರ್ಥನೆಗೆ ಮೆಚ್ಚಿ ಶ್ರೀಕೃಷ್ಣಸ್ವಾಮಿಯು ಧನುರ್ಬಾಣಧಾರಿಯಾದ ಶ್ರೀರಾಮರೂಪದಿಂದಲೇ ಎಲ್ಲರಿಗೂ ದರ್ಶನವಿತ್ತನು ಎಲ್ಲರೂ ಪರಮಾಶ್ಚರ್ಯಮಗ್ನರಾದರು

ಶ್ರೀ ಗೋಸ್ವಾಮಿಯವರಿಂದ ರಚಿತವಾಗಿ ಪ್ರತ್ಯಕ್ಷಪ್ರಮಾಣವಾಗಿ ಕೋಟ್ಯಂತರ ಮಾನವ ಪ್ರಾಣಿಗಳ ಹೃದಯವೇದನೆಯನ್ನು ನಿವಾರಿಸಿ ಆಪ್ಯಾಯನಗೊಳಿಸುತ್ತಿರುವ ರಾಮಾಯಣ ಗ್ರಂಥರತ್ನವು ನವನಾಗರಿಕರ ದೃಷ್ಟಿಗೆ ಅಲೌಕಿಕವೆಂದು ತೋರಿಬರಬಹುದಾದ ಅವರ ಈ ಬಗೆಯ ಇತರ ಮಾಹಾತ್ಮ್ಯಗಳನ್ನೆಲ್ಲಾ ಮರೆಸಿಬಿಟ್ಟಿದೆ ಆ ಮಹತ್ವಪೂರ್ಣಗ್ರಂಥದಲ್ಲಿ ಪ್ರಕಟವಾಗುವ ಅವರ ಅಪರಿಮಿತಪಾಂಡಿತ್ಯ, ಶಬ್ದಭಾಂಡಾರ, ವಾಕ್ಯವಿನ್ಯಾಸಪಟುತ್ವ, ಅರ್ಥಗೌರವ, ಉಕ್ತಿವೈಚಿತ್ರ್ಯ ಎಲ್ಲಕ್ಕೂ ಹೆಚ್ಚಾಗಿ ಅಂತಃಕರಣವನ್ನು ತೆರೆದು ಹೃದಯಮೂಲಕ್ಕೆ ಪ್ರವೇಶಿಸುವಂತಿರುವ ಅವರ ಮಾನ

ವೆಸ್ವಭಾವದ ವರ್ಣನಾವೈಖರಿ ಇವುಗಳು-ಅವರ ಇತರ ಅಮಾನುಷ ಮಹತ್ವಗಳು ಜನಾಂಗಕ್ಕೆ ಮರೆತುಹೋದರೂ ಅವರ ಪವಿತ್ರನಾಮವನ್ನು ಚಿರಜೀವಿಯನ್ನಾಗಿಸಲು ಸಾಕಾಗಿವೆ ಭಕ್ತಹೃದಯಸರ್ವಸ್ವವಾದ ಶ್ರೀರಾಮಚರಿತಮಾನಸ ಗ್ರಂಥರತ್ನವು ಜಗತ್ತಿಗೊಂದು ಮಹಾ ವರದಾನವೆನಿಸಿ ಶೋಭಿಸುತ್ತಿದೆ.

ಈ ಅಧ್ಯಾಯ ಪ್ರಾರಂಭದಲ್ಲಿ ಹೇಳಿದಂತೆ ಶ್ರೀ ತುಲಸೀದಾಸರು ತಮ್ಮ ಮಾಹಾತ್ಮ್ಯಾದಿಗಳಿಂದ ಮಾತ್ರವಲ್ಲದೆ ಗ್ರಂಥರಚನಾಮೂಲಕವೂ ವಿಷ್ಣುಭಕ್ತಿಪಂಥವನ್ನು ಪ್ರಪಂಚದಲ್ಲಿ ಅಭಿವೃದ್ಧಿಗೊಳಿಸಿ ಜಗದುದ್ಧಾರಕರಾದರು.



# ಉ ಪ ಸ ಂ ಹಾ ರ

ವಿಶಿಷ್ಟಾದ್ವೈತಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀರಾಮಾನುಜಾಚಾರ್ಯರನ್ನು ಅನುಸರಿಸಿ ಪ್ರಚಾರವಾದ ಶ್ರೀರಾಮಾನಂದರ ಮತಾನುಯಾಯಿಗಳಾದರೂ ಶ್ರೀ ತುಲಸೀದಾಸರು ಅದ್ವೈತಸಿದ್ಧಾಂತವನ್ನು ದ್ವೇಷಿಸುತ್ತಿರಲಿಲ್ಲ. ಶ್ರೀ ಶಂಕರಾಚಾರ್ಯರ ಮತಾನುಯಾಯಿಗಳಾದ ಶ್ರೀ ಮಧುಸೂದನ ಸರಸ್ವತಿಗಳಲ್ಲಿ ಬಹು ವಿಶ್ವಾಸವುಳ್ಳವರಾಗಿದ್ದರು ವಿಷ್ಣುಭಕ್ತಿ ಮಾಹಾತ್ಮ್ಯವನ್ನು ಪ್ರತಿಪಾದಿಸತಕ್ಕವರಾದರೂ ತಮ್ಮ ಗ್ರಂಥದಲ್ಲ ಶಿವನಿಗೂ ತಕ್ಕಷ್ಟು ಪ್ರಾಶಸ್ತ್ಯವನ್ನು ಕೊಟ್ಟಿರುತ್ತಾರೆ. ಗೋಸ್ವಾಮಿಯವರು ಜನಜೀವನದಲ್ಲಿ ನೆಲೆಸಿದ್ದ ನಾಸ್ತಿಕತೆ ಧರ್ಮದಾಂಭಿಕತೆಗಳನ್ನು ನೀಗಿಸಿ, ಬೋಧನೆ ಮಹಿಮೆಗಳ ಮೂಲಕವೂ ತಮ್ಮ ಪರಮಸಾಧು ಜೀವನದ ಮೂಲಕವೂ ಆ ಮಹತ್ಕಾರ್ಯವನ್ನು ಅಕ್ಷರಶಃ ನೆರವೇರಿಸಿದರು. ಅಂದು ಪ್ರಾರಂಭವಾದ ಅವರ ಆ ಮಹತ್ಕಾರ್ಯವು ಅಂದಿಗೆ ಮಾತ್ರ ನಿಲ್ಲಲಿಲ್ಲ. ಮೂರೂವರೆ ಶತಮಾನಗಳಾದರೂ ಇಂದಿಗೂ ಇನ್ನೂ ನಡೆದು ಬರುತ್ತಿದೆ. ಇನ್ನೂ ಸೂರ್ಯಚಂದ್ರಾದಿಗಳಿರುವವರೆಗೆ ನಡೆದುಬರುವುದೆಂಬುದಕ್ಕೆ ಸಂಶಯವಿಲ್ಲ.

'ಊರಕೆ ರಾರು ಮಹಾತ್ಮುಲು' ಎಂಬೊಂದು ಆಂಧ್ರಭಾಷಾ ಲೌಕಿಕೋಕ್ತಿಯಂತೆ ಮಹಾತ್ಮರ ಆಗಮನವು ಲೋಕಕ್ಕೆ ಉದ್ದೇಶರಹಿತವಾಗಿ ಆಗಲಾರದು. ಪ್ರಪಂಚದಲ್ಲಿ, ಕೋಟಿಸಂಖ್ಯೆಯ ಸಾಮಾನ್ಯರಿಂದ ಮಾಡಲಾಗಲಾರದಷ್ಟು ಅಗಾಧಕಾರ್ಯವನ್ನು ಇಂತಹ ಮಹಾತ್ಮರೊಬ್ಬರೇ ಮಾಡಿ ಮುಗಿಸುವರು. ಹಾಗೆ ಲೋಕೋದ್ಧಾರಕಾರ್ಯಕ್ಕಾಗಿ ಅವತರಿಸಿದ ನಮ್ಮ ಕಥಾನಾಯಕರೂ ತಮ್ಮ ಅವತಾರಕೃತ್ಯವನ್ನು ಪೂರ್ತಿಗೊಳಿಸಿ, ೧೨೬ ವರ್ಷಕಾಲ ಜೀವಿಸಿ, ಕೊನೆಗೆ ಜ್ವರ ಬಾಧೆಯಿಂದ ಸಂವತ್ ೧೬೮೦ (ಕ್ರಿ. ಶ ೧೬೨೩) ರಲ್ಲಿ ರಾಮನಾಮಸ್ಮರಣಪೂರ್ವಕ ಅವರು ದೇಹತ್ಯಾಗ ಮಾಡಿದರು

**ದೋಹಾ** - **ರಾಮನಾಮ-ಜಸ ಬರನಿಕೈ, ಭಯಉ ಚಹತ ಅಬ್ ಮೌನ |**
**ತುಲಸೀಕೇ ಮುಖ ದೀಜೀಯೇ ಅಬ್ ಹಿ ತುಲಸೀ ಸೋನ ||**

ಅಂದರೆ, (ಈ ವರೆಗೆ) ನಾನು ರಾಮನಾಮಪ್ರಭಾವವನ್ನು ವರ್ಣಿಸಿ ಈಗ ಮೌನವನ್ನು ವಹಿಸುತ್ತೇನೆ. ತುಳಸೀದಳವನ್ನು 'ತುಲಸೀ (ದಾಸನ) ಯ ಬಾಯಲ್ಲಿಡಿ' ಎಂಬರ್ಥದ ಕೊನೆಯದೊಂದು ದೋಹಾವನ್ನು ಉಚ್ಚರಿಸಿ ತರುವಾಯ ಮೌನವನ್ನು ಧರಿಸಿ ಅಂತ್ಯನಿಶ್ವಾಸ ಬಿಟ್ಟರೆಂದೂ ಉಲ್ಲೇಖವಿದೆ.

ಪರಮ ಸಾಧುಜೀವನ, ಪವಿತ್ರಚರಿತ್ರೆ, ಪರೋಪಕೃತಿ, ಸತ್ಯನಿಷ್ಠೆ ಭಗವದ್ಭಕ್ತಿ ಮುಂತಾದ ಸದ್ಗುಣ ಸಮೂಹದಿಂದ ಲೋಕೋತ್ತರ ಚರಿತ್ರರೆನಿಸಿದ ಶ್ರೀ ಗೋಸ್ವಾಮಿ ತುಲಸೀದಾಸರು ಭಾರತಲೋಕವನ್ನು ಕೃಪಾಕಟಾಕ್ಷದಿಂದ ಈಕ್ಷಿಸಲಿ, ದುರ್ದೈವದಿಂದ ದುಸ್ಥಿತಿಗಿಳಿದಿರುವ ಭಾರತ ಸಂತಾನರೂ ಅವರ ಸದ್ಗುಣಗಳನ್ನು ಗಳಿಸಿ, ಸದ್ಗ್ರಂಥ ಪಠನೆಯಿಂದ ಸನ್ಮಾರ್ಗದಲ್ಲಿ ಗಮಿಸತೊಡಗಿ, ತಮ್ಮ ಇಷ್ಟದೈವವಾದ ಶ್ರೀರಾಮಚಂದ್ರಮೂರ್ತಿಯ ಸಂಪೂರ್ಣಾನುಗ್ರಹಕ್ಕೆ ಪಾತ್ರರಾಗುವಂತೆ ಆಶೀರ್ವದಿಸಲಿ.

**ತಥಾಸ್ತು**



-:- ಶ್ರೀರಾಮಸಹಾಯಂ -:-

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ : —**

'ಇಸ್ಲಾಂ' ಮತಸ್ಥಾಪಕರಾದ ಹಜರತ್ ಮುಹಮ್ಮದ್ ಪೈಗಂಬರ್ ಯವರು, ನಮ್ಮ ಪ್ರಕೃತಕಥಾನಾಯಕರು ಪೈಗಂಬರ್ ಎಂಬ ಪದಕ್ಕೆ 'ದೇವದೂತ'ನೆಂದು ಅರ್ಥವಾಗುತ್ತದೆ ಆದುದರಿಂದ, ಮುಹಮ್ಮದ್ ಎಂಬುವರು ಪೈಗಂಬರರಾಗಿ ಬಂದರೆಂದು ಹೇಳುವುದರಲ್ಲಿ, ಅವರು ಮಾನವ ಲೋಕದ ಉದ್ಧಾರಕ್ಕಾಗಿ ಜಗತ್ಪಿತನಾದ ಭಗವಾನನಿಂದ ಕಳುಹಿಸಲ್ಪಟ್ಟ ಒಬ್ಬ ಭಗವದ್ಭಕ್ತಶಿರೋಮಣಿಗಳೆಂಬ ಭಾವನೆಯು ತೋರಿಬರುತ್ತದೆ 'ಧರ್ಮವು ನಾಶವಾಗಿ ಅಧರ್ಮವು ಪ್ರಬಲವಾದಾಗ, ಧರ್ಮರಕ್ಷಣೆಗಾಗಿಯೂ ಅಧರ್ಮವನ್ನು ಧ್ವಂಸಮಾಡಲಿಕ್ಕಾಗಿಯೂ, ಭಗವಂತನೇ ಆಗಲಿ, ಆತನ ಅನುಚರರಲ್ಲಿ ಒಬ್ಬರಾಗಲಿ ಅವತರಿಸುತ್ತಾರೆ' ಎಂಬ ನಮ್ಮಲ್ಲಿ ರೂಢವಾಗಿರುವ ಭಾವನೆಯು, ಕೇವಲ ನಮ್ಮ ದೇಶಕ್ಕೆ ಮಾತ್ರವಲ್ಲ,-ಪ್ರಪಂಚದ ಯಾವ ದೇಶಕ್ಕಾದರೂ ಆ ತತ್ವವು ಅನ್ವಯಿಸುತ್ತದೆ ಭಗವಂತನಿಂದ ಸೃಷ್ಟವಾದ ಈ ಸುಂದರಭೂಲೋಕವು ದುಷ್ಟಜನರ ಸ್ವಾರ್ಥತೆ ದುರಭಿಮಾನ ದಂಭದರ್ಪಗಳಿಗೂ ದುರಾಸೆಗಳಿಗೂ ಒಳಗಾಗಿ ನರಕವಾಗಿ ಪರಿಣಮಿಸಿದಾಗ, ಅಂತಹ ದುಸ್ಥಿತಿಯಿಂದ ತನ್ನನ್ನು ತಪ್ಪಿಸಿ ಕಾಪಾಡೆಂದು, ಆ ಜಗತ್ಪಿತನನ್ನು ಕುರಿತು, ಬೇಡಿಕೊಳ್ಳದಿದ್ದರೆ-ಜಗದ ಜೀವಿಗಳಿಗೆ ಬೇರೆ ಮಾರ್ಗವೇನಿದೆ ? ಮನುಷ್ಯನು ತನ್ನ ಅಭಿಮಾನ ಅಹಂಕಾರಗಳಿಗೆ ವಶನಾಗಿ ದೇವರನ್ನು ದೂರೀಕರಿಸಿ ಎಷ್ಟು ದಿನಗಳನ್ನು ಅಜ್ಞಾನವಸ್ಥೆಯಲ್ಲಿದ್ದು ಕಳೆದರೂ, ಕೊನೆಗೆ ಎಂದಾದರೊಂದು ದಿನ ಪೂರ್ಣವಾಗಿ ಆ ದಯಾಮಯನ ಶರಣುಹೋಗದಿದ್ದರೆ ಅನ್ಯಥಾ ದಿಕ್ಕೇ ಇಲ್ಲ !

ಏಷ್ಯಾ ಭೂಖಂಡದ ಪಶ್ಚಿಮದಿಕ್ಕಿನ ಕೊನೆಯಾದ ಅರೇಬೀ ದೇಶದಲ್ಲಿ ಬಹುಕಾಲದಿಂದ ವಾಸಿಸುತ್ತಿದ್ದ ಮೂರ್ಖರೂ ಪೋರಟರೂ ಆಗಿದ್ದ ಅರೇಬೀ ಜನಾಂಗಕ್ಕೆ ಈ ಭಗವನ್ನಿರ್ಭರತೆಯನ್ನು ತಂದಿತ್ತು ಅವರನ್ನು ಮನುಷ್ಯವರ್ಗಕ್ಕೆ ಯೋಗ್ಯರನ್ನಿಸಿದವರು ನಮ್ಮ ಕಥಾನಾಯಕರು. ಯಾವ ಮಹಾಪುರುಷನಾದರೂ ಕಾಲ ದೇಶ ವರ್ತಮಾನಗಳನ್ನನುಸರಿಸಿ, ಧಾರ್ಮಿಕ ನೈತಿಕ ಸಾಮಾಜಿಕ ರಾಜಕೀಯ ಸ್ಥಿತಿಗತಿಗಳಲ್ಲಿ ಸುಧಾರಣೆಗಳನ್ನು ಮಾಡತೊಡಗುವನಲ್ಲದೆ ಬೇರೆಯಿಲ್ಲ ಮುಹಮ್ಮದ್‌ಯವರು ಜನ್ಮಿಸಿ,

ತಮ್ಮ ಉದ್ದಿಷ್ಟಕಾರ್ಯವನ್ನು ಕೈಗೊಳ್ಳುವುದಕ್ಕೆ ಪೂರ್ವದಲ್ಲಿ ಅರಬ್ಬೀದೇಶ
ವಿದ್ದ ಸ್ಥಿತಿಯನ್ನು ಕುರಿತು ಗಮನಿಸಿದಲ್ಲದೆ, ಆ ಮಹಾಪುರುಷರು ಮಾಡಿದ
ಮಹತ್ಕಾರ್ಯದ ವಿಷಯದಲ್ಲಿ ಆದರಭಾವವು ಹುಟ್ಟದು. ಪರಸ್ಪರದ್ವೇಷಾ
ಸೂಯೆಗಳಿಂದಲೂ, ಒಳಜಗಳ ಕಡಿದಾಟ ಹೊಡೆದಾಟಗಳಿಂದಲೂ, ಅರ್ಥ
ವಿಲ್ಲದ ಅಸಂಖ್ಯಾತ ಮೂರ್ತಿಪೂಜೆ ಮೂಢಾಚಾರಗಳಿಂದಲೂ ಧರ್ಮಕ್ಕೂ
ನೀತಿಗೂ ನ್ಯಾಯಕ್ಕೂ ದೂರರಾಗಿ, ನರರಾಕ್ಷಸರೋ ಎಂಬಂತಹ ಸ್ಥಿತಿ
ಗಿಳಿದಿದ್ದ ತಮ್ಮ ಜನಾಂಗದವರಲ್ಲಿ, ದೈವಭಕ್ತಿ ನೀತಿನ್ಯಾಯಗಳ ಪಾಲನೆ
ಪರಸ್ಪರ ಸ್ನೇಹಪ್ರೀತಿಗಳು ದಯೆ ತಾಳ್ಮೆ ಮುಂತಾದ ದೈವಿಕ ಗುಣಗಳ
ಬೀಜಗಳನ್ನು ಬಿತ್ತಿ, ನಮ್ಮ ಕಥಾನಾಯಕರು ಲೋಕೋದ್ಧಾರಕರಾದರು.
ಈ ಮಹತ್ಕಾರ್ಯಸಾಧನೆಯಲ್ಲಿ, ಅವರಿಗೆ ಪ್ರಾಪ್ತವಾದ ಕಷ್ಟನಷ್ಟಗಳು,
ದೇಹಶ್ರಮೆ ಪ್ರಾಣಾಪಾಯ ಮುಂತಾದುವುಗಳನ್ನೂ, ಅವುಗಳಲ್ಲೊಂದ
ನ್ನೂ ಲಕ್ಷ್ಯಮಾಡದೆ ಕೇವಲ ತಮಗೆ ಭಗವಂತನಿಂದ ಆಜ್ಞಪ್ತವಾದ ಆ
ಕಾರ್ಯವನ್ನು ಮಾಡತಕ್ಕುದೇ ತಮ್ಮ ಕರ್ತವ್ಯವೆಂದು ತಿಳಿದಿದ್ದ ಅವರ
ದೃಢಪ್ರತಿಜ್ಞೆಯನ್ನೂ ನೋಡಿದರೆ, ತಮ್ಮ ಪಾಲಿಗೆ ಬಂದ ಆ ಕಾರ್ಯವನ್ನು
ನೆರವೇರಿಸುವುದರಲ್ಲಿ ಅವರಿಗೆ ಶ್ರದ್ಧೆ ಮತ್ತು ಭಗವನ್ನಿರ್ಭರತೆಗಳು ಎಷ್ಟು
ಪ್ರಮಾಣದಿಂದ ಇದ್ದುವೆಂಬುದು ಗೋಚರವಾಗುತ್ತದೆ.

ಯಾವುದೊಂದು ಮತದ ಮುಖ್ಯತತ್ವಗಳನ್ನು ತಿಳಿಯಬೇಕಾಗಿದ್ದರೆ
ಅದರ ಸ್ಥಾಪಕರ ಮೂಲೋದ್ದೇಶಗಳನ್ನೂ ಅವರು ಏರ್ಪಡಿಸಿದ ನಿಯಮ
ನಿಬಂಧನೆಗಳನ್ನೂ ಕುರಿತು ವಿಚಾರಮಾಡಬೇಕಲ್ಲದೆ, ಧರ್ಮ-ಮತ ಎಂದ
ರೇನೆಂಬುದರ ಗಂಧವನ್ನೇ ಅರಿಯದೆ ಕೇವಲ ಅಭಿಮಾನ ಅಹಂಕಾರಾದಿ
ಗಳಿಂದ ಮೆರೆಯುತ್ತಾ, ತತ್ವವನ್ನು ಬಿಟ್ಟು-ಅರ್ಥವಿಲ್ಲದ ಪದ್ಧತಿಗಳಿಗಾಗಿ
ಬಡಿದಾಡುವ ಕೆಲವು ಮೂರ್ಖರ-ಧೂರ್ತರ ನಡವಳಿಕೆಯಿಂದ ಮಾತ್ರ
ನಿರ್ಧರಿಸಲಾಗದು. ಸದ್ಯಃ ನಾವು, ಕಳೆದ ಸಹಸ್ರಾರು ವರ್ಷಗಳಿಂದಲೂ,
ಭಾರತದೇಶದಲ್ಲಿ ನಮ್ಮ ನೆರೆಯವರಾಗಿ ವಾಸಿಸುತ್ತಿರುವ ಇಸ್ಲಾಂ ಮತಸ್ಥರ
ವಿಷಯವೇನು, ಅವರ ಮತಧರ್ಮಗಳಿಗೂ ನಮ್ಮ ಮತಧರ್ಮಗಳಿಗೂ ಯಾವ
ಯಾವ ವಿಷಯಗಳಲ್ಲಿ ಸಾಮ್ಯವಿದೆ-ವ್ಯತ್ಯಾಸವಿದೆ, ಎಂಬುದನ್ನು ತಿಳಿಯ
ಲಾಸಿಸದೆ, ಅವರಲ್ಲಿ ಕೇವಲ ಅಜ್ಞರೂ ಧೂರ್ತರೂ ಆದವರೊಂದಿಗೆ-ಲೌಕಿಕ
ವ್ಯವಹಾರದಲ್ಲಿ ಪ್ರಾಪ್ತವಾಗುವ ನಿಕಟಸಂಬಂಧದಿಂದ ಮಾತ್ರ ಅವರ ಮತ
ಧರ್ಮಗಳ ಸ್ಥಿತಿಗತಿಗಳನ್ನು ನಿರ್ಧರಿಸತೊಡಗುತ್ತೇವೆ. ಅವರಾದರೂ ನಮ್ಮ

ಆಧಾರವಾಗಿ ದೊರೆತ ಗ್ರಂಥಗಳಲ್ಲಿ ಸರ್ ವಿಲಿಯಂ ಮ್ಯೂಇರ್ ಕೆ.ಸಿ. ಎಸ್ ಐ., ಎಲೆಲ್ ಡಿ, ಡಿ.ಸಿ ಎಲ್, ಪಿ.ಎಚ್.ಡಿ., ಯವರ 'ಲೈಫ ಆಫ್ ಮೊಹಮ್ಮದ್' ಎಂಬ ಗ್ರಂಥವೂ ಮತ್ತು ಮಿರ್ಜಾ ಅಬುಲ್ ಫಾಜಲ್ ಎಂಬ ಮಹಮ್ಮದೀಯ ಸದ್ಗೃಹಸ್ಥರ 'ಲೈಫ್ ಆಫ್ ಮೊಹಮ್ಮದ್' ಎಂಬ ಗ್ರಂಥವೂ ಮುಖ್ಯವಾದುವುಗಳು ಆ ಗ್ರಂಥಗಳಿಂದ ದೊರೆತ ಸಹಾಯಕ್ಕಾಗಿ ಆಯಾ ಗ್ರಂಥಕರ್ತರುಗಳಿಗೆ ಕೃತಜ್ಞರಾಗಿದ್ದೇವೆ

ಗ್ರಂಥಮಾಲೆಯಲ್ಲಿ ಕೇವಲ ಪೌರಾಣಿಕಕಾಲದ ಭಕ್ತಾದಿಗಳೂ, ಮತಸ್ಥಾಪಕರೂ, ವೀರರೂ ಮುಂತಾದ ಮುಖ್ಯವಾಗಿ ಭಾರತದೇಶದ ಮಹಾಪುರುಷರ ಚರಿತ್ರೆಗಳನ್ನೇ ಓದಿದ ವಾಚಕರಿಗೆ, ಈ ಭಾರತೇತರ ಮಹಾಪುರುಷರ ಚರಿತ್ರೆಯು ಪ್ರಕಟವಾದ ವಿಚಾರವು ಕೌತುಕವನ್ನುಂಟುಮಾಡಬಹುದು ಆದರೆ, ಪ್ರಪಂಚದಲ್ಲಿ ಧರ್ಮೋದ್ಧಾರಕ್ಕಾಗಿ ಅವತರಿಸುವ ಮಹಾಪುರುಷವರ್ಗಕ್ಕೆ ದೇಶಕಾಲಗಳ ತಡೆಬಡೆಯಿಲ್ಲವೆಂಬುದನ್ನು ನಾವು ಮರೆಯಬಾರದು ಆದ್ಯಂತಸೃಷ್ಟಿಯೇ ಅವರ ಮನೆಯಾಗಿರುವುದರಿಂದ ಅವರಿಗೆ ಒಂದು ಸ್ವದೇಶ ಮತ್ತೊಂದು ವಿದೇಶ ಎಂಬುವಿಲ್ಲ ಅವರು ಭಗವತ್ಕಾರ್ಯಸಾಧಕರೂ, ಶಾಂತಿಸ್ಥಾಪಕರೂ ಆದುದರಿಂದ ಅವರು ನಮ್ಮ ದೃಷ್ಟಿಗೆ ಪರದೇಶದಲ್ಲಿ ಜನಿಸಿದವರಾದರೂ, ಧರ್ಮಮೂಲವಾಗಿ ಬಂಧುಗಳೇ ಆಗಿದ್ದಾರ ಅಲ್ಲದೆ, ಅವರ ಮತಾನುಯಾಯಿಗಳಾದ ಏಳುಕೋಟಿ ಮಹಮ್ಮದೀಯರಿಗೆ, ಭಾರತಭೂಮಿಯು ವಾಸಸ್ಥಾನವೂ ಮಾತೃಭೂಮಿಯೂ ಆಗಿರುವುದರಿಂದ ಆ ನಮ್ಮ ದೇಶಬಾಂಧವರ ಧರ್ಮಗುರುಗಳ ಜನನ-ಜೀವಿತಕಾರ್ಯಗಳನ್ನೂ, ಅವರ ಉದಾತ್ತಗುಣಗಳು, ಭಗವದ್ಭಕ್ತಿ, ಮಾನವವರ್ಗದಮೇಲೆ ಅವರಿಗಿದ್ದ ಪ್ರೇಮ ಮುಂತಾದುವುಗಳನ್ನೂ, ತಿಳಿದುಕೊಳ್ಳತಕ್ಕುದು ಅಯುಕ್ತವೆನಿಸಲಾರದು ಆದುದರಿಂದ ಅಂತಹ ಉನ್ನತಾಶಯಗಳನ್ನುಂಟಾಗಿ ನಿಷ್ಪಕ್ಷಪಾತಬುದ್ಧಿಯಿಂದಲೂ ಧಾರ್ಮಿಕಪ್ರೇಮದಿಂದಲೂ ಬರೆಯಲ್ಪಟ್ಟಿರುವ ಈ ಚರಿತ್ರೆಯನ್ನು ನಮ್ಮ ವಾಚಕಮಹಾಶಯರೂ ಕರ್ಣಾಟಕ ಬಾಲಕಬಾಲಿಕೆಯರೂ [illegible] ಗ್ರಂಥಮಾಲೆಯನ್ನು ಆದರಿಸಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ
ತಾ|| ೧೪—೯—೧೯೩೭

ಇತಿ ಸುಜನ ವಿಧೇಯ,
**ಯಂ. ರಾಮರಾವ್.**

ಶ್ರೀರಾಮಸಹಾಯಂ

ಮಹಮ್ಮದೀಯ ಮತಸ್ಥಾಪಕರಾದ

## ಹ ಜ ರ ತ್

# ಮಹಮ್ಮದ್ ಪೈಗಂಬರ್

## ಅಧ್ಯಾಯ ೧ "ಜನ್ಮಸ್ಥಾನ–ಜನ್ಮದಾತೃಗಳು"

ನಮ್ಮ ಮಾತೃಭೂಮಿಯಾದ ಭಾರತದೇಶಕ್ಕೆ ಧಾರ್ಮಿಕರೀತಿಯಿಂದ ಪ್ರಪಂಚದ ಸಮಸ್ತ ದೇಶಗಳ ಮತ್ತು ಜನಾಂಗಗಳವರ ಸಂಬಂಧವೂ ಇದೆ. ಧರ್ಮವಿಚಾರವು, ಜನಾಂಗ ಜೀವಿತಕ್ಕೆ ಮಾರ್ಗದರ್ಶಕವಾಗುವಂತೆ ಒಂದು ವಿಧಾಯಕರೂಪವನ್ನು ಹೊಂದಿದುದು ಪ್ರಾರಂಭಕ್ಕೆ ಈ ದೇಶದಲ್ಲೇ ಎಂದರೆ ಅದು ತಪ್ಪಲ್ಲ. ಭಾರತೀಯ ಮಹರ್ಷಿಗಳೂ ಧರ್ಮಸಂಸ್ಥಾಪಕರೂ, ಧರ್ಮವನ್ನು ವಿವಿಧ ದೃಷ್ಟಿಕೋಣಗಳಿಂದ ವಿಚಾರಿಸಿ, ತತ್ವಸಿದ್ಧಾಂತಗಳನ್ನು ಪ್ರಗಡಿಸಿರುತ್ತಾರೆ. ಆದುದರಿಂದಲೇ, ಹಿಂದೂ ಮತದಲ್ಲಿ, ಪೃಥ್ವಿಯ ಎಲ್ಲಾ ಮತಗಳ ಆದಿಮೂಲತತ್ವಗಳೂ ಕಂಡುಬರುತ್ತಿವೆ. ಧರ್ಮಸ್ವರೂಪವು ಹೀಗೆ ವಿವಿಧಮುಖಗಳಿಂದ ನಿರ್ಣಯವಾಗಿರುವುದರಿಂದ ಪೃಥ್ವಿಯ ಯಾವ ಮತಸಿದ್ಧಾಂತವೂ ಹಿಂದೂಮತಸಿದ್ಧಾಂತಕ್ಕೆ ವಿರೋಧಿಯೆನ್ನಿಸಲಾರದು. ಆದರೆ, ಒಂದು ಮತದವರ ಆಚಾರವಿಚಾರಗಳು ಉಡುಪು ಆಹಾರ ಮುಂತಾದುವುಗಳಿಗೂ ಮತ್ತೊಂದು ಮತದವರ ಉಡುಪು ಆಹಾರಗಳು ಆಚಾರವಿಚಾರ ಮುಂತಾದುವುಗಳಿಗೂ ಸಂಬಂ

ಥವೇ ಇಲ್ಲದಿರುವುದನ್ನು ಕಂಡು, ಮೇಲಿನ ನಮ್ಮ ಹೇಳಿಕೆಯು ಕೇವಲ ಅಭಿಮಾನಯುಕ್ತವಾದುದೆಂದು ತೋರಬಹುದು. ಅದು ಹಾಗಲ್ಲ. ಮತ ವಿಚಾರದಲ್ಲಿ ಎರಡು ಮುಖ್ಯ ವಿಷಯಗಳುಂಟು. ದೇವರಿಗೂ ಜೀವನಿಗೂ ಇರುವ ಸಂಬಂಧವಿಚಾರ ಒಂದು. ಜೀವನು ಈ ಲೋಕದಲ್ಲಿ ತನ್ನ ಗತಿಯನ್ನು ಸಾಧಿಸಿಕೊಂಡು ತನ್ನ ಪ್ರಭುವಾದ ದೇವರ ಸಾನ್ನಿಧ್ಯವನ್ನು ಸೇರುವಿಕೆಗೆ ಸಹಾಯಕವಾಗುವ ಮಾರ್ಗದವಿಚಾರ ಮತ್ತೊಂದು. ದೇವರಿಗೂ ಜೀವನಿಗೂ ಇರುವ ಸಂಬಂಧವನ್ನು ಕುರಿತು, ಭಾರತದೇಶದ ದ್ವೈತಾದ್ವೈತ ವಿಶಿಷ್ಟಾದ್ವೈತಮತಗಳು ದೀರ್ಘವಾಗಿ ವಿಚಾರ ನಡೆಯಿಸಿ ಅದರ ವೃದ್ಧಿಯು ಬೇರೆ ಮತಗಳು ಈ ವಿಷಯದಲ್ಲಿ ಅಷ್ಟು ಆಳಕ್ಕೆ ಪ್ರವೇಶಿಸಲಾವಶ್ಯಕ ಕಾಣದೆ ಹೋದವು. ಜೀವನು ದೇವರನ್ನು ಸೇರಲು ಸುಮಾರ್ಗ ಯಾವುದೆಂಬುದನ್ನು ಮಾತ್ರ ಎಲ್ಲಾ ಮತಗಳೂ ವಿವರಿಸಿವೆ. ಅಂತಹ ಮಾರ್ಗ ನಿರ್ಧಾರಣೆಯಲ್ಲೂ ಆಯಾ ದೇಶ ಕಾಲಮಾನ ಅಲ್ಲಿಯ ನಿವಾಸಿಗಳ ಸ್ಥಿತಿ ಪ್ರಾಕೃತಿಕ ಇತರ ಅನುಕೂಲತೆಗಳು ಇವನ್ನು ಅನುಸರಿಸಬೇಕಾದ ಜನರ ಗುಣ ಕರ್ಮಸ್ವಭಾವಗಳು ಮುಂತಾದುವುಗಳನ್ನೇ ಮುಖ್ಯವಾಗಿ ಅವಲಂಬಿಸಿರಬೇಕಾದ ಆವಶ್ಯಕತೆ ಇರುವುದರಿಂದಲೇ ಅಷ್ಟು ಬಗೆಯ ವ್ಯತ್ಯಾಸಗಳು ಕಂಡು ಬರುತ್ತಿವೆ. ಹೀಗಿದ್ದರೂ ಇದು ಸ್ವಾಭಾವಿಕವಾದುದು. ಅದು ಹೇಗೆಂದು ತಿಳಿಸುವದಕ್ಕೆ ಬೇರೆ ಬೇರೆ ಪ್ರತ್ಯಕ್ಷ ಉದಾಹರಣೆಗಳನ್ನು ಕೊಡಬೇಕಾಗಿದೆ.

ಪೃಥ್ವಿಯಲ್ಲಿ ಸದ್ಯಃ ಪ್ರಚಾರದಲ್ಲಿರುವ ಸುಪ್ರಸಿದ್ಧ ಮತಗಳಲ್ಲಿ ಕ್ರೈಸ್ತ ಮಹಮ್ಮದೀಯ ಮತ್ತು ಬೌದ್ಧ ಮತಗಳನ್ನು ಬಿಟ್ಟರೆ, ಮಿಕ್ಕ ಮತಸ್ಥಾಪಕರೆಲ್ಲರೂ ಸಾಮಾನ್ಯವಾಗಿ ಭಾರತದೇಶದಲ್ಲಿ ಜನ್ಮಿಸಿದವರೇ ಆಗಿದ್ದಾರೆ. ಆ ಮತಗಳವರು ಪ್ರತಿಪಾದಿಸಿದ ಪ್ರತ್ಯೇಕ ಧಾರ್ಮಿಕ ರೀತಿ ಆಚಾರಗಳಿಗೆ ಅವರವರ ದೇಶಸ್ಥಿತಿ ವಾಯುಗುಣ ಮುಂತಾದ ಪ್ರಕೃತಿಸ್ಥಿತಿಗಳು ಹೇಗೆ ಕಾರಣವೆಂದು ವಿಚಾರಿಸೋಣ! ಅರಬ್ಬೀ ದೇಶವು ಶುದ್ಧ ಬೆಂಗಾಡು. ಅಲ್ಲಿ ನಮ್ಮ ದೇಶದಂತೆ ಕಾಲಕಾಲಕ್ಕೆ ಮುಂಗಾರುಹಿಂಗಾರು ಮಳೆಗಳು ಬೀಳವು. ಶೀತೋಷ್ಣಗಳು ಇಲ್ಲಿಯಂತೆ ಸಮಾನಸ್ಥಿತಿಯಲ್ಲಿಲ್ಲ. ನೆಲವು ಫಲವತ್ತಾದುದಲ್ಲ. ಉತ್ಕೃಷ್ಟವಾದ ಪೈರುಪಚ್ಚೆಗಳು ಇಲ್ಲಿಯಂತೆ ಫಲವತ್ತಾಗಿ

ಬೆಳೆಸುವ. ವರ್ಷದ ಸದಾ ಕಾಲದಲ್ಲೂ ಹರಿಯುವ ಸ್ವಾದೂದಕ ಪೂರಿತಗಳಾದ ಜೀವನದಿಗಳು ಅಲ್ಲಿಲ್ಲ ಅಲ್ಲದೆ ಅನಾದಿಕಾಲದಿಂದಲೂ ಅಲ್ಲ ನೆಲೆಸಿದ ನಿವಾಸಿಗಳು ಒರಟರೂ ಅನಾಗರಿಕರೂ, ಶೀಘ್ರಕೋಪಿಗಳೂ ಕ್ರೂರರೂ ಆದವರು. ಅಂತಹ ಆ ಜನಗಳಿಗೆ-ತ್ರಿಕಾಲಸ್ನಾನ,ಜಪತಪಗಳು, ನಾಮ ವಿಭೂತಿ ಮುದ್ರಾಧಾರಣೆಗಳು ಮುಂತಾದುವುಗಳನ್ನು ವಿಧಿಸಿ, ತನ್ಮೂಲಕವೇ ಭಗವಂತನನ್ನು ಆರಾಧಿಸಬೇಕೆಂದರ ಅದು ಹೇಗೆ ಸಾಧ್ಯವಾದೀತು? ಆದುದರಿಂದಲೇ, ಸರ್ವಜ್ಞನಾದ ಜಗನ್ನಿಯಾಮಕನು ಅಲ್ಲಿಯ ಅವರ ಗುಣ ಕರ್ಮಸ್ವಭಾವಗಳು ದೇಶದ ಪ್ರಾಕೃತಿಕ ಸ್ಥಿತಿ ಮುಂತಾದುವುಗಳನ್ನು ಅನುಸರಿಸಿ, ಅವರು ಕಾಲುಮುಖಗಳನ್ನಾದರೂ ತೊಳದುಕೊಂಡು ಎಲ್ಲಿಯಾವ ಸ್ಥಿತಿಯಲ್ಲಿದ್ದರ ಹಾಗೆಯೇ, ಚಿತ್ತವನ್ನು ಮಾತ್ರ ಲೋಕಪಿತನಲ್ಲಿಟ್ಟು ಪ್ರಾರ್ಥನೆಮಾಡಿದರ ಸಾಕೆಂದು ತನ್ನ ಪ್ರತಿನಿಧಿಯಾದ ಪೈಗಂಬರರ ಮೂಲಕ ವಿಧಿಸಿದನು. ಆತ್ತ ಕ್ರೈಸ್ತ ಮತವು ಹುಟ್ಟಿ ಹಬ್ಬಿದ-ದೇಶಗಳ ಸ್ಥಿತಿಯಾದರೂ ಸ್ವಲ್ಪ ಹೆಚ್ಚು ಕಡಿಮೆ ಅದೇರೀತಿಯಲ್ಲೇ ಇದ್ದು, ಸಾಲದುದಕ್ಕೆ ಅದು ಹಬ್ಬಿರುವ ಇತರ ಕೆಲವು ದೇಶಗಳು ನೀರು ಗಡ್ಡೆಕಟ್ಟುವಂತಹ ಅತಿಶಯ ಚಳಿಯಿಂದ ಕೂಡಿ ಇರುವುದರಿಂದ ಅವರು ಪ್ರಾರ್ಥನೆಯ ಕಾಲದಲ್ಲಿ, ಬೂಟು ವಸ್ತ್ರ ಉಡಿಗೆಗಳನ್ನು ಸಹ ವ್ಯತ್ಯಾಸಗೊಳಿಸದ ಭಗವಾನನ ಸ್ತೋತ್ರ ಮಾಡಬಹುದೆಂದು ಅವರ ಮತಾಚಾರ್ಯರು ಅನುಮತಿಸಿರುವುದು ಸ್ವಾಭಾವಿಕವಾಗಿಯೇ ಇದೆ. ಅವರ ಆಹಾರ ವಿಹಾರಗಳ ವಿಚಾರದಲ್ಲೂ ಮತಕರ್ತರುಗಳು ವಿರ್ಪಡಿಸಿರುವ ನಿಬಂಧನೆಗಳಿಗೆ ದೇಶಸ್ಥಿತಿಯ ವಿಚಾರವೇ ಮುಖ್ಯ ಕಾರಣವೆಂಬುದನ್ನು ಪ್ರಾಜ್ಞರು ಊಹಿಸಬಲ್ಲರು ಇವು ಮತಾಚರಣೆಗಳ ಕೇವಲ ಬಾಹ್ಯರೂಪಗಳು ಮತಸಿದ್ಧಾಂತಗಳನ್ನು ಕುರಿತು ಯೋಚಿಸುವಾಗ ಈ ಅಲ್ಪ ವಿಚಾರಗಳು ದೃಷ್ಟಿಗ ಆಡ್ಡಬರಬಾರದು ಆದರ ದುರ್ದೈವದಿಂದ ಈ ವಿಚಾರಗಳ ಆಡಂಬರವೇ ಘನವಾಗಿ, ತತ್ವವಿಚಾರವು ಸಂಪೂರ್ಣವಾಗಿ ಮುಳುಗಿಹೋಗಿರುವುದರಿಂದಲೇ ಮತವಿಚಾರದಲ್ಲಿ ಯುದ್ಧವು ಸರ್ವದಾ ನಡೆಯುತ್ತಿರಲು ಮಾರ್ಗವಾಗಿದೆ

ಇನ್ನಿದನ್ನು ಬಿಟ್ಟು ತಾತ್ವಿಕರೀತಿಯಿಂದ ಯೋಚಿಸುವುದಾದರೆ, ಅಲ್ಪ ಸ್ವಲ್ಪ ವ್ಯತ್ಯಾಸಗಳಿಂದ ಸಕಲಮತಸ್ಥಾಪಕರ ಅಭಿಪ್ರಾಯಗಳೂ ಒಂದೇ

ವಸ್ತುವನ್ನು ಸೇರುತ್ತವೆ. ನಾಮರೂಪಗಳಲ್ಲಿ ಭೇದವಿದ್ದರೂ ಎಲ್ಲಾ ಮತಗಳಿಗೂ ಆಧಾರಸ್ವರೂಪನಾದವನೂ ಸರ್ವಸ್ವತಂತ್ರನೂ ಜಗತ್ಪಿತನೂ ಒಬ್ಬನೇ ಎಂಬುದನ್ನು ಎಲ್ಲರೂ ಒಪ್ಪಿಕೊಳ್ಳುವರು. ಜೀವನು ಆತನ ಅಧೀನನು, ಅಸ್ವತಂತ್ರನು, ಅಜ್ಞನು ಎಂಬುದಾದರೂ ಎಲ್ಲರಿಗೂ ಸಮ್ಮತವುಂಟು. ಜೀವನು, ಲೌಕಿಕಜೀವಿತವನ್ನು ಸತ್ಯ ಧರ್ಮ ನ್ಯಾಯ ಪರೋಪಕಾರ ಭೂತದಯೆ ಮುಂತಾದುವುಗಳ ಹದ್ದನ್ನು ಮೀರದೆ, ಯುಕ್ತರೀತಿಯಿಂದ ಸಾಗಿಸಿ, ಪರಮಪಿತನಲ್ಲಿ ಭಕ್ತಿಯನ್ನಿಟ್ಟು ಆತನ ಸಾನ್ನಿಧ್ಯವನ್ನು ಸೇರಬೇಕೆಂಬ ವಿಚಾರದಲ್ಲಿ ಯಾವ ಮತದವರೂ ವಿರೋಧಾಭಿಪ್ರಾಯವುಳ್ಳವರಾಗಿಲ್ಲ. ದಾರೇಷಣ ಪುತ್ರೇಷಣ ವಿತ್ತೇಷಣಗಳು ಅಯುಕ್ತಗಳೆಂಬುದೂ, ಹೆಣ್ಣು ಹೊನ್ನು ಮಣ್ಣುಗಳಿಗಾಗಿ ಲೋಭಪಡುವುದು ಬುದ್ಧಿಹೀನತೆಯೆಂಬುದೂ ಎಲ್ಲಾ ಮತದವರೂ ಒಪ್ಪಿಕೊಳ್ಳತಕ್ಕುದಾಗಿದೆ. ಜ್ಞಾನ ಭಕ್ತಿ ವೈರಾಗ್ಯಾದಿಗಳು ಅಭಿವೃದ್ಧಿಯಾಗಲು ಆವಶ್ಯಕವೆನಿಸುವ ವ್ರತ ನಿಯಮ ಉಪವಾಸಗಳನ್ನೂ ಪ್ರಾರ್ಥನೆಗಳನ್ನೂ ಹಿಂದೂ ಮಹಮ್ಮದೀಯ ಕ್ರೈಸ್ತ ಮುಂತಾದ ಎಲ್ಲಾ ಮತಾಚಾರ್ಯರುಗಳೂ ವಿಧಿಸಿದ್ದಾರೆ. ಸುಳ್ಳು ಕಳ್ಳತನ ದ್ವೇಷ ಕಾಪಟ ದಂಭ ಅಹಂಕಾರ ವ್ಯಭಿಚಾರ ಚಾಡಿಗಾರತನ ನಾಸ್ತಿಕತೆ ಮುಂತಾದುವುಗಳನ್ನು ಸನ್ಮಹರ್ಷಿಗಳೂ ಮತಾಚಾರ್ಯರುಗಳೂ ಹೇಗೆ ನಿಷೇಧಿಸಿದರೋ ಕ್ರೈಸ್ತಮಹಮ್ಮದರೂ ಹಾಗೆಯೇ ಬಹು ಖಂಡಿತರೀತಿಯಿಂದ ನಿಷೇಧಿಸಿದ್ದಾರೆ. ಹೀಗೆ ಸಕಲ ಮತಗಳವರ ಮೂಲತತ್ವಗಳೂ ಒಂದೇ ಇದ್ದು ಎಲ್ಲಾ ಮತಗಳ ಮೂಲೋದ್ದೇಶವೂ ಪ್ರಕೃತಿ ಪರವಾಗಿರುವ ಜೀವನದೃಷ್ಟಿಯನ್ನು ಪುರುಷೋತ್ತಮನ ಕಡೆಗೆ ತಿರುಗಿಸಬೇಕೆಂಬುದೇ ಆಗಿದೆಯಲ್ಲದೆ ಅನ್ಯಥಾ ಇಲ್ಲ. ಮತ್ತು ಆಕಾಶದಿಂದ ಭೂಮಿಗೆ ಬಿದ್ದ ಮಳೆಯ ನೀರೆಲ್ಲವೂ ವಿವಿಧಮಾರ್ಗಗಳಿಂದ ಹರಿದರೂ, ಕೊನೆಗೆ ತಪ್ಪದೆ ಹೇಗೆ ಸಾಗರವನ್ನೇ ಸೇರುವುದೋ, ಹಾಗೆಯೇ ಮಾನವರು ಯಾವ ರೀತಿಯಿಂದ ಭಗವಂತನನ್ನು ಪೂಜಿಸಿದರೂ, ಸೇವಿಸಿದರೂ, ಪ್ರಾರ್ಥಿಸಿದರೂ ಆ ಪೂಜಾಸೇವಾಪ್ರಾರ್ಥನಾದಿಗಳ ಫಲವು ತಪ್ಪದೆ ಸರ್ವೋತ್ತಮನಾದ ಆ ಒಬ್ಬನನ್ನೇ ಸೇರುವುದೆಂಬುದಕ್ಕೆ ಎಲ್ಲೂ ಅಭಿಪ್ರಾಯಭೇದವಿಲ್ಲ.

ಹಾಗಾದರೆ, ಇರುವ ಇಷ್ಟು ಮತಗಳಲ್ಲಿ ಯಾವ ಮತ ಶ್ರೇಷ್ಠವಾದುದು ಮತ್ತಾವುದು ಕನಿಷ್ಟವಾದುದು ಎಂಬುದೊಂದು ಪ್ರಶ್ನೆಯು ಏಳುತ್ತದೆ. ನಾವು ಮೇಲೆ ಹೇಳಿದ ಅಭಿಪ್ರಾಯವನ್ನು ಎಂದರೆ, ವಿವಿಧಮತಗಳೂ ಸತ್ಯವಸ್ತುವಾದ ಪರಮಾತ್ಮನನ್ನು ಸೇರುವ ವಿವಿಧ ಪಥಗಳು ಎಂಬ ನ್ಯಾಯವನ್ನು ಒಪ್ಪುವುದಾದರೆ, ಯಾವುದೊಂದು ಮತವು ಶ್ರೇಷ್ಠವಾದುದು, ಮತ್ತಾವುದು ಕನಿಷ್ಟವಾದುದು ಎಂಬಂತಿಲ್ಲ ಏಕೆಂದರೆ, ಪ್ರತಿಯೊಂದು ಮತವೂ ತನ್ನ ಅನುಯಾಯಿಯನ್ನು ಕ್ರಮವಾದ ಒಂದು ಪಥದಲ್ಲಿ ಕರದೊಯ್ದು ಅದರ ಸಿದ್ಧಾಂತಾನುಸಾರವಾಗಿ, ಗೊತ್ತಾದ ಒಂದು ಸ್ಥಾನವನ್ನು ಸೇರಿಸತಕ್ಕುದೇ ಆಗಿದೆ. ಒಂದರಲ್ಲಿ ಗಮ್ಯಸ್ಥಾನದ ದೂರವು ಸ್ವಲ್ಪ ಹೆಚ್ಚಾಗಿರಬಹುದು, ಮತ್ತೊಂದರಲ್ಲಿ ಸಮೀಪದಲ್ಲೇ ಇರಬಹುದು. ಅಷ್ಟೆ! ಆದರೆ, ಒಂದೊಂದು ಮತದವರಿಗೂ, ಆಯಾ ಮತವೇ ಸರ್ವೋತ್ಕೃಷ್ಟವಾದುದೆಂದೂ, ಗೊತ್ತಾದ ಆ ತಮ್ಮ ಮತವನ್ನು ಅವಲಂಬಿಸದಿದ್ದವರಿಗೆ ಘೋರನರಕವಾಗುವುದೆಂದೂ – ಅಥವ ಸದ್ಗತಿಯು ದೊರಕಲಾರದೆಂದೂ, ಆ ಮತವನ್ನು ಅವಲಂಬಿಸಿದವರು ಮಾತ್ರವೇ ಭಗವತ್ಸಾನ್ನಿಧ್ಯವನ್ನು ಸೇರಲುಳ್ಳವರೆಂದೂ ಹೇಳಿರುವುದರ ಅರ್ಥವೇನು? ಮತಾಚಾರ್ಯರುಗಳಿಗೆ ಈ ಸರ್ವಮತಸಮದರ್ಶಿತ್ವವಿರಲಿಲ್ಲವೆ? ತಮ್ಮದರ ಶ್ರೇಷ್ಠತೆಯನ್ನೂ, ಉಳಿದುವುಗಳ ಕನಿಷ್ಟತೆಯನ್ನೂ ಪ್ರತಿಪಾದಿಸಿದುದು ಸ್ವಾರ್ಥತೆಯಲ್ಲವೆ? ಎಂದು ಮುಂತಾಗಿ ಕೇಳಬಹುದು ಈ ಸಂದರ್ಭದಲ್ಲಿ ಒಂದು ವಿಚಾರವನ್ನು ಯೋಚಿಸಬೇಕಾಗಿದೆ. ಕಣ್ಣಿದ್ದವನು ಮೈದಾನದಲ್ಲಿ ಎಲ್ಲಿ ಬೇಕೆಂದರಲ್ಲಿ, ಹೇಗೆ ಇಷ್ಟ ಬಂದರೆ ಹಾಗೆ ತಿರುಗಾಡಬಲ್ಲನು. ಆದರೆ, ಕುರುಡನನ್ನು ಗೊತ್ತಾದ ಒಂದು ದಾರಿಯಲ್ಲಿ ಮಾತ್ರ ನಡೆಯಲು ಹೇಳಿ, ಕೈಯಲ್ಲಿ ಕೋಲನ್ನು ಕೊಟ್ಟರೆ, ಅದರ ಸಹಾಯದಿಂದ ತಡವರಿಸಿಕೊಂಡಾದರೂ ನಡೆದುಹೋಗಬಲ್ಲನಲ್ಲದೆ, ಮೈದಾನದಲ್ಲಿ ಅವನನ್ನು ಬಿಟ್ಟು, 'ನೆಲವು ಸಮತಳವಾಗಿದೆ-ಹಳ್ಳಕೊಳ್ಳಗಳಿಲ್ಲ-ನಿನಗೆ ಇಷ್ಟಬಂದಕಡೆ ನಡೆ' ಎಂದು ಹೇಳಿದರೆ, ಅವನು ಎಲ್ಲಿಗೆಂದು ನಡೆಯುವನು! ಅವನಿಗೆ ಲಕ್ಷ್ಯವಾವುದು? ಅದನ್ನು ಹೇಗೆ ಸೇರುವನು? ಪ್ರಾಪಂಚಿಕರಾದ ನಾವು, ಲೌಕಿಕವಾಗಿ ಎಷ್ಟು ವಿದ್ಯಾವಿಚಕ್ಷಣರಾಗಿ ಬುದ್ಧಿಕುಶಲತೆಯುಳ್ಳವರಾಗಿದ್ದರೂ ದೈವಿಕ

ಮತ್ತು ಧಾರ್ಮಿಕವಿಚಾರಗಳಲ್ಲಿ ಕುರುಡರಂತೆ ಇರುವೆವೆಂದರೆ ಅದು ಅನುಚಿತವಲ್ಲ! ಅಂತಹ ನಮಗೆ ಮಾರ್ಗದರ್ಶಕರಾಗಿ ಬರುವ ಧರ್ಮಗುರುಗಳು ನಮಗೆ ಗೊತ್ತಾದ ಒಂದು ಮಾರ್ಗವನ್ನು ತೋರಿಸಿ ಆ ಮೂಲಕ ನಡೆದರ ಮಾತ್ರವೇ ಸದ್ಗತಿಯು ದೊರವುದೆಂದು ಹೇಳಿದರೆ, ಅದರಿಂದ ಅವರು ನಮ್ಮ ಉಪಕಾರವನ್ನು ಸಾಧಿಸಿದಂತಾಯಿತಲ್ಲದೆ, ತಮ್ಮ ಸ್ವಾರ್ಥತೆಯನ್ನಲ್ಲ! ಅವರು ಹಾಗೆ ಖಂಡಿತರೀತಿಯಿಂದ ಒಂದನ್ನೇ ನಿರ್ಧರಿಸಿ ಹೇಳದೆ, ಇರುವ ಹತ್ತೆಂಟು ಮಾರ್ಗಗಳಲ್ಲ ಯಾವುದನ್ನಾದರೂ ಅನುಸರಿಸಬಹುದೆಂದರ, ಅದರಿಂದ ಆಗುವ ಪರಿಣಾಮವೇನೆಂದು ಯೋಚಿಸಿರಿ. ಸದ್ಗತಿಗಾಗಿ ಅವರನ್ನೇ ಎದುರುನೋಡಿಕೊಂಡಿರುವ ಅನುಯಾಯಿಗಳು ಯಾವ ಮಾರ್ಗವೆಂದು ನಂಬಿ ಅವಲಂಬಿಸುವರು? ಇದೊಂದು ನಾಳೆಯೊಂದರಂತೆ ಹಲವು ಮಾರ್ಗಗಳಲ್ಲ ನಡೆಯುತೊಡಗಿದರ, ಹೋಗಿ ಊರು ಮುಟ್ಟುವುದೆಂದಿಗೆ? ಅದು ದುಂದಲೇ ಕ್ರೈಸ್ತ ಮಹಮ್ಮದರು ತಮ್ಮ ಮೂಲಕವೇ ದೇವರನ್ನು ತಲುಪಬೇಕೆಂದು ಹೇಳಿದಂತೆಯೋ, ನಮ್ಮ ಆಚಾರ್ಯರುಗಳಂದರೂ ಶೈವಮತವೇ ಸರ್ವೋತ್ಕೃಷ್ಟವಾದುದೆಂದೂ-ವೈಷ್ಣವ ಮತವೇ ಸರ್ವೋತ್ಕೃಷ್ಟವಾದುದೆಂದೂ ಹೇಳಿದುದು. ಎರಡೂ ಸರ್ವೋತ್ಕೃಷ್ಟವಾಗುವುದು ಹೇಗೆ ಎಂದು ಪ್ರಶ್ನಿಸಿದರೆ—'ಒಂದೇ ದೃಷ್ಟಿಯಿಂದಲ್ಲ' ಎಂದು ಹೇಳಬೇಕಾಗುವುದು. ಹಾಗೆಯೇ ಮಿಕ್ಕ ವಿಚಾರಗಳೂ!

ಪೂರ್ವದಲ್ಲಿ ಲೌಕಿಕ ವಿದ್ಯಾಭ್ಯಾಸವೂ ಮುದ್ರಣ ಸೌಕರ್ಯಗಳೂ ಇಷ್ಟು ವಿಶೇಷವಾಗಿಲ್ಲದಿದ್ದಾಗ, ವಿವಿಧ ಮತಗಳ ವಿಚಾರಗಳು ಸರ್ವತ್ರ ಪ್ರಕಟವಾಗಲು ಅವಕಾಶವಿರಲಿಲ್ಲ. ಆಗ ಜನರು ಒಂದೇ ಮತವಿಷಯದಲ್ಲಿ ಪರಿಶ್ರಮಹೊಂದಿ ಅದೊಂದರ ಮೂಲಕವೇ ಸದ್ಗತಿಯನ್ನು ಹೊಂದಲು ಅವಕಾಶವಿರುತ್ತಿದ್ದಿತು. ಈಗ ಹಾಗಿಲ್ಲ ಸಕಲ ಮತಗ್ರಂಥಗಳೂ ಛಾಪೆಯಾಗಿ ಜಿಲಗೆ ದೊರೆಯುತ್ತಿವೆ ಎಲ್ಲರೂ ಎಲ್ಲಾ ಮತಗಳ ವಿಚಾರವನ್ನೂ ತಿಳಿಯಬಹುದು! ಇದರಿಂದ ಎರಡು ಬಗೆಯ ಸ್ಥಿತಿಯು ಪ್ರಾಪ್ತವಾಗಿವೆ. ಗುಣಗ್ರಾಹಿಗಳಾಗಿ-ಸಕಲ ಮತಗಳ ಸಾರವನ್ನೂ ಗ್ರಹಿಸಿ ತಮ್ಮ ನಡತೆ ಭಕ್ತಿ ಜ್ಞಾನ ವೈರಾಗ್ಯಾದಿಗಳನ್ನು ಅಭಿವೃದ್ಧಿಪಡಿಸಿಕೊಳ್ಳುವುದೊಂದು. ಯಾವ ಮತದಲ್ಲಿ ಸ್ವೇಚ್ಛಾಚಾರಕ್ಕೆ ಪ್ರತಿಬಂಧಕವಿಲ್ಲ, ಎಲ್ಲ ಉಣಿಸು ತಿನಿ

ಸುಗಳಿಗೂ ಕುಡಿತಕುಣಿತಗಳಿಗೂ ಹೇಮುಕಾಮಿನೀಸಂಗ್ರಹಣಕ್ಕೂ ಹೆಚ್ಚು ಸೌಲಭ್ಯವಿದೆ ಎಂಬುದನ್ನು ಗಮನಿಸಿ ಇಂದೊಂದು ನಾಳೆಯೊಂದರಂತೆ ಮತಗಳನ್ನು ಅವಲಂಬಿಸಿ ದುರ್ಗತಿಗಿಳಿಯುವುದೊಂದು. ಈ ಸಂದರ್ಭದಲ್ಲಿ ಒಂದು ವಿಚಾರವನ್ನು ಮಾತ್ರ ಗಮನಿಸುವುದಾದರ ಎಲ್ಲರಿಗೂ ಕ್ಷೇಮವಿರುವುದು. ಮತವೆಂಬುದು ಜೀವನ ಸದ್ಗತಿ ದುರ್ಗತಿಗಳಿಗೆ ಸಂಬಂಧಿಸಿದುದಲ್ಲದೆ, ಕಾಸುವೀಸಗಳ ಲೆಕ್ಕಾಚಾರವನ್ನು ಕುರಿತುದಲ್ಲವಾದುದರಿಂದ, ಸದ್ಗತಿಯನ್ನು ಕೋರುವವನು ಒಂದು ಮತವನ್ನು ಬಿಟ್ಟು ಮತ್ತೊಂದಕ್ಕೆ ಹೋಗಬೇಕಾದ ಆವಶ್ಯಕವಿಲ್ಲದೆ, ತನ್ನ ಮತವನ್ನೇ ಸಂಪೂರ್ಣರೀತಿಯಿಂದ ತಿಳಿದುಕೊಳ್ಳಲೆತ್ನಿಸಿ, ಅದನ್ನೇ ಅನುಸರಿಸಿ ನಡೆದರ, ಬೇರೊಂದರಲ್ಲಿ ಸಿಕ್ಕಿರಬಹುದಾದ ಫಲವು ಅದರಲ್ಲೇ ದೊರೆಯುವುದು. ಈ ತತ್ವವನ್ನು ಮನಗಾಣಿಸಿ, ಈಗ್ಗೆ ಸಾವಿರದ ಮುನ್ನೂರು ವರ್ಷಗಳಿಗೆ ಪೂರ್ವದಲ್ಲಿ ಅರಬ್ಬೀ ದೇಶದಲ್ಲಿ ಜನ್ಮಿಸಿ, ಆ ಜನಾಂಗವನ್ನು ತಿದ್ದಿ ಮಾರ್ಗಕ್ಕೆ ತಂದ ಹಜರತ್ ಮುಹಮ್ಮದ್ ಪೈಗಂಬರ್ ಯವರ ಚರಿತ್ರೆಯನ್ನು ಇನ್ನು ಓದೋಣ.

ಏಷ್ಯಾಭೂಖಂಡದ ಪಶ್ಚಿಮಭಾಗದಲ್ಲಿ ಅರಬ್ಬೀದೇಶವಿದೆ. ಅದರ ಪಶ್ಚಿಮಕ್ಕೆ ಕೆಂಪು ಸಮುದ್ರವೂ ದಕ್ಷಿಣಕ್ಕೆ ಹಿಂದೂ ಸಾಗರವೂ ಅರಬ್ಬೀ ಸಮುದ್ರವೂ ಪೂರ್ವಕ್ಕೆ ಪರ್ಷಿಯಾಖಾರಿ-ಓರ್ಮೆಜ್‌ಖಾರಿಗಳೂ ಮೇರಗಳಾಗಿವೆ. ಅದು ಉತ್ತರಕ್ಕೆ ಬೇಬಿಲೋನಿಯಾ ಸಿರಿಯಾ ಪ್ರಾಂತಗಳವರೆಗೆ ಹಬ್ಬುತ್ತದೆ. ನಮ್ಮ ಕಥಾನಾಯಕರ ಜನ್ಮಕಾಲದ ಸುಮಾರಿನಲ್ಲಿ ಆದೇಶವು ಪರಕೀಯರ ಅಧೀನಕ್ಕೆ ಒಳಪಟ್ಟಿತ್ತು. ಸಿರಿಯಾ ಮತ್ತು ಪರ್ಷಿಯಾ ದೇಶಗಳ ಒತ್ತಿನಲ್ಲಿದ್ದ ಆದೇಶದ ಸಂಸ್ಥಾನಗಳು ಕಾನ್‌ಸ್ಟಾಂಟಿನೋಪಲಿನ ಚಕ್ರವರ್ತಿಗಳ ಆಳ್ವಿಕೆಗೂ ಪರ್ಷಿಯಾದ ಪ್ರಭುಗಳ ಆಧಿಪತ್ಯಕ್ಕೂ ಒಳಪಟ್ಟಿದ್ದುವು. ಮಕ್ಕಾಕ್ಕೆ ದಕ್ಷಿಣದಲ್ಲಿ-ಕೆಂಪುಸಮುದ್ರದ ಪಕ್ಕದಲ್ಲಿದ್ದ ಭಾಗವು ಅಬಿಸೀನಿಯದ ಕ್ರೈಸ್ತಪ್ರಭುಗಳ ಸ್ವಾಧೀನದಲ್ಲಿತ್ತು. ಆದರ ಹಿಜಾಜ್ ಎಂಬ ಸಂಸ್ಥಾನವು ಮಾತ್ರ ಪರಕೀಯರ ಶಕ್ತಿಯುಕ್ತಿಗಳಿಗೆ ತಾಗಿಬಾಗದೆ, ಸ್ವಾತಂತ್ರ್ಯವನ್ನು ರಕ್ಷಿಸಿಕೊಂಡಿದ್ದಿತು. ಅದೇ ಸಂಸ್ಥಾನದ ಸಾನುಪ್ರದೇಶಗಳಲ್ಲೇ ಇಸ್ಲಾಂ ಮತಕ್ಕೆ ಜನ್ಮಸ್ಥಾನಗಳಾದ ಮಕ್ಕಾ ಮತ್ತು ಮದೀನಗಳೆಂಬೆರಡು ಪವಿತ್ರ ಸ್ಥಳಗಳು ಇವೆ.

ಮರಳುಗಾಡಿನ ನಿವಾಸಿಗಳಾದ ಅರಬ್ಬರು ಬಹುಕಾಲದಿಂದ ನಡೆದು ಬಂದ ತಮ್ಮ ಪೂರ್ವಿಕರ ಪದ್ಧತಿಗಳನ್ನು ಚಾಚೂ ತಪ್ಪದಂತೆ ಅನುಸರಿಸ ತಕ್ಕವರು ಅವರು ಇಟ್ಟಿಗೆ ಹಂಚು ಕಲ್ಲು ಮರಗಳನ್ನು ಉಪಯೋಗಿಸಿ ಮನೆಗಳನ್ನು ಕಟ್ಟದೆ, ಅನಾದಿಕಾಲದಿಂದಲೂ ಗೂಡಾರಗಳಲ್ಲೇ ವಾಸಿಸಿ ಕಾಲ ಕಳೆಯುತ್ತಿದ್ದರು ಅವರ ಮುಖ್ಯವಾದ ಆಸ್ತಿಯು ಒಂಟೆ ಕುದುರೆ ಗಳು, ಗಂಡುಹೆಣ್ಣು ಗುಲಾಮರು ಇವರ ಸಂಖ್ಯೆಯಿಂದ ನಿರ್ಣಯವಾ ಗುತ್ತಿತ್ತು. ಅರಬ್ಬರು ಶೂರರು ಮತ್ತು ಧೈರ್ಯಶಾಲಿಗಳು ತನ್ನ ಸಹಾಯವನ್ನು ಕೋರಿದ ತನ್ನ ಮತೀಯನೊಬ್ಬನನ್ನು ಕಾಪಾಡುವುದಕ್ಕಾಗಿ ಅರಬ್ಬನು ತನ್ನ ಪ್ರಾಣಾಂತ್ಯದವರೆಗೂ ಹೋರಾಡಲು ಹಿಂಜರಿಯನು. ತನ್ನ ಪಕ್ಷವು ನ್ಯಾಯವಾದುದೇ ಎಂಬುದರ ವಿಚಾರವು ಅವನಿಗಿಲ್ಲ ಶೂರ ನಾದುದರಿಂದ ಉದಾರಿಯೂ ಆಗಿರುವನು ತಪ್ಪು ಮಾಡಿದವನು ಶರಣಾ ಗತನಾದರೆ ಉದಾರತೆಯಿಂದ ರಕ್ಷಣೆ ಮಾಡಲು ಹಿಂದಗೆಯನು ತಾನು ಅರಬ್ಬೀ ಜನಾಂಗದಲ್ಲಿ ಜನ್ಮಿಸಿದವನೆಂಬ ಹೆಮ್ಮೆಯು ಅವನಿಗೆ ಅತಿಶಯ. ಇದರೊಂದಿಗೇ ಅವರಲ್ಲಿದ್ದ ದುರ್ಗುಣಗಳೂ ಗಮನಿಸತಕ್ಕವಾಗಿವೆ. ಕುಡಿತ ದ್ಯೂತ ವ್ಯಭಿಚಾರಾದಿಗಳು, ಅವರಲ್ಲಿ ಸಂಪೂರ್ಣತೆಯನ್ನು ಮುಟ್ಟಿದ್ದುವು. ನೀತಿವಿರಹಿತ ಪದಪದ್ಯಗಳನ್ನು ಹಾಡಿಕೊಂಡು ಹೆಮ್ಮೆಪಡುವುದರಲ್ಲಿ ನಾಚಿಕೆ ಪಡರು ದರೋಡೆ ಕಳ್ಳತನ ಕೊಲೆ ಮುಂತಾದುವೇ ಅವರ ನಿತ್ಯವೃತ್ತಿ ಯಾಗಿದ್ದಿತು ವ್ಯಗಾರಿಕೆ ವ್ಯವಸಾಯಾದಿಗಳು ತಮ್ಮ ಗೌರವಕ್ಕೆ ಕುಂದಕ ವನ್ನುಂಟುಮಾಡುವ ವೃತ್ತಿಗಳೆಂಬ ಭಾವನೆಯು ಅವರಿಗಿದ್ದಿತು. ಅಲ್ಲದೆ ಆ ವೃತ್ತಿಗಳನ್ನು ಅವಲಂಬಿಸುವವರ ಸ್ವತ್ತಿಗೆ ತಾವೇ ಬಾಧ್ಯಸ್ಥರೆಂಬ ಭಾವನೆಯೂ ಅವರಿಗುಂಟು ಒಬ್ಬ ಅರಬ್ಬನು ಯಾವನಿಂದಲಾದರೂ ಕೊಲ್ಲಲ್ಪಟ್ಟರೆ, ಅದಕ್ಕೆ ಪ್ರತಿಯಾಗಿ ಕೊಂದವನ ಪ್ರಾಣವನ್ನು ತೆಗೆಯದೆ ಬಿಡರು. ರಕ್ತಕ್ಕೆ ಪ್ರತಿರಕ್ತವನ್ನು ಕೊಡದಿದ್ದರೆ, ಮೃತನಾದ ಅರಬ್ಬನ ತಲೆಬುರುಡೆಯೊಳಗಿನಿಂದ 'ಹಾಮಾ ಅಥವಾ ಸಾದಿ' ಎಂಬೊಂದು ಕ್ರಿಮಿ ಯು ಹೊರಟು 'ಕೊಡು ಕೊಡು, ಕುಡಿಯಲು (ಮೃತನ) ರಕ್ತವನ್ನು ಕೊಡು' ಎಂದು ಕಿರಿಚಿಕೊಂಡು ಸ್ವರ್ಗದಲ್ಲೆಲ್ಲಾ ಸಂಚರಿಸುವುದಂತೆ! ಯುದ್ಧದಲ್ಲಿ ಸೆರೆಸಿಕ್ಕಿದ ಸ್ತ್ರೀಯರು ಗುಲಾಮರಾಗಬೇಕಾಗಿದ್ದಿತಲ್ಲದೆ,

ಅವರು ಜಿತರಿಗೆ ವೇಶ್ಯೆಯರಾಗಿಯೂ ಇರಬೇಕಾಗಿದ್ದಿತು. ಕ್ಷಾಮಕಾಲದಲ್ಲಿ ತಮ್ಮಲ್ಲಿನ ಒಂಟೆಗಳನ್ನು ಕೊಂದು ಅವುಗಳ ರಕ್ತವನ್ನು ಪಾನಮಾಡುವರು. ಕುಡಿಯಲು ನೀರಿಲ್ಲದೆ, ಜಲಕ್ಷಾಮ ಒದಗಿದಾಗ, ಒಂದು ಹಸುವನ್ನು ಪಕ್ಕದಲ್ಲಿದ್ದ ಗುಡ್ಡದಮೇಲಕ್ಕೆ ಒಯ್ದು ಅದರ ಬಾಲಕ್ಕೆ ಹುಲ್ಲನ್ನು ಕಟ್ಟಿ ಬೆಂಕಿ ಹಚ್ಚಿಬಿಡುವರು. ಏಕಪತ್ನೀತ್ವವನ್ನು ಅವರು ಅಸಹ್ಯಭಾವನೆಯಿಂದ ಕಾಣುವರು. ಬಹು ಪತ್ನೀತ್ವವು ಘನತೆಯ ಲಕ್ಷಣವೆಂಬ ಗಣ್ಯತೆಯಿದ್ದಿತು. ಆದರ ಅವರ ಅಮಾನುಷ ಕೃತ್ಯಗಳಲ್ಲೆಲ್ಲಾ ತಮ್ಮ ಹೆಣ್ಣು ಮಕ್ಕಳನ್ನು ಸಜೀವವಾಗಿ ಹೂಳಿಬಿಡುವ ಪದ್ಧತಿಯಷ್ಟು ಭಯಂಕರವಾದುದು ಯಾವುದೂ ಇರಲಿಲ್ಲ. ಜನನಕಾಲದಲ್ಲೇ ಒಂದು ಗುಂಡಿಯನ್ನು ಮಾಡಿದ್ದು, ಹುಟ್ಟುವ ಮಗುವು ಗಂಡಾಗಿದ್ದರ ಅದನ್ನು ಕಾಪಾಡುತ್ತಲೂ, ಹೆಣ್ಣಾದರ ಆ ಗುಂಡಿಯೊಳಗೆ ಹಾಕಿ ಮಣ್ಣುಮುಚ್ಚಿಬಿಡುತ್ತಲೂ ಇದ್ದರು. ಇನ್ನೂ ಕೆಲವು ಪಂಗಡಗಳಲ್ಲಿ ಹೆಣ್ಣುಮಕ್ಕಳು ಆರೇಳುವರ್ಷಗಳವರೆಗೆ ಬೆಳೆಯಲತ್ತು, ಮುಂದೊಂದುದಿನ ತಾಯಿಯು ಆ ಮಗುವನ್ನು ಒಡವೆ ವಸ್ತ್ರಗಳನ್ನಿಟ್ಟು ಸಿಂಗರಿಸಿದ್ದಾಗ ತಂದೆಯು ಅವಳನ್ನು ಅದಕ್ಕಾಗಿ ಏರ್ಪಡಿಸಿದ್ದ ಒಂದು ಗುಂಡಿಯಹತ್ತಿರಕ್ಕೆ ಕರದೊಯ್ದು ಒಳಕ್ಕೆ ಬಗ್ಗಿನೋಡಲು ಹೇಳಿ, ಒಡನೆ ತಳ್ಳಿಬಿಟ್ಟು ಸುತ್ತಲಿದ್ದ ಮಣ್ಣುಮುಚ್ಚಿ ನೆಲವನ್ನು ಸಮತಳವಾಗಿ ಮಾಡಿ ಹಿಂದಿರುಗುತ್ತಿದ್ದನು. ಸ್ತ್ರೀಯರ ಸ್ಥಿತಿಯು ಯಾವ ಬಗೆಯಿಂದಲೂ ಉನ್ನತಿಗೊಂಡಿರಲಿಲ್ಲ. ವಿವಾಹಬಂಧನಕಾರ್ಯವು ಅತಿ ಸುಲಭರೀತಿಯಿಂದ ನೆರವೇರುತ್ತಲೂ, ವಿಮೋಚನವು ಅದಕ್ಕಿಂತ ಸುಲಭರೀತಿಯಿಂದ ನೆರವೇರುತ್ತಲೂ ಇತ್ತು. ಆದರೆ ಬಂಧವಿಮೋಚನದಲ್ಲಿ ಗಂಡನ ಅಭಿಪ್ರಾಯಕ್ಕೇ ಹೆಚ್ಚು ಪ್ರಾಶಸ್ತ್ಯವಿತ್ತು.

ಅವರಲ್ಲಿ ಪ್ರಜಾಪಾಲನೆಗೆ ಸರ್ಕಾರವೆಂಬುದೇ ಇರಲಿಲ್ಲ. ಬಲವಂತನೇ ನೀತಿವಂತನೂ ಆಗಿದ್ದು ಅವನ ಅಧಿಕಾರವೇ ಸರ್ವಮಾನ್ಯವಾಗಿತ್ತು. ಅರಬ್ಬರಿಗೆ ಸೂರ್ಯನಕ್ಷತ್ರಗಳೂ, ಅಲ್‌ಲಟ್, ಮಾನಟ್ ಮತ್ತು ಉಜ್ಜಾ ಎಂಬ ಹೆಸರಿನ ಪೂರ್ಣಚಂದ್ರ, ಕತ್ತಲೆ-ಸಂಧಿಕಾಲಗಳೂ ಪೂಜಾರ್ಹ ವಸ್ತುಗಳಾಗಿದ್ದುವು. ಅಲ್ಲದೆ ಅವರಿಗೆ ದೇವಸ್ಥಾನಗಳೂ ಇದ್ದು, ಅವುಗಳಲ್ಲಿ ಹತ್ತುಬಗೆಯ ಮುಖ್ಯದೇವತೆಗಳಿದ್ದುವು. ಅವರ ದೇವಸ್ಥಾನಗಳಲ್ಲಿ ನರ

ಬಲಿಗಳು ನಡೆವ ಪದ್ಧತಿಯೂ ಇತ್ತು. ಆ ದೇಶದ ಸ್ಥಿತಿಯು ಇಷ್ಟು ಭಯಂಕರವಾಗಿದ್ದಾಗ್ಗೆ ಭಗವಂತನ ಕೃಪೆಯಿಂದ ಅವರನ್ನು ತಿದ್ದಿ ಯೋಗ್ಯ ಮಾರ್ಗದಲ್ಲಿ ಬಿಡಲು ಹಜರತ್ ಮುಹಮ್ಮದ್ ಪೈಗಂಬರರು ಜನ್ಮ ತಾಳಿದರು.

ಮಕ್ಕಾ ಪಟ್ಟಣದಲ್ಲಿ ಕ್ರಿ. ಶ. ಆರನೇ ಶತಮಾನದ ಪ್ರಾರಂಭದಲ್ಲಿ ಹಾಷಿಂ ಮತ್ತು ಅಬ್ದುಲ್ ಷಾಮ್ಸ್ ಎಂಬಿಬ್ಬರು ಅಣ್ಣತಮ್ಮಂದಿರು ವಾಸವಾಗಿದ್ದರು. ಇವರು ಸುಪ್ರಸಿದ್ಧವಾದ ಕೊರಯ್ಷಿ ಎಂಬ ಪಂಗಡಕ್ಕೆ ಸೇರಿದವರು. ಇವರಲ್ಲಿ ಹಾಷಿಂ ಎಂಬಾತನು ಮಕ್ಕಾ ಪಟ್ಟಣದಲ್ಲ ಬಹು ಧಾರ್ಮಿಕನೆಂದೆನಿಸಿಕೊಂಡು ಗೌರವಸ್ಥನಾಗಿದ್ದನು ಆತನು ಹಸರಾದ ವ್ಯಾಪಾರಿಯೂ ಆಗಿದ್ದು ಸಿರಿಯಾ ಮತ್ತು ಯುಮಾನ್ ಪ್ರಾಂತಗಳಿಗೆ ಮಕ್ಕಾದಿಂದ ಕಾರವಾನ್‌ಗಳನ್ನು ಕಳುಹಿಸಿ, ಆ ಪಟ್ಟಣದ ವ್ಯಾಪಾರವನ್ನು ದಿನ ದಿನಕ್ಕೆ ಅಭಿವೃದ್ಧಿಗೊಳಿಸಿದನು. ಈ ವ್ಯಾಪಾರದ ಮೂಲಕ ಆತನ ಕೊರಯ್ಷಿ ಪಂಗಡವೇ ಬಹು ಧನವಂತವೂ ಬಲವಂತವೂ ಆಯಿತು.

ಹಾಷೀಮನು ಕ್ರಿ. ಶ ೫೧೦ ರಲ್ಲಿ ಮೃತನಾಗಲು, ಆತನ ತಮ್ಮ ಮುತಾಲಬ್ ಎಂಬಾತನು, ತಮ್ಮಣ್ಣನ ಚಿಕ್ಕ ಮಗನಾದ ಷೈಬಾ ಎಂಬವನನ್ನು ಅವನ ತಾಯಿಯಾದ ಶಾಲ್ಮಾ ಎಂಬವಳ ತೌರುಮನೆಯಿಂದ ಕರತಂದು ತನ್ನ ಸ್ವಂತ ಮಗನಂತೆಯೇ ಬಹುಪ್ರೇಮದಿಂದ ಕಾಪಾಡಿದನು. ಅವನೂ ಕ್ರಿ. ಶ. ೫೨೦ರಲ್ಲಿ ಮೃತನಾಗಲು ಷೈಬಾನನು ಅಬ್ದುಲ್ ಮುತಾಲಬ್ ಎಂಬ ನಾಮಾಂತರದಿಂದ ಮಕ್ಕಾದಲ್ಲಿದ್ದ ಅವರ ಪಂಗಡಕ್ಕೆಲ್ಲಾ ಪ್ರಮುಖನಾದನು. ಈತನಿಗೆ ಅನೇಕ ಮಂದಿ ಮಕ್ಕಳಾದರು. ಅವರಲ್ಲಿ ಅಬ್ದುಲ್ ಉಜ್ಞಾ ಯಾನೆ ಅಬುಲಹಬ್ ಮತ್ತು ಅಬುತಾಲಿಬ್ ಎಂಬವರೂ ಅಬ್ದುಲ್ಲಾ ಎಂಬವರೂ ಮುಖ್ಯರು. ಅಬ್ದುಲ್ಲಾ ಎಂಬುವನು ಅಮೀನಾ ಎಂಬಾಕೆಯನ್ನು ಮದುವೆಯಾದನು. ಈ ಮದುವೆಯಾದ ಮಾರನೆಯ ವರ್ಷದಲ್ಲೇ ಮಕ್ಕಾದಲ್ಲಿ ಬಹು ಭಯಂಕರವಾದ ಕೃತ್ಯವೊಂದು ನಡೆಯಿತು. ಯುಮಾನ್ ಪ್ರಾಂತದ ಕ್ರೈಸ್ತ ದೊರೆಯಾದ ಅಬ್ರಹಾಂ ಎಂಬಾತನು ದೊಡ್ಡದೊಂದು ಸೈನ್ಯದೊಂದಿಗೆ ಬಂದು, ಮಕ್ಕಾದಲ್ಲಿದ್ದ ಕಾಬಾ

ಎಂಬ ಪೂಜಾ ವಿಗ್ರಹವನ್ನು ನಾಶಮಾಡಲುದ್ಯುಕ್ತನಾದನು. ಆತನ ಸೈನ್ಯದಲ್ಲಿ ದೊಡ್ಡದೊಂದು ಆನೆ ಇತ್ತು. ಆನೆಯನ್ನು ಅರಬ್ಬಿಯವರು ಆವರೆಗೆ ಕಂಡಿರಲಿಲ್ಲವಾದುದರಿಂದ ಅದರ ಅಗಾಧ ದೇಹಾಕೃತಿಯು ಅವರಿಗೆ ಆಶ್ಚರ್ಯವನ್ನೂ ಭಯವನ್ನೂ ಉಂಟುಮಾಡಿತು. ಆಂತಹ ಪ್ರಚಂಡ ಸೇನೆಯೊಂದಿಗೆ ಬಂದ ಅವನನ್ನು ಎದುರಿಸಲಾರದೆ ಅರಬ್ಬರು ಪಕ್ಕದಲ್ಲಿದ್ದ ಒಂದು ಗುಡ್ಡಕ್ಕೆ ಓಡಿಹೋದರು. ಇತ್ತ ಅಬ್ರಹಾಮನೂ ಅವನ ಸೈನಿಕರೂ ದೇವಸ್ಥಾನವನ್ನು ನಾಶಮಾಡಲುದ್ಯುಕ್ತರಾಗಿ ಕಾಬಾದ ಸಮೀಪಕ್ಕೆ ಬಂದರೆಂಬ ವೇಳೆಗೆ ಸರಿಯಾಗಿ, ಅಗಾಧವಾದ ಮಳೆಯು ಗುಡುಗು ಸಿಡಿಲು ಮಿಂಚುಗಳೊಂದಿಗೆ-ದೇವರ ಕೋಪದಿಂದ ಕಳುಹಿಸಲ್ಪಟ್ಟಿದೋ ಎಂಬಂತೆ ಕುಂಭದ್ರೋಣವಾಗಿ ಸುರಿಯಲಾರಂಭಿಸಿತು ಎಲ್ಲರೂ ಪ್ರಾಣಭಯದಿಂದ ಓಡತೊಡಗಿದರು. ಅಬ್ರಹಾಮನೂ ಅಲ್ಲಿಂದ ಸತ್ತೆನು ಕೆಟ್ಟೆನೆಂದು ಓಡಿ, ತನ್ನ ರಾಜಧಾನಿಯನ್ನು ಸೇರಿದೊಡನೆಯೇ, ಒಂದಾನೊಂದು ಭಯಂಕರ ಕಾಹಿಲೆಗೆ ತುತ್ತಾಗಿ, ದೇಹದ ಎಲುಬು ಮಾಂಸಗಳೆಲ್ಲವೂ ಕೊಳೆತು, ಅಸಹ್ಯ ಯಾತನೆಯಿಂದ ನರಳಿ ಮೃತನಾದನು.

ಈ ಭಯಂಕರ ವಿಚಾರವು ನಡೆದ ಸ್ವಲ್ಪ ಕಾಲದಲ್ಲೇ ಅಬ್ದುಲ್ಲಾನು ರೋಗದಲ್ಲಿ ಬಿದ್ದು ತನ್ನ ಇಪ್ಪತ್ತೈದನೆಯ ವಯಸ್ಸಿನಲ್ಲೇ ಮೃತನಾದನು. ಮುಂದೆ ಕೆಲ ದಿನಗಳೊಳಗಾಗಿಯೇ ಎಂದರೆ ಕ್ರಿ. ಶ. ೫೭೦ ನೆಯ ಸಾ||ದ ಆಗಸ್ಟ್ ೨೦ನೆಯ ಸುದಿನ ಆತನ ಹೆಂಡತಿ ಅಮೀನಾಬೀ ಎಂಬಾಕೆಯು ಒಂದು ಪುರುಷ ಶಿಶುವನ್ನು ಪ್ರಸವಿಸಿದಳು. ಆ ಬಾಲಕನ ಸುಂದರ ರೂಪವನ್ನೂ ಮುಖದ ತೇಜಸ್ವಿತೆಯನ್ನೂ ಕಂಡು ಅಬ್ದುಲ್ ಮುತಾಲಿಬ್ ಮುಂತಾದ ಹಿರಿಯರಲ್ಲಾ ಬಹು ಸಂತೋಷಪಟ್ಟರು. ಮಗು ಜನನವಾದ ಒಂದು ವಾರ ಕಾಲ ಮಾತ್ರ, ಅಮೀನಾಬೀಯು ಆ ಕಂದನನ್ನು ಸ್ತನ್ಯವಿತ್ತು ಪೋಷಿಸಿದಳು. ಮುಂದ ಪತಿವಿರಹದ ಅಗಾಧ ದುಃಖಕ್ಕೆ ಗುರಿಯಾದ ಆಕೆಗೆ ಸ್ತನ್ಯವು ಬತ್ತಿಹೋದುದರಿಂದ ಆ ಮಗುವನ್ನು ಅಬು ಲಾಹಾಬನ ಗುಲಾಮಳಾಗಿದ್ದ ನಾಯಿಬಾ ಎಂಬಾಕೆಯ ಪೋಷಣೆಗೆ ವಹಿಸಿದಳು ಆಕೆಯ ಬಳಿಯಲ್ಲೂ ಕೆಲವು ದಿನಗಳಿದ್ದ ತರುವಾಯ, ಮಗುವು ಹಲೀಮಾ ಎಂಬ ಇನ್ನೊಬ್ಬ ಸ್ತ್ರೀಯಳ ಪೋಷಣೆಗೆ ವಹಿಸಲ್ಪಟ್ಟನು. ಮಗುವು ಹಲೀಮಾ

ಬೀಯ ಮನೆಗೆ ಬೆಳೆಯಲು ಬಂದ ಕಾಲದಲ್ಲಿ, ಆಕೆಗೆ ಸಂಪತ್ತು ಸೌಭಾಗ್ಯ ಗಳು ದಿನದಿನಕ್ಕೂ ಹೆಚ್ಚುತ್ತಾ ಹೋದುವು. ಆಕೆಯ ಹೊಲಗದ್ದೆಗಳಲ್ಲಿ ಪೈರುಪಚ್ಚೆಗಳು ಅಖಂಡವಾಗಿ ಬೆಳೆದುವು. ಮನೆಯಲ್ಲಿ ಆಕೆಯು ಎಂದೂ ಕಾಣದ ಶಾಂತಿ ಸುಖ ಸಮಾಧಾನಗಳು ಪ್ರಾಪ್ತವಾದುವು ಹೀಗೆ ಆಕೆಯ ಪೋಷಣೆಯಲ್ಲಿ ಬೆಳೆದು ಮಗುವು ಐದು ವರ್ಷದವನಾದ ತರುವಾಯ, ತಾಯಿಯಾದ ಅಮೀನಾಬೀಯು ತನ್ನ ಮಗನನ್ನು ಕರದುಕೊಂಡು ಹೋಗಿ ಮುಂದೆ ಅತಿಶಯ ಪ್ರೇಮದಿಂದ ಕಾಪಾಡಿದಳು.

ಚಿಕ್ಕ ಬಾಲಕ ಮುಹಮ್ಮದನು ತನ್ನ ತಾಯಿಯ ಬಳಿ, ಮುಂದೆ ಒಂದು ವರ್ಷಕಾಲಮಾತ್ರ ವಾಸಿಸಿದನು ಅಷ್ಟರಲ್ಲಿ ಆಕೆಯು, ತನ್ನ ತೌರು ಮನೆ ಇದ್ದ ಯತ್ರಿಬ್ ಎಂಬ ಊರಿಗೆ ಮಗನೊಂದಿಗೆ ಪ್ರಯಾಣ ಹೊರ ಟಳು. ಆದರ ಮಾರ್ಗಮಧ್ಯದಲ್ಲೇ ದುರ್ದೈವ ಒದಗಿ ಬಂದು ಆಕೆಯು ಮೃತಳಾಗಲು, ಮಗುವು ಪರದೇಶಿಯಾದನು. ಮುಂದ, ಬೇರ ಮಾರ್ಗ ಕಾಣದೆ ಆ ಬಾಲಕನು ತನ್ನ ತಾತನಾದ ಅಬ್ದುಲ್ ಮುತಾಲಬ್‌ನ ಬಳಿಗೇ ಒಂದನು. ಆ ವೃದ್ಧನು, ತನ್ನ ಆ ಮೊಮ್ಮಗನನ್ನು ಅತಿಶಯ ಪ್ರೀತಿ ಯಿಂದ ನಾಲ್ಕು ವರ್ಷಕಾಲ ಕಾಪಾಡಿದನು. ಆದರ, ಅವೇಳಗೆ ಮನು ಷ್ಯನ ಜೀವಿತಕಾಲಾವಧಿಗಿಂತಲೂ ಹೆಚ್ಚಾಗಿಯೇ ಬದುಕಿದ್ದ ಅತಿಶಯ ವೃದ್ಧಾಪ್ಯದ ಅಬ್ದುಲ್ ಮುತಾಲಿಬ್ಬನಿಗ ಮೃತ್ಯುವೇಳೆಯೊದಗಲು, ಆತನು ತನ್ನ ಮಗನಾದ ಅಬ್ದುಲ್ ತಾಲಿಬ್ ಎಂಬಾತನನ್ನು ಕರದು, ಆತನ ವಶಕ್ಕ ಮುಹಮ್ಮದನನ್ನು ಒಪ್ಪಿಸಿ, ಪ್ರೀತಿಯಿಂದ ಕಾಪಾಡಿ, ಅಭಿವೃದ್ಧಿಗೆ ತರಬೇ ಕೆಂದು ಆಜ್ಞಾಪಿಸಿ ಮೃತನಾದನು. ಅಬ್ದುಲ್ ತಾಲಿಬನಾದರೂ ಮುಹ ಮ್ಮದನನ್ನು ಸ್ವಂತ ಮಗನಂತೆಯೇ ಪೋಷಿಸಿದನು. ಮೇಲ್ಕಂಡ ವರ್ಣನೆ ಯಂತೆ ಮಹಾಮೂರ್ಖರೂ ಒರಟರೂ ಆದ ಜನಾಂಗದಿಂದ ಕೂಡಿದ್ದ ಅರಬ್ಬೀ ದೇಶವೇ ಜನ್ಮಸ್ಥಾನವಾಗಿದ್ದರೂ, ಜನ್ಮದಾತೃಗಳು ಉತ್ತಮ ವಂಶ ಸಂಭೂತರಾದುದರಿಂದ, ಮುಹಮ್ಮದ್ ಬಾಲಕನು ದಿನದಿನಕ್ಕೆ ವಿದ್ಯಾ ಬುದ್ಧಿಗಳನ್ನು ಕಲಿಯುತ್ತಾ ಅಭಿವೃದ್ಧಿಗೆ ಬಂದನು.

## ಅಧ್ಯಾಯ ೨ “ಸಂದೇಶ ವಾಹಕ”

ಎಂಟೊಂಬತ್ತು ವರ್ಷಗಳ ಪ್ರಾಯ! ‘ಬೆಳೆಯು ಮೊಳೆಯಲ್ಲೇ ತೋರುವುದು’ ಎಂಬ ಲೋಕೋಕ್ತಿಯಂತೆ ಅಷ್ಟು ಚಿಕ್ಕ ಪ್ರಾಯದ ಮುಹಮ್ಮದನು ತನ್ನ ಬುದ್ಧಿ ಸೂಕ್ಷ್ಮತೆಯನ್ನೂ, ವಿಚಾರ ಯುಕ್ತ ಮನಸ್ಥಿತಿಯನ್ನೂ ಪ್ರದರ್ಶಿಸತೊಡಗಿದನು. ಜೊತೆಯ ಬಾಲಕರೊಂದಿಗೆ ಕಾಲಹರಣೆಯ ಆಟಪಾಟಗಳಲ್ಲಿ ಬೆರೆಯದೆ, ಯಾವಾಗಲೂ ಏಕಾಂಗಿಯಾಗಿರಲು ಬಯಸುವನು. ಹಾಗೆ ಏಕಾಂಗಿಯಾಗಿದ್ದ ವೇಳೆಯಲ್ಲಿ ಧ್ಯಾನಾಸಕ್ತನಂತೆ, ಏನನ್ನೋ ಕುರಿತು ಯೋಚಿಸುತ್ತಾ, ಏಕಾಗ್ರಚಿತ್ತನಾಗಿರುವನು. ಜೊತೆಯ ಬಾಲಕರು ಆಟಕ್ಕೆ ಕರೆದರೆ—“ಇಲ್ಲ ಇಲ್ಲ, ಇಂತಹ ಆಟಪಾಟಗಳಲ್ಲಿ ಕಾಲ ಕಳೆಯಬೇಕಿಲ್ಲ! ಮನುಷ್ಯನು ಒಂದು ಘನವಾದ ಉದ್ದೇಶಸಾಧನೆಗಾಗಿ ಸೃಷ್ಟಿಸಲ್ಪಟ್ಟಿದ್ದಾನೆ” ಎಂದು ಹೇಳುವನು. ಆತನು ಆ ವಯಸ್ಸಿನಲ್ಲಿದ್ದಾಗಲೇ ಒಂದು ಮತಸಂಬಂಧ ಯುದ್ಧವು ಪ್ರಾರಂಭವಾಗಿ ಸುಮಾರು ಹತ್ತು ವರ್ಷಗಳ ಕಾಲ ನಡೆಯಿತು. ಅದರಲ್ಲಿ ಒಂದು ಪಕ್ಷದಲ್ಲಿ ಕೊರಯಿಷಿ ಮತ್ತು ಕಿನಾನಾ ಪಂಗಡಗಳೂ ಮತ್ತೊಂದು ಪಕ್ಷದಲ್ಲಿ ಹಿವಾಜಿನ್ ಎಂಬ ಪಂಗಡವೂ ಸೇರಿದ್ದುವು. ಆ ಯುದ್ಧವನ್ನು ನಿರ್ಮೂಲಗೊಳಿಸಿ, ಪ್ರಜಾನಾಶವನ್ನು ನಿಲ್ಲಿಸುವ ಉದ್ದೇಶದಿಂದ ಅಲ್ಲಲ್ಲೆ ಅನೇಕ ಸಭೆಗಳೂ ಜಾತ್ರೆಗಳೂ ಜರುಗಿ ಯುದ್ಧಕ್ರಿಯೆಯನ್ನು ಬಹುಬಗೆಯಿಂದ ನಿಷೇಧಿಸುತ್ತಿದ್ದುವು. ಆ ಸಭೆಗಳಲ್ಲೆಲ್ಲಾ ಯಹೂದ್ಯರೂ ಕ್ರೈಸ್ತರೂ ತಮ್ಮ ತಮ್ಮ ಸಿದ್ಧಾಂತಗಳನ್ನು ಕುರಿತು ಅತೀವ ಘೋರವಾದ ವಾಗ್ಯುದ್ಧ ಮಾಡುವರು. ಪುನಃ ಅವರಿಬ್ಬರೂ ಒಂದುಗೂಡಿ, ಅರಬರನ್ನು ವಿಗ್ರಹಾರಾಧಕರೆಂದು ಆಕ್ಷೇಪಿಸುವರು. ಅರಬರು ಅವರನ್ನು ನಿಂದಿಸುವರು. ಪ್ರತಿಯೊಬ್ಬನೂ ತನ್ನದು ಧರ್ಮವೆಂದು ಬಡಿದಾಡುತ್ತಿದ್ದರೂ, ಎಲ್ಲರೂ ದೇವರನ್ನೇನೋ ಬಿಟ್ಟು ಬಹುದೂರದಲ್ಲೇ ಇರುತ್ತಾ, ದಂಭ ದರ್ಪ ಅಹಂಕಾರ ಸ್ವಪ್ರತಿಷ್ಠೆ ಮುಂತಾದುವುಗಳಲ್ಲಿ ಮುಳುಗಿದ್ದರು. ಇವುಗಳನ್ನೆಲ್ಲ ನೋಡಿ ಬಾಲಕ ಮುಹಮ್ಮದನ ಮನಸ್ಸಿನಲ್ಲಿ ಅನೇಕಾನೇಕ ವಿಚಾರಗಳು ಉತ್ಪನ್ನವಾಗುವುವು.

ಇದು ನಡೆಯುತ್ತಿರುವ ಕಾಲದಲ್ಲೇ ಮುಹಮ್ಮದನು ತನ್ನ ಚಿಕ್ಕಪ್ಪನಾದ ಅಬುತಾಲಿಬ್ಬನೊಂದಿಗೆ ವ್ಯಾಪಾರಕ್ಕೆಂದು ಸಿರಿಯಾ ಪ್ರಾಂತಕ್ಕೆ ಹೊರಟನು. ಅಲ್ಲಿ ಆತನು ನೋಡಿದ ತಮ್ಮ ಜನಾಂಗದ ಸಾಮಾಜಿಕ ದುಸ್ಥಿತಿಯು ಆತನ ದೃಷ್ಟಿ ಪಥದಿಂದ ಎಂದೂ ಅಳಿಸಿಹೋಗಲಿಲ್ಲ. ಆ ಪ್ರಯಾಣದಲ್ಲೂ ತರುವಾಯ ವ್ಯಾಪಾರಕ್ಕಾಗಿ ಮಾಡಿದ ಬೇರೆ ಕೆಲವು ಪ್ರಯಾಣಗಳಲ್ಲೂ ಆತನಲ್ಲುಂಟಾದ ಅನುಭವವು, ಸ್ಥಿರಮತಿ ಬುದ್ಧಿಕುಶಲತೆ, ಜನಗಳಲ್ಲಿ ಬಳಕೆ, ಕಾರ್ಯತತ್ಪರತೆ, ಶ್ರದ್ಧೆ, ಧೈರ್ಯಸಾಹಸಾದಿಗಳು, ವಾಕ್ಚಾತುರ್ಯ ಮುಂತಾದುವುಗಳನ್ನು ಆತನಲ್ಲುಂಟುಮಾಡಿದುವು ಹೀಗೆ ಸುಮಾರು ಇಪ್ಪತ್ತೈದುವರ್ಷ ಪ್ರಾಯದವರೆಗೆ ತನ್ನ ಚಿಕ್ಕಪ್ಪನ ವ್ಯಾಪಾರದಲ್ಲೇ ತೊಡಗಿರಲು, ಆ ವೇಳೆಗೆ ಆ ಸ್ಥಳದ ಒಬ್ಬಾನೊಬ್ಬ ಘನವರ್ತಕನು ಮೃತನಾದನು. ಆತನ ಪತ್ನಿಯಾದ ಖಾದಿಜಾ ಎಂಬಾಕೆಯೇ ಸಮಸ್ತ ಆಸ್ತಿಗೂ ಅಧಿಕಾರಿಣಿಯಾಗಿ ನಿಂತಳು. ಸ್ತ್ರೀಯಾದ್ದರಿಂದ, ವರ್ತಕನು ನಡೆಸುತ್ತಿದ್ದ ವ್ಯಾಪಾರಾದಿ ವ್ಯವಹಾರಗಳನ್ನು ಕುರಿತು ಗಮನಿಸುವುದಕ್ಕಾಗಿ ಯಾರಾದರೊಬ್ಬ ಪ್ರತಿನಿಧಿಯು ಬೇಕಾಗಿತ್ತು. ಆವರೆಗೇ ಬಹು ಕಾರ್ಯಕುಶಲನೆಂದು ಪ್ರಖ್ಯಾತನಾಗಿದ್ದ ಮುಹಮ್ಮದನಿಗೆ, ಕಾರ್ಯಭಾರವನ್ನು ವಹಿಸಲು ಆಕೆಯ ಹಿತಚಿಂತಕರು ಸಲಹೆ ಕೊಟ್ಟರು. ಮುಹಮ್ಮದನೂ ತಕ್ಕಂತಹ ನಿಬಂಧನೆಗಳ ಮೂಲಕ ಕೆಲಸವನ್ನು ಪ್ರಾರಂಭಿಸಿ, ಡಮಾಸ್ಕಸ್ಸಿಗೆ ಹೋಗಿ, ಅಲ್ಲಿ ವ್ಯಾಪಾರದಲ್ಲಿ ಅಧಿಕಲಾಭವನ್ನು ಸಂಪಾದಿಸಿಕೊಂಡು ಬಂದು, ಆ ಸಮಾಚಾರವನ್ನು ತನ್ನ ಒಡತಿಯಾದ ಖಾದಿಜಾಬೀಗೆ ತಿಳಿಸಬೇಕೆಂದು ಆಕೆಯ ಬಳಿಗೆ ಸ್ವತಃ ಹೋದನು. ಆತನು ನಿರ್ವಹಿಸಿಕೊಂಡು ಬಂದ ವ್ಯವಹಾರದಲ್ಲಿ ತನಗುಂಟಾದ ಅಧಿಕ ಲಾಭವನ್ನು ಕಂಡು, ಆ ನಾರೀಮಣಿಯು ಅತಿಶಯ ಸಂತೋಷಪಟ್ಟಳು ಅಷ್ಟುಮಾತ್ರವಲ್ಲ-ಆತನ ಚಪಲವೂ ತೇಜಸ್ವಿಯೂ ಆದ ನೇತ್ರಗಳೂ, ಘನಗಾಂಭೀರ್ಯ ಯುಕ್ತವಾದ ನಡೆವಳಿಯೂ, ಆಜಾನುಬಾಹುದೃಢಾಂಗವೂ, ತನಗುಂಟಾದ ದ್ರವ್ಯಲಾಭಕ್ಕಿಂತಲೂ ಹೆಚ್ಚಾಗಿ ಆಕೆಯನ್ನು ಮೆಚ್ಚಿಸಿದುವು. ಒಡನೆ, ಆತನನ್ನು ಮದುವೆಯಾಗುವ ವಿಷಯದಲ್ಲಿ ತನಗಿರುವ ಅಭಿಲಾಷೆಯನ್ನು ತಿಳಿಸಿದಳು. ಖಾದಿಜಾಬೀಯು, ಈವರೆಗೇ ಎರಡು ಸಾರಿ ಮದುವೆಯಾಗಿ ಅನೇಕಮಂದಿ ಮಕ್ಕ

ಳನ್ನು ಹೆತ್ತಿದ್ದರೂ ಆ ತರುಣನ ದಿವ್ಯ ಸುಂದರ ವಿಗ್ರಹವನ್ನು ನೋಡಿ ಉಂಟಾದ ಮೋಹವನ್ನು ತಡೆಯಲಶಕ್ತಳಾಗಿ ಆತನನ್ನು ವರಿಸಿದಳು. ಆಗ ಆಕೆಗೆ ನಾಲ್ವತ್ತು ವರ್ಷ ಪ್ರಾಯವಿತ್ತು. ವರನ ವಯಸ್ಸಾದರೋ ಇಪ್ಪತ್ತೈದು ಮಾತ್ರ! ಆದರೂ ಆ ವಿವಾಹವು ಮಕ್ಕಾ ಪಟ್ಟಣದಲ್ಲಿ ಅತಿಶಯ ವೈಭವದಿಂದ ನಡೆಯಿತು. ವಯಸ್ಸಿನಲ್ಲಿ ಅಷ್ಟು ವ್ಯತ್ಯಾಸವಿದ್ದಿತಾದರೂ, ಆ ಪತಿಪತ್ನಿಯರು ಅತಿಶಯ ಪ್ರೇಮ ಅಭಿಮಾನಗಳಿಂದಲೂ ಅನ್ಯೋನ್ಯತೆಯಿಂದಲೂ ದಾಂಪತ್ಯಸುಖಸಂತೋಷಗಳನ್ನು ಅನುಭವಿಸುತ್ತಾ ಕೆಲವರ್ಷ ಕಾಲಯಾಪನೆಮಾಡಿದರು.

ಮುಹಮ್ಮದನಿಗೆ ತುಂಬುಯೌವನ. ಆಜಾನುಬಾಹು ಭವ್ಯದೇಹ. ಸಂಪೂರ್ಣ ಆರೋಗ್ಯಭಾಗ್ಯದಿಂದ ಪುಷ್ಟವಾಗಿದ್ದ ದೇಹಸ್ಥಿತಿಯನ್ನು ಸೂಚಿಸುವ-ಎಳೆನಗೆಯಿಂದ ಕೂಡಿ ಮನೋಹರವಾದ ಮುಖ, ನಗೆ ನಡಿಗೆ ನುಡಿ ನಡತೆಗಳಲ್ಲಿ ಕಂಡುಬರುತ್ತಿದ್ದ ಗಾಂಭೀರ್ಯ, ಆತನ ಸೂಕ್ಷ್ಮಮತಿ, ಚತುರತೆ ಧೈರ್ಯಸಾಹಸಗಳು, ಕಷ್ಟದಲ್ಲಿ ಸಿಕ್ಕಿಬಿದ್ದವರಿಗೆ ಸಹಾಯ ಮಾಡುವ ವಿಷಯದಲ್ಲಿ ಉದಾರತೆ, ಸರಳಸ್ವಭಾವ, ಶುದ್ಧವಾದ ಅರಬ್ಬೀ ಭಾಷೆಯಲ್ಲಿ ಆತನ ಬಾಯಿಂದ ಹೊರಡುತ್ತಿದ್ದ ಸ್ಫುಟವಾದ ಶಬ್ದಗಳು, ಅರ್ಥವತ್ತಾದ ಆಕರ್ಷಕವಾದ ನಿಷ್ಕಳಂಕವಾದ ವಾಗ್ವಿಜೃಂಭಣೆ, ಇವು ಆತನೆಡೆಗೆ ಅನೇಕರನ್ನು ಆಕರ್ಷಿಸಿದುವು. ಆತನ ವಾಕ್ಚಾತುರ್ಯದಿಂದ ಆಕರ್ಷಿಸಲ್ಪಡದವರಿಲ್ಲ ಆತನ ಅಭಿಪ್ರಾಯಕ್ಕೆ ಪ್ರತಿ ನುಡಿಯುವವರಿಲ್ಲ. ಹೀಗೆ ಮುಹಮ್ಮದನು ತನ್ನ ಜನ್ಮಸ್ಥಳವಾದ ಆ ಮಕ್ಕಾ ಪಟ್ಟಣದಲ್ಲಿ ಗೌರವಸ್ಥನಾದ ಒಬ್ಬ ದೊಡ್ಡಮನುಷ್ಯನೆಂದು ಗಣ್ಯನಾದನು.

ಈ ಸಂದರ್ಭದಿಂದ ಮುಂದೆ ಹದಿನೈದು ವರ್ಷಗಳಕಾಲ, ಆತನ ಜೀವಿತದಲ್ಲಿ ನಡೆದ ಸಂಗತಿಗಳೇನೆಂಬುದಕ್ಕೆ ಚರಿತ್ರೆಯಲ್ಲಿ ಉಲ್ಲೇಖವಿಲ್ಲ. ಆದರೆ 'ಬಹುಶಃ ಈ ಹದಿನೈದು ವರ್ಷಗಳ ಅವಧಿ ಕಾಲದಲ್ಲಿ ಆತನು, ಧ್ಯಾನಮೌನಾದಿಗಳಿಂದ ಆ ತನ್ನ ಜನ್ಮೋದ್ದೇಶವನ್ನು ಸಾಧಿಸುವ ಮಾರ್ಗವಾವುದೆಂಬುದನ್ನು ಕುರಿತು, ಸಾಧನೆ ಮಾಡುತ್ತಿದ್ದಿರಬಹುದು' ಎಂದು, ಜ್ಹಾನ್ ಡೇವನ್ ಪೋರ್ಟ್ ಎಂಬೊಬ್ಬ ಚರಿತ್ರಕಾರನು ಅಭಿಪ್ರಾಯಪಟ್ಟಿರುವನು. ಈ ಹದಿನೈದು ವರ್ಷಗಳ ಮಧ್ಯಕಾಲದಲ್ಲೂ ಅವರ ಆ ಪಟ್ಟಣದ ಸ್ಥಳೀಕ

ವಿಚಾರಗಳಲ್ಲಿ ಸಾರ್ವಜನಿಕ ಕೆಲಸಕಾರ್ಯಗಳೇನಾದರೂ ನಡೆಯಬೇಕಾದ ಸಂದರ್ಭವಿದ್ದಾಗಲೆಲ್ಲಾ ಆತನು ದೃಷ್ಟಿಗೋಚರನಾಗುತ್ತಿದ್ದುದುಂಟು. -''ಮಕ್ಕಾಪಟ್ಟಣದಲ್ಲಿ ಆ ಕಾಲದಲ್ಲಿ, ನ್ಯಾಯವಿಚಾರ ನಡೆಸಿ ಅಪರಾಧಿಗಳನ್ನು ಶಿಕ್ಷಿಸತಕ್ಕಂತಹ ನ್ಯಾಯಾಸ್ಥಾನಗಳಿರಲಿಲ್ಲ ಸ್ಥಳೀಕರ ರಕ್ತಸಂಬಂಧ ಬಾಂಧವ್ಯಗಳಿದ್ದ ಜನರು ಸುರಕ್ಷಿತರಾಗಿದ್ದರಲ್ಲದೆ ಪರಸ್ಥಳೀಕರು ಅನೇಕ ವೇಳೆಗಳಲ್ಲ ತಮ್ಮ ಒಡವೆ ವಸ್ತ್ರಸಾಮಾನುಗಳನ್ನಲ್ಲ - ಹೆಂಡತಿ ಮಕ್ಕಳನ್ನು ಸಹ ಕಳೆದುಕೊಳ್ಳಬೇಕಾದ ಸಂದರ್ಭ ಪ್ರೊದಗುತ್ತಿದ್ದಿತು. ಈ ಸ್ಥಿತಿಯನ್ನು ನೋಡಿ ಮರುಗಿದ ಮಹಮ್ಮದನು, ಮುತಾಲಿಬ್-ಹಾಷಿಮ್ ಇವರ ವಂಶೀಕರಾದ ಇತರ ಮುಖ್ಯಸ್ಥರನ್ನೂ, ಜೋಹ್ರಾ, ತಾಯಿಂ ಮುಂತಾದ ಕುಟುಂಬಗಳಿಗೆ ಸೇರಿದ ಕೆಲವುಂದಿಯನ್ನೂ ಪ್ರೇರಿಸಿ, 'ಹಿಲ್‌ಫಲ್‌ಫ್ಯೂಡಲ್' ಎಂಬೊಂದು ಸಂಘವನ್ನು ಸ್ಥಾಪಿಸಿದನು. ಇದು ಮಕ್ಕಾ ಪಟ್ಟಣದ ನಿವಾಸಿಗಳಿಗೆ ಮಾತ್ರವಲ್ಲ-ಪರಸ್ಥಳದವರಿಗೂ, ಸ್ವತಂತ್ರರಿಗೆ ಮಾತ್ರವಲ್ಲ-ಗುಲಾಮರಿಗೂ, ಕಳವು ದರೋಡೆ ಮುಂತಾದುವುಗಳಿಂದ ರಕ್ಷಣೆಯನ್ನು ಒದಗಿಸಿ, ಅರ್ಧ ಮಾನ ಪ್ರಾಣಹಾನಿಗಳುಂಟಾಗದಂತೆ ಕಾಪಾಡುತ್ತಿದ್ದಿತು. ಇಸ್ಲಾಂ ಮತವು ಸ್ಥಾಪಿತವಾದ ಅರ್ಧ ಶತಮಾನಕಾಲ ಈ ಸಂಘವು ಬಹು ತೇಜಸ್ವಿಯಾಗಿ ಕೆಲಸಮಾಡಿತು'' ಹೀಗೆಂದು ಸ್ಯಯದ್ ಅಮಿರ್ ಅಲಿ ಎಂಬವರು ತಮ್ಮ 'ಸ್ಪಿರಿಟ್ ಆಫ್ ಇಸ್ಲಾಂ' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ

ಈ ಬಗೆಯ ಪರೋಪಕಾರ ಕೆಲಸಗಳೆಂದರೆ ಮುಂದೆ ನುಗ್ಗಿ ಶ್ರದ್ಧೆಯಿಂದ ಮಾಡುವ ಆತನ ಸ್ವಭಾವವೂ, ನಿಷ್ಕಳಂಕಜೀವನವೂ ಫಲಾಪೇಕ್ಷೆಯಿಲ್ಲದೆ, ಬಡವರು ಬಲ್ಲಿದರನ್ನದೆ ಎಲ್ಲರಲ್ಲೂ ಒಂದೇ ಬಗೆಯಾಗಿ ಕಷ್ಟಕ್ಕೆ ನೆರವಾಗಿ ಸಹಾಯಮಾಡುತ್ತಿದ್ದ ಆತನ ನಿಸ್ವಾರ್ಥತೆ ನಿಸ್ಪೃಹತೆಗಳೂ, ಸಮಸಮಾನಸ್ಕಂಧರಲ್ಲಿ ಆತನನ್ನು ವಿಶೇಷ ಗೌರವಕ್ಕೆ ಪಾತ್ರನನ್ನಾಗಿ ಮಾಡಿ, 'ಅಲ್ ಅಮೀರ್' ಎಂದರೆ ಒಬ್ಬ ಸಾರ್ವಜನಿಕ ಮೊಕ್ತೇಸರ (Trusty) ಎಂಬ ಪದವಿಯನ್ನು ತಂದಿತ್ತುವು.

ಸಮಾನ ಮನುಷ್ಯ ವರ್ಗದವರಾದ ಗುಲಾಮರ ವಿಷಯದಲ್ಲಿ ಆತನ ಮನೋಭಾವವು ಹೇಗಿತ್ತೆಂಬುದನ್ನು ತಿಳಿಸುವುದಕ್ಕೆ ಆ ಕಾಲದಲ್ಲ ನಡೆದ

ಒಂದು ಸಂಗತಿಯನ್ನು ಉದಹರಿಸಬಹುದು. ಒಂದುಸಾರಿ ಹಾರೀತ್ ಎಂಬ ಬಾಲಕನು ಕೊಳ್ಳೆಗಾರರ ವಶನಾಗಿ ತಾಯಿತಂದೆಗಳಿಂದ ಅಗಲಿ ಮಕ್ಕಾ ಪಟ್ಟಣದಲ್ಲಿ ಖಾದೀಜಾಬೀಯ ಸಂಬಂಧಿಯೊಬ್ಬನಿಗೆ ಗುಲಾಮನಾಗಿ ಮಾರಲ್ಪಟ್ಟನು. ಅವನು ಆ ಹುಡುಗನನ್ನು ಖಾದೀಜಾಳ ಉಪಯೋಗ ಕ್ಕೆಂದು ಬಹುಮಾನವಾಗಿ ಕೊಟ್ಟನು. ಆಕೆಯು ಅವನನ್ನು ತನ್ನ ಪತಿ ಯಾದ ಮಹಮ್ಮದನ ಸೇವೆಗೆಂದು ಒಪ್ಪಿಸಿದಳು ಆದರೆ ಮಹಮ್ಮದನು ಆ ಹುಡುಗನು ತನ್ನ ಸ್ವಾಧೀನಕ್ಕೆ ಬಂದೊಡನೆಯೇ ಅವನ ನಿರ್ಬಂಧನಿಂದ ಬಿಡುಗಡೆ ಮಾಡಿ, ಬೇಕಾದಲ್ಲಿಗೆ ಹೊರಟುಹೋಗಬಹುದೆಂದು ತಿಳಿಸಿದನು. ಆದರೆ ಆ ಹುಡುಗನು ತನ್ನ ಸ್ವಾಮಿಯನ್ನು ಬಿಟ್ಟು ಹೋಗಲಾಸಿಸದೆ ಅತ ನಲ್ಲೇ ನಿಂತನು. ಕೆಲವು ವರ್ಷಗಳ ತರುವಾಯ ಆ ಹುಡುಗನ ತಂದೆಯು ಬೇಕಾದಷ್ಟು ಪ್ರತಿಫಲ ದ್ರವ್ಯವನ್ನು ಕೊಟ್ಟು ತನ್ನ ಮಗನನ್ನು ಬಿಡಿಸಿ ಕೊಂಡು ಹೋಗಲು ಬಂದನು. ಆಗ ಮಹಮ್ಮದನು 'ಅಯ್ಯಾ ನಿನ್ನ ಮಗನನ್ನು-ಆತನು ಬರುವುದಾದರ ಏನೂ ಕೊಡದೆಯೇ ಕರೆದುಕೊಂಡು ಹೋಗು' ಎಂದು ಆ ಹುಡುಗನನ್ನು ಕರಯಿಸಿ, ಅವನ ತಂದೆಯ ಬಳಿ ಯಲ್ಲಿ ಬಿಡಿಸಿದನು. ಆದರ ಆ ಹುಡುಗನು, ಮಹಮ್ಮದನಲ್ಲಿ ತನ್ನ ಸ್ವಂತ ತಂದೆಗಿಂತಲೂ ಹೆಚ್ಚಿನ ಪ್ರೀತಿವಿಶ್ವಾಸಗಳನ್ನಿಟ್ಟಿದ್ದುದರಿಂದ ಮುಂದೂ ಅಲ್ಲೇ ಇರುವುದಾಗಿ ಹೇಳಿಬಿಟ್ಟನು. ಅವನ ತಂದಯು ಅತಿಶಯ ತೃಪ್ತಿ ಪಟ್ಟು ಮರುಮಾತಾಡದೆ ಹೊರಟುಹೋದನು.

ಆ ವೇಳೆಗೆ ಮಹಮ್ಮದನಿಗೆ ನಾಲ್ವತ್ತು ವರ್ಷ ವಯಸ್ಸಾಯಿತು. ಈ ಹದಿನೈದು ವರ್ಷಗಳ ಸಾಧನೆಯಿಂದ ಆತನ ಮುಖದಲ್ಲಿ ಶಾಂತಿ ಸಮಾ ಧಾನದ ಕಳೆಯು ಪ್ರಕಾಶಿಸುತ್ತಿದೆ ಮುಂದೆ ಒಂದಾನೊಂದು ದಿನ ರಂಜಾನ್ ಹಬ್ಬದ ಸಲುವಾಗಿ, ಮಕ್ಕಾಪಟ್ಟಣದ ಸಮೀಪದಲ್ಲಿದ್ದ ಹೀರಾ ಎಂಬ ಗುಡ್ಡದೊಳಗಿನ ಒಂದು ಗುಹೆಯಲ್ಲಿ ಏಕಾಂಗಿಯಾಗಿ ಕುಳಿತು ಧ್ಯಾನಾಸಕ್ತನಾಗಿದ್ದಾನೆ ಮನಸ್ಸಿನಲ್ಲಿ ಉನ್ನತ ಭಾವಗಳು ಉತ್ಪನ್ನವಾಗ ಬೇಕೆಂದು ಲೋಕಹಿತವನ್ನು ಕುರಿತು ಪ್ರಾರ್ಥಿಸುತ್ತಿದ್ದಾನೆ. ಆ ಸಂದ ರ್ಭದಲ್ಲಿ —"ಎಲೈ ಭಗವತ್ಪ್ರಿಯನಾದವನು ನೀನೇ! ನೀನೇ ಭಗವತ್ಸಂ ದೇಶವನ್ನು ಲೋಕಕ್ಕೆ ಸಾರಲು ಯೋಗ್ಯನಾದ ಪ್ರವಾಚಕನು (Prophet)"

ಎಂಬೊಂದು ಅಶರೀರ ವಾಣಿಯು ಆತನಿಗೆ ಕೇಳಿಸಿತು. ಇದಾದ ಕೆಲವು ದಿನಗಳ ಮೇಲೆ, ಒಂದಾನೊಂದು ರಾತ್ರಿ ಹೀಗೆಯೇ ಧ್ಯಾನಮಗ್ನನಾಗಿ ಮಲಗಿದ್ದಾಗ ಪುನಃ ಅದೇ ಧ್ವನಿಯು—'ಎಲೈ ಕೂಗು ಕೂಗು ಮೊರ ಯಿಡು' ಎಂದಂತೆ ಕೇಳಿಸಿತು. ಆ ಧ್ವನಿಯು ಮುಹಮ್ಮದನಿಗೆ ಅರ್ಥ ವಾಗಲಿಲ್ಲ. ಮನಸ್ಸಿನಲ್ಲಿ ಬಹು ಕಳವಳವೂ ಭೀತಿಯೂ ಉಂಟಾದುವು. ಏನು ಮಾಡಬೇಕೆಂದು ತೋರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಎದೆಯ ಮೇಲೆ ಏನೋ ಬಹು ಭಾರವಾದ ವಸ್ತುವೊಂದು ಇಟ್ಟಂತೆ ತೋರಿತು. ಪುನಃ ಅದೇ ಧ್ವನಿಯು-- 'ಕೂಗು ಕೂಗು ಮೊರೆಯಿಡು' ಎಂದು ಹೇಳಿ ದಂತೆ ಕೇಳಿಸಿತು. ಕೊನೆಗೆ ಆತನು—"ಏನೆಂದು ಕೂಗಲಿ ? ಯಾರಿಗೆ ಮೊರೆಯಿಡಲಿ ?" ಎನ್ನಲು, ಆ ಧ್ವನಿಯು – 'ಯಾರು ಪ್ರೇಮ ಪೂರ್ಣತೆ ಯಿಂದ ಮನುಷ್ಯನನ್ನು ಸೃಷ್ಟಿಸಿದನೋ, ಮತ್ತು ಯಾರು ದಯಾಮ ಯನೊ,—ಅಜ್ಞನಾದ ಮಾನವನಿಗೆ ಅವನ ಕರ್ತವ್ಯವೇನೆಂಬುದನ್ನು ಬೋಧಿ ಸಿದವರಾರೋ ಅಂತಹ ಪರಮ ಪ್ರಭು ಭಗವಂತನನ್ನು ಕುರಿತು ಮೊರ ಯಿಡು' ಎಂದು ಪುನಃ ಹೇಳಿದಂತಾಯಿತು. ಆ ಮಾತನ್ನು ಕೇಳಿದೊಡ ನೆಯೇ ಆತನ ಮನಸ್ಸೆಂಬ ಕರಡಿಗೆಯ ಮುಚ್ಚಳವು ತತ್‍ಕ್ಷಣ ತೆರೆ ದಂತಾಯಿತು. ಆ ಮಾತುಗಳು ತನ್ನ ಆತ್ಮಕ್ಕಾಗಿಯೇ ಹೇಳಲ್ಪಟ್ಟಂತೆ ಬೋಧಯಾಗಿ ಹೃದಯದಲ್ಲಿ ನಟ್ಟುವು. ಈ ಭಗವತ್ಸಂದೇಶದ ಭಾರವನ್ನು ವಹಿಸಿ ಆತನ ದೇಹಮನೋಬುದ್ಧಿಗಳು ಶಿಥಿಲವಾದಂತಾದುವು ಒಡನೆ ಅಲ್ಲಿಂದ ಹೊರಟು ಮನೆಗೆ ಬಂದು—'ಖಾದೀಜಾ, ನನಗೇನೋ ಆಗಿದೆ. ಆವೇಶ ಬಂದಂತಿದೆ ಅಥವ ನನಗೆ ಭ್ರಾಂತಿಯುಂಟಾಗಿರಬಹುದೆ ?' ಎಂದು ಮುಂತಾಗಿ ಹೇಳತೊಡಗಿದನು.—ಖಾದಿಜಾಳು ಆತನನ್ನು ಬಗೆಬಗೆ ಯಿಂದ ಸಮಾಧಾಯಿಸಿ, ತನ್ನ ಸಹೋದರನಾದ ವರಾಖನೆಂಬಾತನೊಬ್ಬ ನನ್ನು ಹೋಗಿ ಕಂಡು ಆ ಸಂಗತಿಯನ್ನೆಲ್ಲಾ ತಿಳಿಸಿದಳು. ವೃದ್ಧನೂ ಕುರುಡನೂ ಆಗಿದ್ದರೂ ಆತನು ಆರ್ಷೇಯ ಗ್ರಂಥಗಳನ್ನೆಲ್ಲಾ ಪಠಿಸಿದ ಬಹು ಅನುಭವಿಯಾಗಿದ್ದನು. ಖಾದೀಜಾಳು ಹೇಳಿದ ಆ ಮಾತನ್ನು ಕೇಳಿ ದೊಡನೆಯೇ ಆತನು—'ತಂಗೀ ಭಯಪಡಬೇಡ. ಪೂರ್ವದಲ್ಲಿ ಮೋಸ ಸ್ಸೆಂಬ ಭಕ್ತನ ಬಳಿಗೆ ಕಳುಹಿಸಲ್ಪಟ್ಟಿದ್ದ ದೇವದೂತನೇ ಈಗ ನಿನ್ನ ಪತಿಯ

ಬಳಿಗೂ ಕಳುಹಿಸಲ್ಪಟ್ಟಿದ್ದಾನೆ. ಈತನು ತನ್ನ ಜನಾಂಗಕ್ಕೆ ಭಗವಂತನಿಂದ ಸಂದೇಶವನ್ನು ತಂದಿತ್ತು ಲೋಕಸೇವೆಯನ್ನು ಮಾಡುವ ಮಹತ್ಕಾರ್ಯಕ್ಕಾಗಿ ಚುನಾಯಿತನಾದವನೆಂಬುದರಲ್ಲಿ ಸಂಶಯವಿಲ್ಲ.—ಆ ವಿಷಯವನ್ನು ನಿನ್ನ ಪತಿಗೆ ತಿಳಿಸಿ ಭಯಪಡದಿರೆಂದು ಹೇಳು' ಎಂದನು.

ಬಹು ಶ್ರುತನೂ ವಯೋವೃದ್ಧನೂ ಆದ ವರಾಖಾನು ಹೇಳಿ ಕಳುಹಿಸಿದ ವಾರ್ತೆಯು ಡೋಲಾಯಮಾನಮನಸ್ಕನಾಗಿದ್ದ ಆತನಿಗೆ ಧೈರ್ಯವನ್ನುಂಟುಮಾಡಿತು. ಮುಂದೆ ಕೆಲ ದಿನಗಳು ಆತನು ಹಾಗೆಯೇ ಧ್ಯಾನಾಸಕ್ತನಾಗಿ ಮತ್ತೇನಾದರೂ ಆಜ್ಞೆಯು ಬರುವುದೋ ಎಂದು ಕಾದಿದ್ದನು. ಒಂದು ದಿನ ಹಾಗೆ ಧ್ಯಾನಮಗ್ನನಾಗಿದ್ದಾಗ ಮತ್ತೊಂದು ವಾಣಿ ಕೇಳಿಸಿತು.—'ಎಲೌ ಭಕ್ತನೇ ಭ್ರಾಂತನಾಗಬೇಡ. ಏಳು. ಭಗವಂತನ ಮಹಿಮೆಯನ್ನು ಪ್ರಕಾಶಗೊಳಿಸು. ನಿನ್ನೀ ದೇಹವನ್ನು ಶುದ್ಧಿಗೊಳಿಸು. ಹೇಸಿಕೆಯನ್ನು ಕಳೆ. ಸ್ವಾರ್ಥತೆಯನ್ನು ನೀಗು. ನಿಷ್ಕಾಮಿಯಾಗಿ ನಿನ್ನ ಪ್ರಭುವಿಗಾಗಿ ಸಮಾಧಾನದಿಂದ ಕರ್ತವ್ಯತತ್ಪರನಾಗು.' ಮಹಮ್ಮದನ ಚದುರಿದ ಮನಸ್ಸಿನಮೇಲೆ ಈ ಅಶರೀರ ವಾಕ್ಯಗಳು ಬಹು ಉತ್ತಮ ರೀತಿಯ ಪರಿಣಾಮವನ್ನುಂಟುಮಾಡಿದುವು. ಒಡನೆ ಆತನು ಮೇಲಕ್ಕೆದ್ದು, ತನಗೆ ವಹಿಸಲ್ಪಟ್ಟ ಆ ಕಾರ್ಯಕ್ಕಾಗಿ ನಡುಕಟ್ಟಿ ಸಿದ್ಧನಾದನು. ಮನಸ್ಸಿನ ಭೀತಿಯೂ ಅಲ್ಪಭಾವವೂ ಮಾಯವಾದುವು. ಮುಂದೆ ತನ್ನ ಜೀವಿತವನ್ನು ಮಾನವವರ್ಗದ ಸೇವೆಗೆಂದು ದಾನಮಾಡಿಬಿಟ್ಟನು. ಸ್ಥಳ ಕಾಲಗಳೆಂಬ ಲಕ್ಷ್ಯವಿಲ್ಲದೆ, ತನ್ನ ದೃಷ್ಟಿಗೆ ಬಂದವರಿಗೆಲ್ಲ ಭಗವದ್ವಿಚಾರವನ್ನು ಕುರಿತು ಪ್ರಸಂಗಿಸತೊಡಗಿದನು. ಆತನ ವಾಗ್ಝರಿಯು ನಿರ್ಭಯವಾಗಿಯೂ, ನಿಷ್ಕಲ್ಮಷತೆಯಿಂದಲೂ ಹೊರಟು, ಶ್ರೋತೃಗಳನ್ನು ಸ್ತಂಭೀಭೂತರನ್ನಾಗಿ ಮಾಡುವುದು.

'ಗುಣಾಃ ಪೂಜಾಸ್ಥಾನಂ' ಎಂದು ಆರ್ಯಕವಿ ಭರ್ತೃಹರಿಯು ಉದ್ಘೋಷಿಸಿದ್ದಾನಲ್ಲವೆ? ಮನುಷ್ಯನು ತನ್ನಲ್ಲಿನ ಹೇಯಗುಣಗಳನ್ನು ನೀಗಿದಾಗ ದೈವಿಕ ಗುಣಗಳಾದ ನಿಸ್ವಾರ್ಥತೆ, ಫಲಾಪೇಕ್ಷಾರಹಿತವಾದ ಕರ್ಮ, ಭಕ್ತಿ ಜ್ಞಾನ ವೈರಾಗ್ಯಾದಿಗಳು, ಪರೋಪಕಾರ ಪರಾಯಣತೆ, ತ್ಯಾಗ, ಸತ್ಯವಾದ ನಡೆನುಡಿಗಳು ಮುಂತಾದುವನ್ನು ತನ್ನ ಜೀವಿತದಲ್ಲಿ

ಪ್ರಕಟಿಸಲಾರಂಭಿಸುತ್ತಾನೋ ಆಗ ಆತನು ಸತ್ಯ ಪಥದಲ್ಲಿ - ಎಂದರೆ ದೈವಿಕ ಮಾರ್ಗದಲ್ಲಿ ನಡೆಯುತ್ತೊಡಗಿದ್ದಾನೆಂದು ಹೇಳಬಹುದು. ಆ ಸ್ಥಿತಿಯಲ್ಲಿ ಆತನಲ್ಲಿ ' ಇದು ನನ್ನದು - ಅದು ತನ್ನದು ' ಎಂಬ ಅಲ್ಪ ಭಾವಗಳು ಉಳಿಯವು. 'ನಾಲ್ಕು ಗೋಡೆಗಳ ಒಳಗಿರುವ ಪ್ರದೇಶವು ಮಾತ್ರ ತನ್ನ ಮನೆ' ಎಂಬ ಭಾವವು ನಾಶವಾಗಿ, 'ವಿಶ್ವವೇ ತನ್ನ ಕುಟುಂಬ'ವೆಂಬ ಉದಾರ ಭಾವವು ಗೋಚರಿಸುವುದು. ಆಗಲಾತನು ಸರ್ವರ ಪ್ರೀತಿ ವಿಶ್ವಾಸಗಳಿಗೂ ಪಾತ್ರನಾಗುವನು. ನಮ್ಮ ಕಥಾನಾಯಕರು ಈಗ ಅಂತಹ ಉನ್ನತ ಗುಣಗಳನ್ನು ಗಳಿಸಿ ಲೋಕಸೇವೆಗೆ ನಡುಕಟ್ಟಿ ನಿಂತರಾದುದರಿಂದ, ಇನ್ನು ಮುಂದೆ ಅವರನ್ನು ಸಂಬೋಧನೆಯಲ್ಲೂ ಗೌರವಿಸುವುದು ನಮ್ಮ ಕರ್ತವ್ಯವೆಂದು ಭಾವಿಸಿ, ಮುಂದೆ ಅವರನ್ನು 'ಮುಹಮ್ಮದರು'—'ಪೈಗಂಬರರು' ಎಂದು ಬಹುವಚನ ಪ್ರಯೋಗದಿಂದ ಕರೆಯುಲೆಳೆಸುತ್ತೇವೆ.

ಪೈಗಂಬರರ ಬೋಧನೆಗಳಿಗೆ ಕಿವಿಗೊಟ್ಟು, ಅವರ ಸಂದೇಶವನ್ನು ಸ್ವೀಕರಿಸಿ, ಅವರಿಗೆ ನಡೆದು ಬಂದ ಪೂರ್ವಪದ್ಧತಿಯನ್ನು ಬಿಟ್ಟು, ನೂತನ ಮಾರ್ಗದಲ್ಲಿ ಕಾಲಿಟ್ಟವಳು ಪ್ರಾರಂಭಕ್ಕೆ ಅವರ ಪತ್ನಿ ಖಾದೀಜಾ, ಆಕೆಯು ಕಳೆದ ಹದಿನೈದು ವರ್ಷಗಳಿಂದಲೂ ಅವರ ನಡೆನುಡಿಗಳನ್ನೂ ಗುಣಸ್ವಭಾವಗಳನ್ನು ನೋಡಿ ತೃಪ್ತಳಾಗಿದ್ದು, ಅವರ ಹೇಳಿಕೆಗಳಲ್ಲಿ ಸಂದೇಹಿಸದೆ, - ಒಡನೆ ಅವರಿಗೆ ಆಚರಣೆಯಲ್ಲಿದ್ದ - ಅದರ ಬಹು ಅಧಮ ಸ್ಥಿತಿಗಿಳಿದಿದ್ದ ಮೂರ್ತಿ ಪೂಜಾ ಪದ್ಧತಿಯನ್ನು ತ್ಯಜಿಸಿದಳು ಆಕೆಯ ತರುವಾಯ ಅಬು ತಾಲಿಬ್ಬನ ಮಗನಾದ ಅಲಿ ಎಂಬಾತನೂ, ಹಾರೀತನ ಮಗನಾದ ಜೇಯಿದ್ ಎಂಬಾತನೂ, ತರುವಾಯ ಅಬ್ದುಲ್ ಕಾಬಾ, ಉತ್ಮಾನ್, ಅಬ್ದುಲ್ ರಹಿಮಾನ್, ಸಾದ್, ಜೋಬಯರ್ ಮುಂತಾದ ಇತರ ಅನೇಕರೂ ಅವರ ನವೀನ ಮತವನ್ನು ಅಂಗೀಕರಿಸಿದರು. ಹೀಗೆ ಪ್ರಾರಂಭಕ್ಕೆ ಕೇವಲ ಅವರ ಕುಟುಂಬಿಕರೂ, ಅಲ್ಲದೆ ಹೆಚ್ಚಾಗಿ ಸಂಬಂಧಿಕರು ಮಾತ್ರವೇ ಅವರ ಬೋಧನೆಗಳನ್ನು ಕೇಳಿ, ಮತಾಂತರಗೊಂಡರಲ್ಲದೆ ಹೆಚ್ಚಾಗಿ ಹೊರಗಿನಿಂದ ಯಾರೂ ಸೇರಲಿಲ್ಲ. ಪ್ರಾರಂಭದ ಮೂರು ವರ್ಷಕಾಲ ಹೀಗೆ ಗುಪ್ತ ರೀತಿಯಲ್ಲೇ ಬೋಧನಾ ಕಾರ್ಯವು

ನಡೆದ ತರುವಾಯ, ಮುಹಮ್ಮದ್‌ರವರು ಕೊರಯ್ಷಿ ಪಂಗಡದವರಿಗೆ ಬಹಿರಂಗವಾಗಿ ಬೋಧಿಸಲಾರಂಭಿಸಿದರು. ಮಕ್ಕಾ ಪಟ್ಟಣಕ್ಕೆ ಸಮೀಪದಲ್ಲಿದ್ದ ಸಾಫ ಎಂಬೊಂದು ಗುಡ್ಡದಮೇಲೆ, ಅವರನ್ನು ಸಭೆಯಾಗಿ ಸೇರಿಸಿ, ದೇವರ ಹೆಸರಿನಲ್ಲಿ ಅವರು ಮಾಡುತ್ತಿರುವ ಭಯಂಕರ ಕೃತ್ಯಗಳನ್ನೆಲ್ಲ ಮನಮುಟ್ಟುವಂತೆ ವಿವರಿಸಿದರು. ಹಿಂದೆ ಭಗವದಾಜ್ಞೆಯನ್ನು ಲಕ್ಷಿಸದೆ ನಾಶವಾದ ಜನಾಂಗಗಳ ಪರಿತಾಪಕರ ಚರಿತ್ರೆಯನ್ನೆಲ್ಲ ಹೃದಯದ್ರಾವಕವಾಗಿ ವರ್ಣಿಸಿದರು. ಅಂತಹ ದುಸ್ಥಿತಿ ದುರಾಚಾರಗಳಿಂದ ನೀತಿ ದೂರವಾಗಿರುವ ಸಿವಿಧ್ಯಾ ಪದ್ಧತಿಗಳನ್ನು ಬಿಟ್ಟು ಸತ್ಯವೂ ಶುದ್ಧವೂ ಪ್ರೇಮಪೂರ್ಣವೂ ಆದ ಮತದಲ್ಲಿ ಮುಂದಾದರೂ ನಡೆಯತೊಡಗಿರೆಂದು ಬೋಧಿಸಿದರು. ಆದರೆ ಆ ಮಾತುಗಳು ಆ ಗುಂಪಿಗೆ ಸೂಕ್ತವೆಂದು ತೋರಲಿಲ್ಲ. ಅನೇಕರು ಅವರನ್ನು ಮನಬಂದಂತೆ ನಿಂದಿಸಿದರು. ಅಪಹಾಸ್ಯಮಾಡಿದರು. ಬಗೆಬಗೆಯಿಂದ ಅಣಕಿಸಿದರು. ಆದರೆ ಭಗವದ್ಪ್ರೇಮಬಲದಿಂದ ಕಾರ್ಯತತ್ಪರರಾಗಿದ್ದ ಅವರು ಅವುಗಳನ್ನು ಲಕ್ಷ್ಯಮಾಡಲಿಲ್ಲ. ಆರಂಭದ ನಿರುತ್ಸಾಹಕರವಾದ ಈ ಸಂದರ್ಭಗಳಿಂದ ಬೆದರಿ ಕಂಗೆಡಲಿಲ್ಲ. ಪುನಃಪುನಃ ಬೋಧಿಸುತ್ತಲೇ ಬಂದರು. ಕೊರಯ್ಷಿ ಪಂಗಡದವರನ್ನು ಒಲಿಸಿಕೊಳ್ಳುವುದು ಸಧ್ಯಕ್ಕೆ ಅಸಾಧ್ಯವೆಂದು ಕಂಡುಬಂದೊಡನೆಯೇ, ಮಕ್ಕಾಕ್ಕೆ ಯಾತ್ರೆಗಾಗಿ ಬರುತ್ತಿದ್ದ ಹೊರಗಿನ ಜನಗಳ ಮೇಲೆ ತಮ್ಮ ದೃಷ್ಟಿಯನ್ನು ತಿರುಗಿಸಿದರು.—ಮುಹಮ್ಮದರ ಮಾತುಗಳಿಗೆ ಕಿವಿಗೊಡದಿರುವಂತೆ, ಆ ಯಾತ್ರಿಕರಿಗೆ ಕೊರಯ್ಷಿ ಪಂಗಡದವರು ಬೋಧಿಸದಿರಲಿಲ್ಲ. ಆದರೂ, ಮಕ್ಕಾದಿಂದ ಹಿಂದಿರುಗಿದ ಆ ಜನಗಳು, ತಮ್ಮತಮ್ಮ ಸ್ಥಳಗಳಿಗೆ ನಡೆದು, ಆ ನವೀನ ಸಂದೇಶವಾಹಕರ ವಿಚಾರವನ್ನು ಎಲ್ಲೆಡೆಯಲ್ಲೂ ಬಿತ್ತಿದರು.



## ಅಧ್ಯಾಯ ೪ "ಮಕ್ಕಾದಿಂದ ಮದೀನಕ್ಕೆ"

ದಿನದಿನಕ್ಕೆ ಹೆಚ್ಚುತ್ತಿದ್ದ ಪೈಗಂಬರರ ಈ ಬಗೆಯ ಜಯವು ಕೊರೆಯ್ಷಿ ಪಂಗಡದವರಿಗೆ ಬಹು ಭೀತಿಯನ್ನುಂಟುಮಾಡಿತು. ಅವರು ಬೋಧಿ

ಸುತ್ತಿದ್ದ ಏಕದೇವತಾರಾಧನೆಯು ಬಹುಕಾಲದಿಂದ ನಡೆದುಬಂ
ಮಕ್ಕಾ ಪಟ್ಟಣದ ಶ್ರೇಷ್ಠತೆಯನ್ನು ಮಾತ್ರವಲ್ಲ, ತಮ್ಮ ಸಂಸ್ಥಾನದ
ಸ್ಥಯನ್ನೇ ಹಾಳುಮಾಡುವುದೆಂದು ಬಗೆದರು. ಆ ಪಂಗಡದ ಮು
ಸ್ಥರು ಈ ನವೀನ ಬೋಧನೆಯು ಜನಮನದಲ್ಲಿ ಬೇರೂರುವುದಕ್ಕೆ ಮು
ಯೇ ಸಾಧ್ಯವಿದ್ದ ಮಾರ್ಗಗಳಿಂದಲೆಲ್ಲ ನಾಶಗೊಳಿಸಬೇಕೆಂದು ಕೃತಸಂಕ
ರಾದರು. ಈ ಶತ್ರುಗಳ ಮಧ್ಯೆ, ತಮ್ಮ ಮನಸ್ಸಾಕ್ಷಿಗೆ ವ್ಯಕ್ತವಾ
ಆ ಕಾರ್ಯಮಾಡುವುದು, ಮುಹಮ್ಮದ್‌ಯವರಿಗೆ ಅತಿಶಯ ಕಠಿಣ
ಗಿತ್ತು. ಅವರು ಬೀದಿಯಲ್ಲಿ ಓಡಾಡುವಾಗ ಅಪಹಾಸ್ಯಮಾಡುವರು,
ಕಿಸುವರು, ಅವರು ಪ್ರಾರ್ಥನೆಮಾಡಲು ಪ್ರಾರಂಭಿಸಿದೊಡನೆಯೇ
ಮಾನಕರವಾದ ಹಾಡುಗಳನ್ನು ಹಾಡಿ ಗುಲ್ಲೆಬ್ಬಿಸುವರು, ಕೂಗುವ
ಅವರ ಶಬ್ದವು ಯಾರಿಗೂ ಕೇಳದಂತೆ ಗಲಾಟೆಮಾಡಿ ಪ್ರತಿಬಂಧಪ
ವರು. ಅವರನ್ನು ಅನುಸರಿಸಿದವರಿಗೆ ಪ್ರಾಪ್ತವಾಗುತ್ತಿದ್ದ ಕಷ್ಟಗಳಂ
ಹೇಳಲಸಾಧ್ಯ! ಅವರನ್ನು ಯಾರೂ ಹತ್ತಿರ ಸೇರಿಸರು ಅವರಿಗೆ ಬೇ
ವಸ್ತುಗಳು ದೊರೆಕದಂತೆ ಮಾಡುವರು. ಬಿಲಾಲ್ ಎಂಬೊಬ್ಬ ನೀಗ್
ಗುಲಾಮನು ಮುಹಮ್ಮದರ ನವೀನ ಧರ್ಮವನ್ನು ಅವಲಂಬಿಸಿದ್ದ
ಶತ್ರುಗಳು ಅವನನ್ನು ಉರಿಬಿಸಿಲಲ್ಲಿ ಎಳ್ದಿಸಿದರು ಎದೆಯಮೇಲೆ
ವಾದ ಕಲ್ಲನ್ನಿಟ್ಟು, ಪೈಗಂಬರರ ಸಂಬಂಧವನ್ನು ಬಿಟ್ಟುಬಿಡುವಂತೆ
ವಂತಗೊಳಿಸಿದರು ಎಷ್ಟೋ ಜನಗಳನ್ನು ಚಿತ್ರಹಿಂಸೆಮಾಡಿ, ತ
ದೇವತಾವಿಗ್ರಹಗಳನ್ನು ಪೂಜಿಸುವಂತ ಬಲವಂತಪಡಿಸುವರು. ಕೇ
ದ್ದರೆ ಕೊಲ್ಲುವರು. ಮೊಜೇಬ್ ಎಂಬವನೊಬ್ಬನು ಆ ಪಂಗಡದ
ಬ್ಬನಿಗೆ ಮಾರಲ್ಪಟ್ಟನು ಅವನು ಮುಹಮ್ಮದರ ಶಿಷ್ಯನೆಂಬ ಸಂಗತಿ
ತಿಳಿದೊಡನೆಯೇ, ಶತ್ರುಗಳು ಅವನನ್ನು ಹಿಡಿದು ಚಿತ್ರಹಿಂಸೆಮಾ
"ಈಗಲಾದರೂ ಹೇಳು! ಆ ಮುಹಮ್ಮದನ ಪಕ್ಷವನ್ನು ಬಿಡುತ್ತೇನೆಂ
ಇಸ್ಲಾಂನಾದರೂ ಬೊಗಳು" ಎಂದು ಬಲವಂತಪಡಿಸಿದರು. ಆದರೆ
ಭಕ್ತನು—'ನನಗೆ ಹೆಂಡತಿ ಬೇಡ-ಮಕ್ಕಳು ಬೇಡ, ಆಸ್ತಿಪಾಸ್ತಿಗಳು
ನೀವೇನುಬೇಕಾದರೂ ಮಾಡಿ' ಎಂದನು. ಕೊನೆಗೆ ಗಲ್ಲಿನ ಮರಕ್ಕೇ
'ಎಲೋ ಇಸ್ಲಾಂ ಧರ್ಮವನ್ನು ಬಿಟ್ಟೆನೆಂದು ಹೇಳು,ನಿನ್ನನ್ನು ಬಿಟ್ಟು

ಪಿವು' ಎಂದರು. ಆದರೆ ಅವನು 'ಈ ಪ್ರಪಂಚವನ್ನೇ ನನಗೆ ದಾನವಾಗಿ ಕೊಡುವಂತಿದ್ದರೂ ಆದಾಗಲಾರದು' ಎಂದು ಹೇಳಿಬಿಟ್ಟನು. ಅದನ್ನು ಕೇಳಿ ಕೃದ್ಧರಾದ ಅವರು ಕಾಲುಗಳ ಕಡೆಯಿಂದ ಅವನ ದೇಹವನ್ನು ಕತ್ತರಿಸಿ, ಚಿತ್ರಹಿಂಸೆ ಮಾಡಿ ಕೊಂದರು.

ಕೊನೆಗೆ ಮುಹಮ್ಮದರಮೇಲೂ ಆ ದುರುಳರು ಶಕ್ತಿಪ್ರಯೋಗಮಾಡಲು ಯೋಚಿಸಿದರು ಅವರಿಗೆ ಪ್ರಾಣಾಪಾಯಸ್ಥಿತಿಯುಂಟಾಯಿತು ಆಗ ಅಬುಬಕರ್ ಎಂಬೊಬ್ಬ ಅಪರ ಭಕ್ತನು ಅವರನ್ನು ಆ ವಿಪತ್ತಿನಿಂದ ಕಾಪಾಡಿದನು. ಇದನ್ನೆಲ್ಲಾ ಕಂಡು-ಪೈಗಂಬರರು ತಮ್ಮ ಶಿಷ್ಯರನ್ನು ಕುರಿತು—'ಮಿತ್ರರೇ ಕೆಲಕಾಲ ಅಬಿಸೀನಿಯಾಕ್ಕಾದರೂ ಹೋಗಿ ಅಲ್ಲಿ ವಾಸವಾಗಿರಿ ಅಲ್ಲಿಯ ದೊರೆಯು ಕ್ರೈಸ್ತನಾದರೂ ಮಹಸಹನೆಯುಳ್ಳವನೂ ದಯಾಳುವೂ ಎಂದು ಪ್ರಖ್ಯಾತನಾಗಿದ್ದಾನೆ" ಎಂದು ಬುದ್ಧಿವಾದ ಹೇಳಿದರು. ಅದನ್ನು ಕೇಳಿದ ಅವರ ಶಿಷ್ಯರು ಸಧ್ಯಕ್ಕೆ ಅದೇ ಉತ್ತಮವಾದ ಮಾರ್ಗವೆಂದು ನಿರ್ಧರಿಸಿ, ಕ್ರಿ. ಶ. ೬೧೫ನೆಯ ಸಂ|| ದಲ್ಲಿ, ಎಂಭತ್ತೊಂರು ಮಂದಿ ಗಂಡಸರೂ ಹದಿನೆಂಟು ಮಂದಿ ಹೆಂಗಸರೂ ಹೊರಟರು. ಇದು ಮೊದಲನೆಯ 'ಪಲಾಯನ' ವೆಂದು ಇಸ್ಲಾಂ ಧರ್ಮಗ್ರಂಥಗಳಲ್ಲಿ ಪ್ರಸಿದ್ಧವಾಗಿದೆ. ಆದರೆ ಅವರು ಹಾಗೆ ತಪ್ಪಿಸಿಕೊಂಡು ಹೊರಟು ಹೋದುದು ಶತ್ರುವರ್ಗದವರಿಗೆ ಸಹನೆಯಾಗಲಿಲ್ಲ ಒಡನೆ ಅವರನ್ನೆಲ್ಲ ತಮಗೆ ಒಪ್ಪಿಸಿಬಿಡಬೇಕೆಂದು ಅಬಿಸೀನಿಯದ ರಾಜನಲ್ಲಿ ಹೇಳಿಕೊಳ್ಳಲಿಕ್ಕಾಗಿ ತಮ್ಮ ಕಡೆಯ ಜನಗಳನ್ನು ಕಳುಹಿಸಿದರು ಅವರ ಮನವಿಯನ್ನು ಕೇಳಿದ ಆ ರಾಜನು, ಹಾಗೆ ಬಂದ ಜನಗಳನ್ನು ಕರೆಸಿ ವಿಚಾರಿಸಲು, ಅವರಲ್ಲಿ ಅಬು ತಾಲಿಬನ ಮಗನಾದ ಜಾಫರ್ ಎಂಬಾತನು-'ದೊರೆಯೇ ನಾವು ಅಜ್ಞಾನಾಂಧಕಾರದಲ್ಲಿ ಮುಳುಗಿ ಪಶುಸ್ವರೂಪರಾಗಿದ್ದಾಗ, ಅರ್ಥವಿಲ್ಲದ ಭಯಂಕರ ವಿಗ್ರಹ ಪೂಜೆಯಲ್ಲಿ ತೊಡಗಿದ್ದಾಗ, ಜೂಜು ಕಳ್ಳತನ ವ್ಯಭಿಚಾರ ಸುಳ್ಳು ಮೋಸ ಮುಂತಾದ ಅನಷ್ಟ ವಿಚಾರಗಳಲ್ಲಿ ಮುಳುಗಿದ್ದಾಗ, ಸತ್ತ ಪ್ರಾಣಿಗಳ ದೇಹಗಳನ್ನೂ ಹೇಸದೆ ತಿನ್ನುತಿದ್ದಾಗ, ನಮ್ಮಲ್ಲಿ ಸತ್ಯ ನ್ಯಾಯ ಪರೋಪಕಾರ ಭೂತದಯೆ ಭ್ರಾತೃಪ್ರೇಮ ಮುಂತಾದುವು ಇಣಿಕಿ ನೋಡಲೂ ಅವಕಾಶವಿಲ್ಲದಿದ್ದಾಗ ಆ ಮಹಾನುಭಾವನು ಉದ್ಭವಿಸಿ ಆ ದುರ್ಗುಣ ದುಷ್ಟ

ಪದ್ಧತಿಗಳನ್ನು ಹೋಗಲಾಡಿಸಿ, ಸದ್ಗುಣಗಳ ಬೀಜಗಳನ್ನು ಬಿತ್ತಿದರು ಇದಕ್ಕಾಗಿ ಆ ಪೂರ್ವಾಚಾರ ಪರಾಯಣರು ವಿರೋಧಿಸುತ್ತಿದ್ದಾರೆ. ನೀನು ದಯಾಳುವೆಂದು ತಿಳಿದು ಇಲ್ಲಿಗೆ ಬಂದಿದ್ದೇವೆ ನಮ್ಮನ್ನು ಕಾಪಾಡು” ಎಂದು ತಮ್ಮ ಜನಗಳ ಪರವಾಗಿ ಭಾಷಣಮಾಡಿದನು. ಅದರ ಸತ್ಪರಿಣಾಮವು ರಾಜನ ಮನಸ್ಸನ್ನು ವಶಪಡಿಸಿಕೊಂಡಿತು ಕೊರೆಯಿಷ್ ಪಂಗಡದವರು ಕಳುಹಿಸಿದ್ದ ರಾಯಭಾರಿಯನ್ನೂ ಆತನು ತಂದಿದ್ದ ಬಹು ಬೆಲೆಯ ಕಾಣಿಕೆಯನ್ನೂ ಹಿಂದಕ್ಕೆ ಕಳುಹಿಸಿ, ಇಸ್ಲಾಂ ಮತಸ್ಥರಿಗೆ ಆಶ್ರಯ ಕೊಡುವ ವಿಷಯದಲ್ಲಿ ಬದ್ಧಕಂಕಣನಾದನು.

ಕೊರಯಿಷ್ ಪಂಗಡದವರಿಗೆ ಅಬಿಸೀನಿಯಾದಲ್ಲಾದ ಅಪಜಯವು ಮಕ್ಕಾದಲ್ಲಿ ಉಳಿದಿದ್ದ ಇಸ್ಲಾಂ ಪಂಗಡದವರಿಗೆ ಇನ್ನೂ ಹೆಚ್ಚಾದ ಹಿಂಸೆಯುಂಟಾಗಲು ಕಾರಣವಾಯಿತು ಪೈಗಂಬರರಿಗೇ ಪ್ರಾಣಾಪಾಯವನ್ನುಂಟುಮಾಡಲು ಅವರು ಯೋಚಿಸಿದರು. ಆ ವಾರ್ತೆಯನ್ನು ಕೇಳಿ ಹಂಜಾ ಎಂಬೊಬ್ಬ ವೀರನು ಮುಂದೆ ಬಂದು, ಮಹಮ್ಮದರ ಭಕ್ತನಾಗಿ ಅವರ ಸೇವೆಯಲ್ಲಿ ತನ್ನ ದೇಹವನ್ನು ಸವೆಯಿಸಲು ಸಿದ್ಧನಾದನು.

ಹೀಗೆ ತಮ್ಮ ಪ್ರಯತ್ನಗಳೆಲ್ಲ ನಿಷ್ಫಲವಾಗುತ್ತ ತಮ್ಮ ವೈರಿಯ ಪಕ್ಷವು ಕ್ರಮಕ್ರಮವಾಗಿ ಬಲಗೊಳ್ಳುತ್ತಿದ್ದುದನ್ನು ಕಂಡು ಆ ಜನರು ಮುಂದ ಮಾರ್ಗಕಾಣದೆ, ಉಪಾಯದಿಂದ ಕಾರ್ಯಸಾಧನೆ ಮಾಡಬೇಕೆಂದು ಬಗೆದು, ಮಹಮ್ಮದರ ಬಳಿಗೆ ತಮ್ಮ ಮುಖ್ಯಸ್ಥರನ್ನು ಕಳುಹಿಸಿದರು. ಅವರು ಬಂದು-“ಎಲೈ ಬಂಧುವೇ ನೀನು ನಿನ್ನ ಸ್ವಜನಗಳಲ್ಲೇ ಹಟತೊಟ್ಟು ಏಕೆ ಭೇದಭಾವಗಳನ್ನು ಹರಡುತ್ತಿರುವೆ? ನಮ್ಮ ದೇವರುಗಳನ್ನು ಏಕೆ ದ್ವೇಷಿಸುತ್ತಿರುವೆ? ನಿನಗೆ ಆಸ್ತಿ ಐಶ್ವರ್ಯಗಳನ್ನು ಗಳಿಸಬೇಕೆಂಬ ಅಪೇಕ್ಷೆಯಿದ್ದರೆ ಹೇಳು. ನಿನ್ನನ್ನು ಈ ನಮ್ಮ ಕೊರೆಯಿಷ್ ಪಂಗಡದಲ್ಲೇ ಅತ್ಯಧಿಕ ಧನವಂತನನ್ನಾಗಿ ಮಾಡುತ್ತೇವೆ. ಘನತೆ ಗೌರವಗಳ ಅಪೇಕ್ಷೆಯಿದ್ದರೆ ಹೇಳು, ನಮ್ಮ ಪಂಗಡಕ್ಕೆಲ್ಲಾ ನಿನ್ನನ್ನೇ ಮುಖ್ಯಸ್ಥನನ್ನಾಗಿ ಮಾಡಿ, ಎಲ್ಲರೂ ನಿನ್ನ ಮಾತಿನಂತೆಯೇ ನಡೆಯುತ್ತೇವೆ ಅಲ್ಲದೆ, ನಿನಗೇನಾದರೂ ಭೂತಪಿಶಾಚಗಳ ಆವೇಶವಾಗಿದ್ದರೆ ಹೇಳು. ಉತ್ತಮೋತ್ತಮ ಮಂತ್ರವಾದಿಗಳನ್ನು ಕರೆಸಿ, ನಿನಗೆ ಗುಣವಾಗುವವರೆಗೆ ನಮ್ಮ ಹಣ

ವನ್ನು ಧಾರಾಳವಾಗಿ ವ್ಯಯಿಸುತ್ತೇವೆ' ಎಂದರು. ಅದನ್ನು ಕೇಳಿದ ಪೈಗಂಬರರು ಹುಸಿನಗೆ ನಗುತ್ತಾ,-'ಮಿತ್ರರೇ ನಿಮ್ಮ ಧನಕನಕಗಳಿಗಾಗಿಯೂ ಪದವಿಗೌರವಗಳಿಗಾಗಿಯೂ ನಾನು ಆಸಪಟ್ಟವನಲ್ಲ. ನನಗೆ ಭೂತಪಿಶಾಚಗಳೂ ಹಿಡಿದಿಲ್ಲ. ದಯಾಪೂರ್ಣನೂ ಪ್ರೇಮಸ್ವರೂಪಿಯೂ ಆದ ಆ ಸರ್ವೇಶ್ವರನ ದಯೆಯಿಂದ ನನಗೆ ವ್ಯಕ್ತವಾದ ಆ ದೈವಸಂದೇಶವನ್ನು ನಿಮಗೆ ತಿಳಿಸಲು ಬಂದಿದ್ದೇನಲ್ಲದೆ ಬೇರಲ್ಲ! ನಾನು ನಿಮ್ಮವನೇ ಅಲ್ಲದೆ ಬೇರೆಯವನಲ್ಲ. ಕೇಳಿ, ಯಾರು ಲೋಕೇಶ್ವರನಾದ ಆ ಒಬ್ಬನನ್ನಲ್ಲದೆ ಇತರ ದೇವತೆಗಳನ್ನು ಪೂಜಿಸುತ್ತಾರೋ, ಯಾರು ದಾನಮಾಡುವುದಿಲ್ಲವೋ ಯಾರು ಪರಗತಿಯನ್ನು ನಂಬುವುದಿಲ್ಲವೋ ಅವರಿಗೆ ದೇವರ ಶಾಪವಿರುವುದೆಂಬುದನ್ನು ಮರೆಯಬೇಡಿರಿ. ಆದರೆ ಯಾರು ಸತ್ಯವಸ್ತುವಿನಲ್ಲಿ ನಂಬಿಕೆಯನ್ನೂ ಭಕ್ತಿ ಶ್ರದ್ಧೆ ವಿಶ್ವಾಸಗಳನ್ನೂ ಇಟ್ಟು, ಸತ್ಕಾರ್ಯಗಳಲ್ಲಿ ತೊಡಗುತ್ತಾರೋ ಅವರಿಗೆ ಭಗವಂತನ ಆಶೀರ್ವಾದವಿರುವುದೆಂಬುದನ್ನೂ ಮರೆಯದಿರಿ' ಎಂದು ಪ್ರತ್ಯುತ್ತರ ಕೊಟ್ಟರು.

ಈ ಭಾಷಣವನ್ನು ಕೇಳಿ ಅವರು ಹತಾಶರಾದರು ಆಶೋತ್ತರಗಳನ್ನು ತೋರಿಸಿ ಅವರನ್ನು ಗೆಲ್ಲುವುದು ಸಾಧ್ಯವಲ್ಲವೆಂದು ಮನಗಂಡರು. ಪುನಃ ಅವರನ್ನು ಕುರಿತು-'ಎಲೈ ನೀನು ಸರ್ವೋತ್ತಮನಾದ ದೇವರಿಂದ ಅನುಗೃಹೀತನಾದ ಪ್ರಸಾದಿಯೆಂದು ಹೇಳಿಕೊಳ್ಳುವೆಯಲ್ಲವೆ? ಎಲ್ಲಿ ಅದನ್ನು ಸೃಢಪಡಿಸುವುದಕ್ಕೆ ಏನಾದರೊಂದು ಚಮತ್ಕಾರವನ್ನು ತೋರಿಸು. ಭೂಮಿಯಿಂದ ತಿಳಿನೀರಿನ ಚಿಲುಮೆಯು ಏಳುವಂತೆ ಮಾಡು. ಉತ್ತಮವಾದ ತೆಂಗಿನಮರ ಮತ್ತು ದ್ರಾಕ್ಷೆಯ ಬಳ್ಳಿಗಳಿಂದ ಮನೋಹರವಾದ ಒಂದು ತೋಟವನ್ನು ಸೃಷ್ಟಿಸು. ಈ ಮರಳುಗಾಡಿನ ಮಧ್ಯೆ ದಿವ್ಯಜಲಪೂರ್ಣವಾದ ಒಂದು ನದಿಯು ಹರಿಯುವಂತೆ ಮಾಡು. ಹಾಗೂ ಇಲ್ಲದಿದ್ದರೆ, ದೇವದೇವತೆಗಳು ನಮ್ಮ ಕಣ್ಣುಗಳಿಗೆ ಗೋಚರವಾಗುವಂತೆ ಬರಗೊಳಿಸು. ನೀನು ನಮ್ಮ ಕಣ್ಣೆದುರಿಗೆ ಹೇಗೆಯೋ ಅಂತರಿಕ್ಷಕ್ಕೆ ಏರಿಹೋಗು, ನೋಡೋಣ. ಅಥವ ಅಂತರಿಕ್ಷವೇ ನಮ್ಮ ಮೇಲೆ ಕೆಡಹಿಬೀಳುವಂತೆ ಮಾಡು. ಇಂತಹ ಅಮಾನುಷಕೃತ್ಯಗಳಲ್ಲೊಂದನ್ನೂ ನೀನು ಮಾಡದಿದ್ದರೆ, ನಿನ್ನ ಮಾತಿನಲ್ಲಿ ನಾವು ಹೇಗೆ ನಂಬಿಕೆ ಇಡೋಣ ?' ಎಂದರು.

ಆ ಮಾತನ್ನು ಕೇಳಿದ ಪೈಗಂಬರರು- 'ಮಿತ್ರರೆ, ಭಗವಂತನ ನಾಮವು ಸರ್ವೋತ್ಕೃಷ್ಟವಾಗಿರಲಿ. ನಾನೂ ನಿಮ್ಮಂತೆಯೇ ಕೇವಲ ಮನುಷ್ಯ ಮಾತ್ರನೇ ಅಲ್ಲದೆ ಹೆಚ್ಚೇನೂ ಅಲ್ಲ. ಆದರೆ ನಿಮ್ಮಗಳ ಆತ್ಮೋದ್ಧಾರ ಕ್ಕಾಗಿ ಭಗವತ್ಸಂದೇಶವನ್ನು ತಂದ ಪೈಗಂಬರನಾಗಿದ್ದೇನೆ ಮಾತ್ರ. ಸರ್ವ ಶಕ್ತನಾದ ಭಗವಂತನಿಂದ ಮಾಡಲು ಸಾಧ್ಯವಾದ ಆ ಕೃತ್ಯಗಳನ್ನೆಲ್ಲಾ ನಾನು ಹೇಗೆ ಮಾಡಬಲ್ಲೆನು ?" ಎಂದರು. ತಮ್ಮ ಮಾತುಗಳಿಗೆ ತಡೆಬಗೆ ಯಿಲ್ಲದೆ, ಪ್ರತ್ಯುತ್ತರ ಕೊಡುತ್ತಾ ಹಸನ್ಮುಖದಿಂದ ಇದ್ದ ಆ ಪೈಗಂಬರ ರನ್ನು ಕಂಡು ಅವರ ಕೋಪವು ಮಿತಿಮೀರಿಹೋಯಿತು.—'ಇವನೆಂತಹ ಪೈಗಂಬರನು ! ಎಲ್ಲರಂತೆಯೇ ಊಟಮಾಡುತ್ತಾನೆ, ನಿದ್ರೆ ಮಾಡುತ್ತಾನೆ. ಎಲ್ಲರಂತೆ ನಡೆದಾಡುತ್ತಾನೆ. ಇವನೆಂತಹ ದೇವದೂತನು' ಎಂದು ನಿಂದಿ ಸಿದರು. ಆದರೇನು, ಮಹಮ್ಮದರು ಕೋಪಗೊಳ್ಳದೆ-'ಆಯ್ಯಾ ಮಿತ್ರರೇ, ನಾನು ಮನುಷ್ಯನಲ್ಲವೆಂದು ಹೇಳಿದವರಾರು ? ನಿಮ್ಮಂತೆಯೇ ಮನುಷ್ಯ ನಾದ ನನ್ನ ವಿಚಾರವನ್ನು ಬಿಡಿ. ದೇವರ ವಿಚಿತ್ರ ಶಕ್ತಿಯನ್ನು ನೋಡಿ. ಆತನು ಭೂಮಿಯಲ್ಲೂ ಅಂತರಿಕ್ಷದಲ್ಲೂ ಎಂತಂತಹ ಆಶ್ಚರ್ಯಕರವಾದ ವಸ್ತುಗಳನ್ನು ಸೃಷ್ಟಿಸಿದ್ದಾನೆಂಬುದನ್ನು ಕಣ್ತೆರದು ನೋಡಿರಿ. ಸುಮನೋ ಹರವಾದ ತಂಗಾಳಿಯನ್ನೂ, ಪ್ರಾಣಾಧಾರಕವಾದ ನೀರನ್ನೂ, ಇತರ ಅನಂತ ವಸ್ತುಸಮುದಾಯವನ್ನೂ ನಿರ್ಮಿಸಿಲ್ಲವೆ ? ನಿಮಗಾಗಿ ಪತ್ನೀ ಪುತ್ರರನ್ನೂ-ಅವರನ್ನೂ ನಿಮ್ಮನ್ನೂ ಸಂಬಂಧಿಸುವ ಪವಿತ್ರಪ್ರೇಮ ವನ್ನೂ ಉಂಟುಮಾಡಿದವರು ಯಾರಂಬಿರಿ ! ಅಂತರಿಕ್ಷದಲ್ಲಿ ಕಾಣುವ ಸೂರ್ಯಚಂದ್ರ ನಕ್ಷತ್ರಾದಿಗಳನ್ನೂ, ಭೂಮಿಯಲ್ಲಿರುವ ಅಗಾಧ ವಸ್ತು ಸಮುದಾಯವನ್ನೂ ಸೃಷ್ಟಿಸಿದ ಮಹಾಪ್ರಭು ಯಾರಂಬಿರಿ ? ಆ ದಯಾ ಮಯನನ್ನು ಏಕೆ ನಂಬಲಾರಿರಿ ?" ಎಂದು ಪುನಃ ಬೋಧಿಸಿದರು.

ಆದರ ಇದರಿಂದ ಅವರ ದುರ್ಭಾವನೆಯು ಹೋಗಲಿಲ್ಲ. ಕೋಪವು ಶಮನವಾಗಲಿಲ್ಲ--'ನೀನಾಗಲೀ ನಾವಾಗಲಿ ನಾಶವಾಗುವವರೆಗೆ ನಿನ್ನ ಬೋಧನೆಗೆ ಪ್ರತಿಬಂಧಕವನ್ನುಂಟುಮಾಡುವುದನ್ನು ಬಿಡಲಾರೆವು' ಎಂದು ನುಡಿದು, ಎಲ್ಲರೂ ಪೈಗಂಬರರ ಚಿಕ್ಕಪ್ಪನಾದ ಅಬುತಾಲಿಬ್ಬನ ಬಳಿಗೆ ಹೋಗಿ-'ನಿನ್ನ ಈ ಮಹಮ್ಮದನ ಹಾವಳಿಯನ್ನು ನೀನು ನಿಲ್ಲಿಸದಿದ್ದರೆ,

ಅವನನ್ನು ತಡೆಯಲು ನಮ್ಮ ಪ್ರಾಣಾಂತ್ಯದವರಗೂ ಹೋರಾಡುವೆವು' ಎಂದರು. ಅದನ್ನು ಕೇಳಿದ ಆ ಮುದುಕನು ಮುಹಮ್ಮದರ ಬಳಿಗೆ ಬಂದು ಅವರಿಗೆ ವಿರೋಧವಾಗಿ ಹೋಗದಿರೆಂದು ಎಷ್ಟೋ ಬಗೆಯಿಂದ ಹೇಳಿ ನೋಡಿದನು ಆಗಲವರು–'ನನ್ನ ಪ್ರಾಣವನ್ನು ತೆಗೆವ ಸ್ವಾತಂತ್ರ್ಯವು ಇವರ ಕೈಯಲ್ಲಿಲ್ಲ. ಬಣಬೆದರಿಕೆಯೇಕೆ ? ನನ್ನನ್ನು ಮೋಹಗೊಳಿಸಬೇಕೆಂದು ಅವರು ನನ್ನ ಬಲಗೈಯಮೇಲೆ ಸೂರ್ಯನನ್ನೂ ಎಡಗೈಯಮೇಲೆ ಚಂದ್ರನನ್ನೂ ತಂದಿಡಲಿ! ಭಗವಾನನ ಅಪ್ಪಣೆಯಾಗಿರುವಾಗ ನಾನು ಏಕ ಬೆದರಲಿ? ನಾನು ನಂಬಿರುವ ಸತ್ಯಮಾರ್ಗವನ್ನು ಬಿಟ್ಟು ಹಿಂದಿರುಗಲಾರನು' ಎಂದು ನುಡಿದುಬಿಟ್ಟರು. ಇಸ್ಲಾಮಿನ ಧರ್ಮವನ್ನು ಅವಲಂಬಿಸಿದವನಲ್ಲ ದಿದ್ದರೂ ಆ ಮುದುಕನು ತನ್ನಾ ಭ್ರಾತ್ರೀಯನ ಶ್ರದ್ಧಾಭಕ್ತಿಗಳನ್ನು ಕಂಡು ಪರಮಸಂತುಷ್ಟನಾಗಿ, ಅವರಿಗೆ ಏನೊಂದಪಾಯವೂ ತಟ್ಟದಂತೆ ಕಾಪಾಡುವುದಾಗಿ ಪುನಃ ವಾಗ್ದಾನ ಮಾಡಿದನು.

ಮುಂದೊಂದು ದಿನ ಉಮರ್ ಎಂಬೊಬ್ಬ ಸ್ವಾರ್ಥಚಾರವರಾಯಣನು, ಪೈಗಂಬರರನ್ನು ತೀರಿಸಿಬಿಡಬೇಕೆಂದು ಹೊರಟನು ಅಷ್ಟರಲ್ಲ ಇಸ್ಲಾಂ ಮತವನ್ನು ಅವಲಂಬಿಸಿದ್ದ ತನ್ನ ಅಕ್ಕ ಮತ್ತು ಭಾವಂದಿರನ್ನೂ ಧರ್ಮಾಂಧತೆಯಿಂದ ಕೊಂದುಬಿಡಬೇಕೆನ್ನಿಸಿತು. ಅದಕ್ಕಾಗಿ ಪ್ರಯತ್ನಿಸುತ್ತಿದ್ದಾಗ, ಅಕಸ್ಮಾತ್ತಾಗಿ ಪಕ್ಕದಲ್ಲಿದ್ದ ಖುರಾನ್ ಗ್ರಂಥದ ವಾಕ್ಯವೊಂದು ದೃಷ್ಟಿಗೋಚರವಾಗಲು, ಒಡನೆ ಜ್ಞಾನ ಬಂದಂತಾಗಿ ಅಲ್ಲಿಂದ ಹೊರಟು ಪೈಗಂಬರರಿದ್ದ ಮನೆಗೆ ನಡದು, ತನ್ನ ಅಪರಾಧವನ್ನು ಕ್ಷಮಿಸಬೇಕಂದು ಬೇಡಿಕೊಂಡು ಅವರ ಶಿಷ್ಯತ್ವವನ್ನು ಅಂಗೀಕರಿಸಿದನು ಅಲ್ಲದೆ ಅವರ ಅಂಗ ರಕ್ಷಕ ಭಟರಲ್ಲಿ ಹಂಚಾನೊಂದಿಗೆ ಈತನೂ ಇದ್ದು ಶತ್ರುಗಳಿಂದ ಅವರ ದೇಹಕ್ಕೆ ಅಪಾಯವುಂಟಾಗದಂತೆ ಪೈಗಂಬರರನ್ನು ಕಾದುಕೊಂಡಿದ್ದರು.

ಈಮಧ್ಯೆ ಶತ್ರುಗಳಿಂದ ಒದಗಿದ ತೊಂದರೆಗಳು ಒಂದೆರಡಲ್ಲ. ಅಬುತಾಲಿಬ್‌ನು ತನ್ನ ಮರಣಾಂತ್ಯದವರೆಗೂ ತನ್ನ ಪ್ರತಾಪದಿಂದ ಅವರನ್ನು ಸುರಕ್ಷಿತವಾಗಿ ಕಾಪಾಡಿ, ವೃದ್ಧಾಪ್ಯದಿಂದ ಕಾಲಗತಿಯನ್ನು ಹೊಂದಿದನು. ಅವರ ಧರ್ಮವನ್ನು ಒಪ್ಪಿಕೊಳ್ಳದಿದ್ದರೂ, ಅವರನ್ನು ರಕ್ಷಿಸುತ್ತಿದ್ದ ಅಬುತಾಲಿಬನ ಸದ್ಗುಣವನ್ನು ಆಂಗ್ಲೇಯಚರಿತ್ರಕಾರನಾದ

ಮ್ಯೂ ಇರ್ ಸಾಹೇಬನು ಅಭಿನಂದಿಸುತ್ತಾನೆ. ಅಬುತಾಲಿಬನು ಮೃತನಾದ ಮೂರನೆಯ ದಿನವೇ ಮುಹಮ್ಮದರ ಪ್ರಿಯಪತ್ನಿಯಾದ ಖಾದೀಜಾಬೀಯು ಮೃತಳಾದಳು. ಇದು ಆ ಸಾಧುಹೃದಯರಿಗೆ ಅತಿಶಯ ಚಿಂತೆಯನ್ನುಂಟು ಮಾಡಿತು. 'ಅಕಟಾ ಆಕೆಗೆ ಸಮಾನಳಾದ ಜೊತೆಗಾರಳೊಬ್ಬಳು ಸಿಕ್ಕುವುದು ದುರ್ಲಭ! ನಾನು ಬಡವನಾಗಿದ್ದಾಗ ನನ್ನನ್ನು ಧನವಂತನೆನ್ನಿಸಿದಳು. ನಾನು ಸುಳ್ಳುಗಾರನೆಂದು ಎಲ್ಲರಿಂದಲೂ ಬಹಿಷ್ಕರಿಸಲ್ಪಟ್ಟಾಗ ಅವಳು ನನ್ನನ್ನು ನಂಬಿ ಅನುಸರಿಸಿದಳು. ಎಲ್ಲರೂ ನನ್ನನ್ನು ಕೈಬಿಟ್ಟಾಗ ನನ್ನ ಬಳಿಯಲ್ಲಿದ್ದು ಆರೈಕೆಮಾಡಿದಳು' ಎಂದು ಆಕೆಯ ಸದ್ಗುಣವನ್ನು ಮುಂದೆ ಬಹುಕಾಲದವರೆಗೂ ಅವರು ಜ್ಞಾಪಿಸಿಕೊಳ್ಳುತ್ತಿದ್ದರು. ಖಾದೀಜಾಳ ತರುವಾಯ ಪೈಗಂಬರರು ಬೇರೆಬೇರೆ ಕಾಲಗಳಲ್ಲಿ ಆಯೇಷಾ, ಸೌಡಾ, ಹಿಂಡ್ ಮುಂತಾದ ಹಲವು ಮಂದಿ ಸ್ತ್ರೀಯರನ್ನು ಮದುವೆಯಾದರೆಂದು ಅವರ ಚರಿತ್ರೆಯು ಹೇಳುತ್ತದೆ ಆದರೆ ಅವರ ಎಲ್ಲಾ ಪತ್ನಿಯರಲ್ಲೂ ಖಾದೀಜಾಳೇ ಅಗ್ರಗಣ್ಯಳು.

ಅಬುತಾಲಿಬನ ಮರಣಾನಂತರ ಮಕ್ಕಾದಲ್ಲಿ ಅವರ ಪ್ರಾಣಕ್ಕೆ ಅನೇಕ ಆಪತ್ತುಗಳು ಒದಗಿದುವು—ಆದುದರಿಂದ ಟಾಯಿಫ್ ಎಂಬ ಊರಿಗೆ ಹೋಗಿ ಅಲ್ಲಿ ರಕ್ಷಣೆ ಹೊಂದಬಹುದೆಂದು ಯೋಚಿಸಿದರು ಅದು ಸಾರ್ಥಕವಾಗಲಿಲ್ಲ. ತರುವಾಯ ಬಹು ದಿನಗಳಮೇಲೆ ಎತ್ರಿಬ್ ಊರಿನಿಂದ ಯಾತ್ರೆಗಾಗಿ ಬಂದಿದ್ದವರಲ್ಲಿ ಕೆಲವರು, ಅವರ ಬೋಧನೆಗಳನ್ನು ಕೇಳಿ, ತಮ್ಮ ಊರಿನಲ್ಲೂ ಅದನ್ನು ಹಬ್ಬಿಸಿದರು. ಬಹು ಸ್ವಲ್ಪಕಾಲದಲ್ಲೇ ಪೈಗಂಬರರ ಕೀರ್ತಿಯು ಆ ಪ್ರಾಂತದಲ್ಲೆಲ್ಲ ಅನೇಕಮಂದಿ ಭಕ್ತರನ್ನು ಗಳಿಸಿತು. ಅವರಲ್ಲಿ ಅನೇಕಮಂದಿ ಅವರ ದರ್ಶನಕ್ಕಾಗಿ ಮಕ್ಕಾಕ್ಕೆ ಬಂದರು. ಅವರೆಲ್ಲರಿಗೂ ಪೈಗಂಬರರು ಅಕಾಬಾ ಗುಡ್ಡದಮೇಲೆ ಬೋಧಿಸಿದರು. ಅವರ ಬೋಧನೆಯಿಂದ ಸಂತುಷ್ಟರಾದ ಆ ಜನರು ತಮ್ಮೊಂದಿಗೆ, ಬರಬೇಕೆಂದು ಅವರನ್ನು ಆಹ್ವಾನಿಸಿದರು. ಹೊರಡಲು ಪೈಗಂಬರರೂ ಒಪ್ಪಿದರು. ಆದರೆ ಈ ಮಧ್ಯೆ ಕೊರೈಷಿ ಪಂಗಡದವರು ತಂದಿಟ್ಟ ವಿಘ್ನಗಳಿಂದ ಎತ್ರಿಬ್ ಜನಗಳು ತಮ್ಮ ಗುರುವನ್ನು ಜೊತೆಗೆ ಕರೆದೊಯ್ಯಲು ಸಾಧ್ಯವಾಗಲಿಲ್ಲ.

ಆದರೆ ಇತ್ತ ಊರಲ್ಲಿ ನಿಂತ ಮುಹಮ್ಮದರಿಗೆ ಕ್ಷಣಕ್ಷಣಕ್ಕೂ ಪ್ರಾಣಾಪಾಯವು ಒದಗುತ್ತಿತ್ತು. ಕೊರೆಯ್ಷಿ ಪಂಗಡದವರು ಇನ್ನು ಅವರನ್ನು ಬದುಕಲೀಯಬಾರದೆಂದು, ಸಂಕಲ್ಪ ಮಾಡಿಕೊಂಡು, ಮನೆಗೊಬ್ಬರಂತೆ ಹೊರಟು ಕತ್ತಿಯಿಂದ ಇರಿದು ಕೊಂದುಬಿಡಬೇಕೆಂದು ಒಪ್ಪಂದಮಾಡಿಕೊಂಡರು. ಹಿಂದಿನೊಂದು ರಾತ್ರಿ ಹತ್ತಿಪ್ಪತ್ತು ಮಂದಿ ಯುವಕರು ಕತ್ತಿಗಳನ್ನು ಹಿಡಿದು, ಅವರ ಮನೆಯಸುತ್ತಲೂ ಕಾದಿದ್ದು, ಅವರು ಹೊರಕ್ಕೆ ಬಂದೊಡನೆಯೇ ತೀರಿಸಿಬಿಡಬೇಕೆಂದು ಹೊಂಚಿಕೊಂಡಿದ್ದರು. ಈ ಸುಳಿವನ್ನು ಹೇಗೋ ತಿಳಿದು ಪೈಗಂಬರರು, ತಮ್ಮ ಶಿಷ್ಯನೊಬ್ಬನಿಗೆ ಒಂದು ಯುಕ್ತಿ ಹೇಳಿಕೊಟ್ಟು, ತಮ್ಮ ಹಾಸಿಗೆಯಲ್ಲಿ ಮಲಗಿಸಿ, ತಾವು ಆ ಮನೆಯಿಂದ ಪಾರಾಗಿ, ತಮ್ಮ ಶಿಷ್ಯನ ಸಹಾಯದಿಂದ ಹತ್ತಿರದಲ್ಲಿದ್ದ ಥಾರ್ ಎಂಬ ಗುಡ್ಡಕ್ಕೆ ಓಡಿಹೋಗಿ ಗವಿಯಲ್ಲಿ ಅಡಗಿಕೊಂಡರು. ತಮ್ಮ ಬೇಟೆಯು ತಪ್ಪಿಸಿಕೊಂಡುಹೋದ ವಿಚಾರವನ್ನು ತಿಳಿದು ಕೊರೆಯ್ಷಿ ಜನರು ಹತಾಶರಾದರೂ-'ಯಾರಾದರೂ ಮುಹಮ್ಮದರನ್ನು ಹಿಡಿದುಕೊಟ್ಟರೆ, ಅಂಥವರಿಗೆ ನೂರು ಒಂಟೆಗಳನ್ನು ಬಹುಮಾನವಾಗಿ ಕೊಡುತ್ತೇವೆ'ಂದು ಪ್ರಕಟಿಸಿದರು. ಇತ್ತ ಮುಹಮ್ಮದರು, ತಮ್ಮ ಶಿಷ್ಯರೊಂದಿಗೆ ಎತ್ರಿಬ್ ಎಂಬ ಊರಿನ ಕಡೆಗೆ ನಡೆದರು. ಮಾರ್ಗಮಧ್ಯದಲ್ಲಿ ಅಬೂಬಕರ್ ಮತ್ತು ಪೈಗಂಬರರ ಕುಟುಂಬದವರು, ಬಂದು ಅವರೊಂದಿಗೆ ಕೂಡಿಕೊಂಡರು. ನಂಬಿಕೆಯ ಶಿಷ್ಯನೂ ಸೇವಕನೂ ಆದ ಆಲಿ ಎಂಬಾತನೂ ಬಂದು ಸೇರಿದನು. ಎಲ್ಲರೂ ಕ್ರಿ ಶ. ೬೨೨ನೆಯ ಜೂಲೈ ೨ನೆಯ ಶುಕ್ರವಾರದ ದಿನ ಪ್ರಾತಃಕಾಲ ಎತ್ರಿಬ್ ಊರನ್ನು ಪ್ರವೇಶಿಸಿದರು. ಆ ಊರಿನವರು ಮುಹಮ್ಮದರನ್ನು ಬಹು ಭಕ್ತಿ ಗೌರವಗಳಿಂದ ಎದುರುಗೊಂಡರು. ಇದು ಹಿಜ್ರಾತ್ ಅಥವ ಹಿಜೆರಾ ಎಂದು 'ಪಲಾಯನ' ಎಂದು ಪ್ರಸಿದ್ಧವಾಗಿದೆ. ಇದು ನಡೆದ ಈ ಸಮಯದಿಂದಲೇ ಮುಹಮ್ಮದೀಯರು ತಮ್ಮ ಶಕವನ್ನು ಆರಂಭಿಸುತ್ತಾರೆ. ಈ ಎತ್ರಿಬ್ ಪಟ್ಟಣದಲ್ಲಿ ಕೆಲದಿನಗಳು ವಾಸ ಮಾಡಿದ ತರುವಾಯ ಮುಹಮ್ಮದರು ಪರಿವಾರದೊಂದಿಗೆ ಮದೀನಾಪಟ್ಟಣಕ್ಕೆ ಪ್ರಯಾಣಮಾಡಿದರು.

## ಅಧ್ಯಾಯ ೪ "ಭೌತಿಕ ಕಳೇಬರ ತ್ಯಾಗ"

ಹಜರತ್ ಮುಹಮ್ಮದ್ ಪೈಗಂಬರರು ಮದೀನಾಪಟ್ಟಣದಲ್ಲಿ ತಮ್ಮ ಮತ್ತು ತಮ್ಮ ಶಿಷ್ಯರ ಪ್ರಾರ್ಥನೆಗಾಗಿ ಒಂದು ಮಸೀದಿಯನ್ನು ಕಟ್ಟಿದರು. ಪ್ರಪಂಚದಲ್ಲ ಅದೇ ಮುಹಮ್ಮದೀಯರ ಪ್ರಥಮ ಪ್ರಾರ್ಥನಾಮಂದಿರವು. ಅಲ್ಲ ಪೈಗಂಬರರು, ಪ್ರಾರಂಭಕ್ಕೆ ಕೆಳಗೆ ನಿಂತು ಬೋಧನೆಮಾಡುತ್ತಿದ್ದರು. ಕೆಲವುದಿನಗಳಾದಮೇಲೆ ಅವರಿಗಾಗಿ, ಒಂದು ಉಚ್ಚ ಪೀಠವನ್ನು ಸಿದ್ಧಗೊಳಿಸಿದನಂತರ ಅದರಮೇಲೆ ಕುಳಿತು ಬೋಧಿಸುತ್ತಿದ್ದರು.

ವಿಶ್ವಪ್ರೇಮ-ಭ್ರಾತೃಭಾವಗಳನ್ನು ಕುರಿತು ಅವರು ಅನೇಕ ಸಂಗತಿಗಳನ್ನು ಬೋಧಿಸಿದರು. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತೇವೆ.

"ದೇವರನ್ನು ಹೇಗೆ ತಿಳಿಯಬಹುದೆಂದೂ ಆತನನ್ನು ಸೇವಿಸುವ ಮಾರ್ಗವಾವುದೆಂದೂ ಚಿಂತಿಸಬೇಡ. ಆತನ ಸೇವಕರಲ್ಲಿ (ಭಕ್ತರಲ್ಲಿ) ಯಾರಾದರೂ ರೋಗದಿಂದ ವ್ಯಥೆ ಪಡುತ್ತಿದ್ದರ ಅವರನ್ನು ಉಪಚರಿಸು. ಅದು ದೇವರನ್ನು ಉಪಚರಿಸಿದಂತೆಯೇ ಆಗುವುದು."

"ಸರ್ವೇಶ್ವರನಾದ ದೇವರಿಗೆ ಆಹಾರ ಸಮರ್ಪಿಸುವುದು ಹೇಗೆಂದು ಯೋಚಿಸಬೇಡ. ಆಹಾರಕೊಡೆಂದು ನಿನ್ನನ್ನು ಪ್ರಾರ್ಥಿಸುವ ಭಗವಂತನ ಮಕ್ಕಳೇ ಆದ ಮನುಷ್ಯರಲ್ಲಿ ಹಸಿದ ಯಾವನೊಬ್ಬನಿಗಾದರೂ ಅನ್ನನೀರನ್ನು ಕೊಡು. ಅದು ಭಗವಂತನಿಗೆ ಆಹಾರ ನೀರುಗಳನ್ನು ಸಮರ್ಪಿಸಿದಂತೆಯೇ ಆಗುವುದು."

'ಜಗದ ಮಾನವರ ವಿಷಯದಲ್ಲಿ ದಯೆಯನ್ನು ತೋರಿಸದವನ ವಿಷಯದಲ್ಲಿ ಜಗದೀಶ್ವರನಾದರೂ ದಯೆತೋರಿಸಲಾರನು.'

'ಸೃಷ್ಟಿಯೆಲ್ಲಾ ಭಗವಂತನ ಕುಟುಂಬವಾಗಿದೆ. ಆತನು ಈ ತನ್ನ ಕುಟುಂಬದ ವಿಷಯದಲ್ಲಿ ಮಹಾ ದಯಾಳುವಾಗಿದ್ದಾನೆ. ಈ ಸೃಷ್ಟಿಯಲ್ಲಿ ಬಂದ ಪ್ರಾಣಿವರ್ಗಕ್ಕೆ ಯಾವನು ಮೇಲನ್ನುಂಟುಮಾಡುವನೋ ಅವನು ಭಗವಾನನ ಪ್ರೀತಿಗೆ ಪಾತ್ರನಾಗುತ್ತಾನೆ'

'ತನ್ನ ಸ್ವಂತ ದೇಹವನ್ನು ಪ್ರೀತಿಸುವಂತೆ ತನ್ನ ಸಹೋದರನನ್ನೂ ಪ್ರೀತಿಸತೊಡಗಿದರಲ್ಲದೆ ಒಬ್ಬನು ಭಕ್ತನೆನಿಸಲಾರನು.'

'ಅತಿ ಕೃಪಣನಾಗಿರಬೇಡ. ಮತ್ತೊಬ್ಬರ ಗುಟ್ಟನ್ನು ಕಿವಿಗೊಟ್ಟು ಕೇಳಬೇಡ. ತರ್ಕವಾದ ಮಾಡಬೇಡ, ಯಾರನ್ನೂ ದ್ವೇಷಿಸಬೇಡ. ಯಾರ ವಿಷಯದಲ್ಲೂ ಅಸೂಯೆಪಡಬೇಡ. ಯಾರಿಗೂ ಸಂದೇಹವನ್ನುಂಟುಮಾಡಬೇಡ. ದೇವರ ಮಕ್ಕಳಾದ ನೀವೆಲ್ಲರೂ ಅನ್ಯೋನ್ಯತೆಯಿಂದಿರಿ.'

'ನಿನ್ನ ಸಹೋದರನಾದ ಒಬ್ಬನಿಗೆ ನೀನು ಸಹಾಯಮಾಡಲು ಸಿದ್ಧನಾದೆಯೆಂದರೆ, ನಿನಗೆ ಸಹಾಯಮಾಡಲು ದೇವರೂ ಸಿದ್ಧನಾಗುವನು.'

'ದಾನವೆಂದರೆ ಕೈಯತ್ತಿ ಹಣಕಾಸುಗಳನ್ನು ಕೊಡುವುದು ಮಾತ್ರವಲ್ಲ ಒಂದೊಂದು ಉತ್ತಮಕಾರ್ಯವೂ ದಾನವೆ! ನಿನ್ನ ಸಹೋದರನೊಬ್ಬನನ್ನು ಕಂಡು ನಿಷ್ಕಲ್ಮಷತೆಯಿಂದ ಹಸನ್ಮುಖವನ್ನು ತೋರಿಸಿದರೆ ಅದೊಂದು ದಾನ. ಒಳ್ಳೆಯ ಸಂಗತಿಯೊಂದನ್ನು ಹೇಳಿದರ ಅದೊಂದು ದಾನ. ಕೆಟ್ಟುದನ್ನು ಹೇಳದಿರುವುದೂ ದಾನವೆ! ಮಾರ್ಗ ತಿಳಿಯದೆ ತೊಂದರೆ ಪಡುತ್ತಿರುವವನಿಗೆ ಮಾರ್ಗ ತೋರುವುದೊಂದು ದಾನ. ರೋಗದಿಂದ ನರಳುವವನಿಗೆ ಉಪಚರಿಸಿದರೆ ಅದೊಂದು ದಾನ ನಡೆದಾಡುವ ದಾರಿಯಲ್ಲಿ ಬಿದ್ದಿರುವ ಕಲ್ಲು ಮುಳ್ಳುಗಳನ್ನು ತೆಗೆದರೆ ಅದೂ ದಾನವೆ. ಏನೂ ಇಲ್ಲದಿದ್ದವನಿಗೆ ನಿನ್ನಲ್ಲಿರುವ ನೀರನ್ನು ಕೊಟ್ಟರೆ ಅದೂ ದಾನವೆನಿಸುವುದು.'

'ಬದುಕಿರುವಾಗ ಸಹಜೀವಿಗಳಿಗಾಗಿ ಮಾಡುವ ಸೇವೆಯೇ ಸತ್ತ ಮೇಲೆ ಸದ್ಗತಿಗಾಗಿ ಒದಗುವ ಬುತ್ತಿಯು.'

ಸಮಾಜದಲ್ಲಿ ಒಬ್ಬರಿಗೊಬ್ಬರು ತೋರಿಸಬೇಕಾದ ಲೌಕಿಕಗೌರವದ ವಿಷಯದಲ್ಲೂ ಪೈಗಂಬರರು ಬೋಧಿಸಿದ್ದರು. 'ನೀನು ವಾಸಿಸುವ ಮನೆಯನ್ನು ಹೊಗುವಾಗ ಮತ್ತು ಅದನ್ನು ಬಿಟ್ಟು ಹೊರಡುವಾಗ ಅದಕ್ಕೆ ಸಲಾಂ ಮಾಡು. ನಿನ್ನ ಹಂಡತಿ ಮಕ್ಕಳಿಗೆ ಸಲಾಂ ಮಾಡು. ನಿನ್ನ ಸ್ನೇಹಿತರ-ಬಂಧುಗಳ-ಕೊನೆಗೆ ಬೀದಿಯಲ್ಲ ತಿರುಗಾಡುವವರ ಸಲಾಮಿಗೆ ಪ್ರತಿಸಲಾಂ ಮಾಡದಿರಬೇಡ. ಸವಾರಿ ಮಾಡುವವನು ನಡೆಯುವವನಿಗೆ ಮೊದಲು ಸಲಾಂ ಮಾಡಲಿ. ನಡೆಯುವವನು ಕುಳಿತುಕೊಂಡಿರುವವನಿಗೆ ಮೊದಲು ಸಲಾಂ ಮಾಡಲಿ. ದೊಡ್ಡ ಪಂಗಡಕ್ಕೆ ಚಿಕ್ಕ ಪಂಗಡವೂ, ಹಿರಿಯರಿಗೆ ಕಿರಿಯರೂ ಮೊದಲು ಸಲಾಂ ಮಾಡಲಿ.'

ಪೈಗಂಬರರು ಮದೀನಾದಲ್ಲಿ ವಾಸಮಾಡುತ್ತಿದ್ದಾಗ ಅಲ್ಲಿದ್ದ ಎಹೂದ್ಯ ಪಂಗಡದವರ ಪ್ರೇಮಕ್ಕೂ ಪಾತ್ರರಾಗಿದ್ದರು. ಆದರೆ ಕೊರೆಯ್ಷಿ ಪಂಗಡದವರ ದ್ವೇಷವು ಇನ್ನೂ ಶಾಂತವಾಗಿರಲಿಲ್ಲ. ಅವರು ಒಂದುಸಾರಿ ಏಳುನೂರು ಒಂಟೆಗಳು, ನೂರು ಕುದುರೆಗಳು, ಮತ್ತು ಅನೇಕ ಕಾಲಾಳುಗಳನ್ನೊಳಗೊಂಡ ದೊಡ್ಡದೊಂದು ಸೈನ್ಯದೊಂದಿಗೆ ಮುಹಮ್ಮದರಮೇಲೆ ದಂಡೆತ್ತಿಹೊರಟು, ೨೭೭ ಮೈಲು ದೂರವಿದ್ದ ಮದೀನಾ ಪಟ್ಟಣಕ್ಕೆ ಬಂದರು. ಮುಹಮ್ಮದರು ಉಪಾಯಕಾಣದೆ, ಆತ್ಮರಕ್ಷಣೆಗಾಗಿ ಅವರೊಂದಿಗೆ ಯುದ್ಧಮಾಡಬೇಕಾಗಿ ಬಂತು. ಒಡನೆ ಅವರು ತಮ್ಮ ಅನುಯಾಯಿಗಳನ್ನು ಕುರಿತು, ನ್ಯಾಯಪಕ್ಷದಲ್ಲಿರುವವರಿಗೆ ಭಗವಂತನ ಸಹಾಯವಿರುವುದೆಂದು ನುಡಿದು ಬೆಂಬಲಕೊಟ್ಟು, ಅವರಲ್ಲಿ ಧೈರ್ಯೋತ್ಸಾಹಗಳನ್ನುಂಟು ಮಾಡಿದರು ಇಸ್ಲಾಂ ಪಕ್ಷದ ಮುನ್ನೂರು ಮಂದಿ ಸೈನಿಕರು ಹೊರಟು ಮಾರ್ಗಮಧ್ಯದಲ್ಲಿ ಆ ಸೈನ್ಯವನ್ನು ಎದುರಿಸಿದರು. ಎರಡು ಪಂಗಡದವರಿಗೂ ನಡೆದ ಯುದ್ಧದಲ್ಲಿ ಮುಸ್ಲಿಂ ಪಕ್ಷದವರಿಗೇ ಜಯವಾಯಿತು. ನಾಲ್ವತ್ತೊಂಭತ್ತು ಮಂದಿ ಕೊರೆಯ್ಷಿ ಸೈನಿಕರು ಯುದ್ಧಭೂಮಿಯಲ್ಲಿ ಸತ್ತುದಲ್ಲದೆ-ಅಷ್ಟೇಮಂದಿ ಇಸ್ಲಾಂ ಪಕ್ಷದವರಿಗೆ ಕೈಸೆರೆಯಾದರು. ಆದರೆ ಮುಹಮ್ಮದರು ಅವರನ್ನು ಗುಲಾಮರನ್ನಾಗಿ ಮಾಡಲೊಪ್ಪದೆ, ದ್ರೋಹ ಮಾಡುವುದಿಲ್ಲವೆಂದು ಪ್ರಮಾಣಮಾಡಿಸಿಕೊಂಡು ಬಿಟ್ಟುಬಿಟ್ಟರು. ಹಾಗೆ ಸೆರೆ ಸಿಕ್ಕು ಬಿಡುಗಡೆಯಾಗಿ ಮಕ್ಕಾಕ್ಕೆ ಹಿಂದಿರುಗಿದ ಸೈನಿಕರು, ತಮ್ಮ ಮಾತಿನಂತೆ ನಡೆಯಲಿಲ್ಲ. ಪೈಗಂಬರರಮೇಲೆ ಪೂರ್ವಕ್ಕಿಂತಲೂ ಅತಿಶಯದ್ವೇಷಭಾವದಿಂದ ಸೈನ್ಯಸಂಗ್ರಹ ಮಾಡತೊಡಗಿದರು. ಅವರಲ್ಲಿ ಧತ್ತೂರ್ ಎಂಬವನೊಬ್ಬನು, ಒಂದಾನೊಂದು ದಿನ ಕಳ್ಳತನದಿಂದ ಮುಹಮ್ಮದರನ್ನು ಸಮೀಪಿಸಿ, ಒಂದು ಮರದ ಕೆಳಗೆ ನಿದ್ರಿಸುತ್ತಿದ್ದ ಅವರನ್ನು ಸಂಹರಿಸಿಬಿಡಬೇಕೆಂದು ಕತ್ತಿಯನ್ನೆತ್ತಿದನು. ಮತ್ತು-'ಎಲೋ ಮಹಮ್ಮದನೆ ಈಗ ನಿನ್ನನ್ನು ನನ್ನ ಕತ್ತಿಯ ಬಾಯಿಂದ ಕಾಪಾಡುವನಾರು?' ಎಂದು ಗರ್ಜಿಸಿದನು. ಒಡನೆ ಎಚ್ಚರಗೊಂಡ ಪೈಗಂಬರರು, ತಮಗುಂಟಾಗಿದ್ದ ಅಪಾಯವನ್ನು ಕುರಿತು ಹತಾಶರಾಗದೆ-'ದೇವರು' ಎಂದು ತತ್‌ಕ್ಷಣ ನುಡಿದರು. ಅದನ್ನು ಕೇಳಿದೊಡನೆಯೇ, ಆ ದುರುಳನ ದೇಹಬಲವೇ ಕ್ಷೀಣಾ

ವಾದಂತಾಗಿ, ಕೈಕಾಲುಗಳು ನಡುಗತೊಡಗಿ, ಕೈಕತ್ತಿಯು ಜಾರಿ ಕೆಳಕ್ಕೆ ಬಿದ್ದು ಹೋಯಿತು. ಕೂಡಲೇ ಅದನ್ನು ಎತ್ತಿಕೊಂಡ ಮಹಮ್ಮದರು —'ಎಲೋ-ಈಗ ನಿನ್ನನ್ನು ನನ್ನ ಕೈಕತ್ತಿಯಿಂದ ಯಾರು ಕಾಪಾಡುವರು ಹೇಳು' ಎಂದರು,—'ಅಯ್ಯೋ ಯಾರೂ ಇಲ್ಲ-ನನ್ನನ್ನು ಬದುಕಿಸಿರಿ' ಎಂದು ಹಲ್ಕಿರಿದ ಆ ಪಾಪಿಯನ್ನು ಕಂಡು ಮಹಮ್ಮದರು, ಕನಿಕರಪಟ್ಟು, 'ಹೋಗು, ಇನ್ನುಮೇಲಾದರೂ ದಯೆಯುಳ್ಳವನಾಗಿರು. ಬೇರೆಯವರ ಮೇಲೆ ದ್ವೇಷಮಾಡಬೇಡ' ಎಂದು ನುಡಿದು, ಕೈಯಲ್ಲಿದ್ದ ಕತ್ತಿಯನ್ನು ಬಿಸಾಡಿಬಿಟ್ಟರು. ಆ ಸಾಧುವರ್ಯರ ಕೃತ್ಯವು ಅವನ ಹೃದಯವನ್ನು ಕರಗಿಸಲು, ಒಡನೆ ಅವನು ಅವರ ಪಾದಕ್ಕೆ ಬಿದ್ದು, ಅವರನ್ನು ಗುರುವೆಂದು ನಂಬಿ ಶರಣುಹೊಕ್ಕುದಲ್ಲದೆ, ಅವರ ಆಪ್ತ ಶಿಷ್ಯನೂ ಆದನು.

ಕೊರೆಯ್ಷಿ ಜನರು ಪುನಃ ಮದೀನಾದ ಮೇಲೆ ದಂಡೆತ್ತಿದರು. ಆ ಸಾರಿಯೂ ಅವರಿಗೆ ಅಪಜಯವಾಯಿತು. ಪುನಃ ಒಂದೆರಡುಸಾರಿ, ಮಕ್ಕಾದವರಿಗೂ ಮದೀನಾದ ಮುಸ್ಲಿಂ ಪಂಗಡಕ್ಕೂ ಯುದ್ಧವಾಗಿ ಇಸ್ಲಾಮಿಯರೇ ಜಯಶಾಲಿಗಳಾದರು. ಆ ವೇಳೆಗೆ ಪೈಗಂಬರರೂ ಅವರ ಶಿಷ್ಯರೂ ತಮ್ಮ ಜನ್ಮಸ್ಥಳವಾದ ಮಕ್ಕಾವನ್ನು ಬಿಟ್ಟು ಆರು ವರ್ಷಗಳಾಗಿದ್ದುವು. ಎಲ್ಲರಿಗೂ ಪುನಃ ಆ ಸ್ಥಳಕ್ಕೆ ಹೋಗಬೇಕೆಂದು ಆಸೆಯಾಗಿತ್ತು. ಮುಂದೆ ಕೆಲದಿನಗಳ ತರುವಾಯ ಹೊರಟು ಕೊರೆಯ್ಷಿ ಜನರೊಂದಿಗೆ ಒಪ್ಪಂದ ಮಾಡಿಕೊಂಡು, ಎಲ್ಲರೂ ಜನ್ಮಭೂಮಿಯ ಯಾತ್ರೆಯಿಂದ ಸಂತುಷ್ಟರಾಗಿ ಹಿಂತಿರುಗಿದರು.

ಇದಾದ ಕೆಲವುದಿನಗಳಮೇಲೆ, ದಿನದಿನಕ್ಕೆ ಹೆಚ್ಚುತ್ತಿದ್ದ ಮುಸ್ಲಿಂ ಪಂಗಡದ ಅಭಿವೃದ್ಧಿಯನ್ನು ಕಂಡು ತೃಪ್ತರಾದ ಮಹಮ್ಮದರು, ಪರ್ಷಿಯಾ ಗ್ರೀಸ್ ಮುಂತಾದ ದೇಶಗಳ ರಾಜರ ಆಸ್ಥಾನಕ್ಕೆ ಇಸ್ಲಾಂ ಮತಪ್ರಚಾರಕರನ್ನು ಕಳುಹಿಸಿದರು. ಇಸ್ಲಾಂಮತದ ಬೆಳೆವಣಿಗೆಯು ಕೊರೆಯ್ಷಿ ಜನರ ಕಣ್ಣು ಕುಕ್ಕುವಂತಿರಲು, ಅವರು ಪುನಃ ಮೂರುಸಾವಿರ ಸೈನ್ಯದೊಂದಿಗೆ ದಂಡೆತ್ತಿ ಬಂದು ಸೋತು ಹಿಂದಿರುಗಿದರು. ಒಡನೆ ಮಹಮ್ಮದರು ಮಕ್ಕಾಪಟ್ಟಣಕ್ಕೆ ಬಂದು ಜಯಧ್ವನಿಗಳಿಂದ ಪುರಪ್ರವೇಶಮಾಡಿ ಒಂಟೆಯ ಮೇಲೆ ಕುಳಿತಿದ್ದಂತೆಯೇ ನೇರವಾಗಿ ಕಾಬಾ ದೇವಸ್ಥಾನಕ್ಕೆ ನಡೆದರು. ಒಡನೆ ಅದರ

ಮುಖ್ಯಾಧಿಕಾರಿಯು ಇಸ್ಲಾಂ ಧರ್ಮ ಸ್ವೀಕಾರಮಾಡಿ, ಆ ಆಲಯದ ಬಾಗಿಲನ್ನು ವಿಶಾಲವಾಗಿ ತೆಗೆದು ಅವರನ್ನು ಒಳಕ್ಕೆ ಬರಲಿತ್ತನು. ಮಹಮ್ಮದರು ಒಳಹೊಕ್ಕು ಅಲ್ಲಿದ್ದ ವಿಗ್ರಹಗಳಲ್ಲಿ ಒಂದೊಂದರ ಮುಂದೂ ನಿಂತು, ತಮ್ಮ ಕೈಯಲ್ಲಿದ್ದ ಕೋಲನ್ನು ಮುಂದಕ್ಕೆ ಚಾಚಿ, 'ಇಗೋ ಈಗ ಸತ್ಯವು ಪ್ರಕಟವಾಗಿದೆ. ಅಸತ್ಯವು ನಿರ್ನಾಮವಾಗಲಿ' ಎಂದು ಹೇಳುತ್ತಿರಲು, ಒಡನೆ ಅವರ ಹಿಂಬಾಲಕರು ಅವುಗಳನ್ನು ಒಡೆದು ಧ್ವಂಸಗೊಳಿಸತೊಡಗಿದರು ಹೀಗಾಗಿ ಅಲ್ಲಿದ್ದ ೩೬೦ ವಿಗ್ರಹಗಳೂ ನಿರ್ನಾಮವಾದುವು

ಆದಿನ ಮಧ್ಯಾಹ್ನ ಅಲ್ಲೇ ಪುನಃ ಎಲ್ಲರೂ ನೆರೆದರು. ಪೈಗಂಬರರು ಕಾಬಾ ಪೀಠದಮೇಲೆ ನಿಂತು ಪ್ರಾರ್ಥನೆ ಮಾಡಿದರು. ಮತ್ತು ಅಂದಿನಿಂದ ಮುಂದೆ ಲೋಕದಲ್ಲಿರುವ ಮಹಮ್ಮದೀಯರೆಲ್ಲರೂ ಪ್ರಾರ್ಥನೆಯ ಕಾಲದಲ್ಲಿ ಆ ದಿಕ್ಕಿಗೇ ತಿರುಗಿ ಪ್ರಾರ್ಥಿಸಬೇಕೆಂದು, ಅಲ್ಲಿ ಕಿಬ್ಲಿ ಎಂಬೊಂದು ಧ್ವಜವನ್ನು ಸ್ಥಾಪಿಸಿದರು. ತರುವಾಯ ಅವರು ತಮ್ಮ ಮತಾನುಯಾಯಿಗಳಲ್ಲಿ ಏಕಮತ್ಯ ದಯೆ ಲೋಕಪಿತನಲ್ಲಿ ಅನನ್ಯಭಕ್ತಿ, ದಾನ, ಸಹೋದರಭಾವ, ವಿಶ್ವಪ್ರೇಮ ಮುಂತಾದುವುಗಳನ್ನು ಕುರಿತು ಬೋಧಿಸಿದರು.

ಮಹಮ್ಮದರ ಈ ಅಭಿಪ್ರಾಯವನ್ನು ಕಂಡು ಅವರನ್ನು ಹೃದಯಮೂಲದಿಂದ ದ್ವೇಷಿಸುತ್ತಿದ್ದ ಕೊರೆಯ್ಷಿ ಜನರಲ್ಲೂ ಕೆಲವರು ಕೊನೆಗೆ ಅವರಿಗೆ ವಿಧೇಯರಾದರು ಪೈಗಂಬರರು ಅವರ ಪೂರ್ವದ ಅಪರಾಧಗಳನ್ನೆಲ್ಲಾ ಕ್ಷಮಿಸಿ, ಅವರನ್ನು ಪ್ರೇಮದಿಂದ ಕಂಡು ಹಿತೋಕ್ತಿಗಳನ್ನು ಹೇಳಿದರು.

ಹೀಗೆ ತಮ್ಮ ಸ್ವಸ್ಥಳವನ್ನು ಜಯಿಸಿ ಭದ್ರಗೊಂಡಮೇಲೆ ಮಹಮ್ಮದರು ಅರಬ್ಬೀದೇಶದಲ್ಲಿ ಸುತ್ತುಮುತ್ತಲೂ ಚದುರಿದ್ದ ಅನೇಕಾನೇಕ ಪಂಗಡಗಳವರನ್ನೆಲ್ಲಾ ಒಂದುಗೂಡಿಸಲು ಬೋಧಕರನ್ನು ಕಳುಹಿಸಿದರು. ಕೆಲಕಾಲ ಅದು ಸುರಕ್ಷಿತವಾಗಿ ಸಾಗಲಿಲ್ಲ. ಅರಬ್ಬೀದೇಶದ ಗುಡ್ಡಗಾಡುಗಳಲ್ಲಿ ವಾಸಿಸಿದ್ದ ಆ ಜನರು ಏಕಾಏಕಿ ಸ್ವಾಧೀನರಾಗಲಿಲ್ಲ. ಪ್ರಾರಂಭದಲ್ಲಿ ತಮ್ಮ ಪೂರ್ವಪದ್ಧತಿಗೆ ವಿರೋಧವಾಗಿ ಎದ್ದ ಆ ನವೀನಶಕ್ತಿಯನ್ನು ಅಡಗಿಸಲು ದೊಡ್ಡ ಸೈನ್ಯವನ್ನು ಕಟ್ಟಿ ಮಹಮ್ಮದರ ಮೇಲೆ ಯುದ್ಧಕ್ಕೆ ಬಂದರು. ಯುದ್ಧವು ಭಯಂಕರ ರೀತಿಯಿಂದ ನಡೆದು ಮೊದಮೊದಲು

ಇಸ್ಲಾಂ ಪಂಗಡಕ್ಕೆ ಅಪಜಯುವಾಗುವಂತೆ ತೋರಿದರೂ, ಕೊನಗೆ ಅವರೇ ಜಯಶಾಲಿಗಳಾದರು.

ಇದಾದ ಕೆಲವು ದಿನಗಳ ತರುವಾಯ, ಗುಂಪುಗುಂಪಾಗಿ ಇಸ್ಲಾಂ ಧರ್ಮವನ್ನು ಅಂಗೀಕರಿಸುತ್ತಿದ್ದ ಜನಗಳನ್ನು ಕಂಡು ತೃಪ್ತರಾದ ಮುಹಮ್ಮದರು, ತಮ್ಮ ಜನ್ಮಸ್ಥಳಕ್ಕೆ ಕೊನೆಯುಸಾರಿಯು ಯಾತ್ರೆಯನ್ನು ನೆರವೇರಿಸಲು ಉದ್ದೇಶಿಸಿ ಒಂದು ಲಕ್ಷ ನಾಲ್ವತ್ತು ಸಾವಿರ ಶಿಷ್ಯಮಂಡಲಿ ಪರಿವಾರಗಳೊಂದಿಗೆ ಮದೀನಾವನ್ನು ಬಿಟ್ಟು ಮಕ್ಕಾ ಪಟ್ಟಣಕ್ಕಾಗಿ ಪ್ರಯಾಣ ಮಾಡಿದರು ಪ್ರಯಾಣವು ನಿದಾನವಾಗಿ ಸಾಗಿತು. ಬಹು ಸಂಭ್ರಮದಿಂದ ಪುರಪ್ರವೇಶಮಾಡಿ, ಯಾತ್ರೆಯ ವಿಧಾನಗಳನ್ನೆಲ್ಲ ಮುಗಿಸಿ, ತರುವಾಯ ಪಕ್ಕದಲ್ಲಿದ್ದ ಅರಾಫಟ್ ಗುಡ್ಡದಮೇಲೆ ನಿಂತು, ತಮ್ಮ ಅಸಂಖ್ಯ ಶಿಷ್ಯವೃಂದವನ್ನು ಕುರಿತು-'ನಾನು ಮುಂದೆ ಮತ್ತೊಂದುವೇಳೆ ಈ ಸ್ಥಳದಲ್ಲಿ ನಿಂತು ನಿಮಗೆ ಬೋಧಿಸಬಲ್ಲೆನೆಂಬ ನಂಬಿಕೆಯಿಲ್ಲ. ಓ ನನ್ನ ಪ್ರಿಯ ಬಂಧುಗಳೇ, ಕ್ರೂರಕರ್ಮವನ್ನು ತ್ಯಜಿಸಿರಿ. ನಿಮ್ಮಲ್ಲಿ ಬಂಧುಭಾವವೂ ಸಹೋದರಭಾವವೂ ವಿಶ್ವಪ್ರೇಮವೂ ಬೆಳೆಯಲಿ. ಒಬ್ಬ ಮುಸಲ್ಮಾನನು ಮತ್ತೊಬ್ಬ ಮುಸಲ್ಮಾನನಿಗೆ ಸಹೋದರನೆಂಬುದನ್ನು ಮರೆಯಬೇಡಿರಿ. ನಿಮ್ಮಲ್ಲಿ ದ್ವೇಷಾಸೂಯೆಗಳಿಲ್ಲದಿರಲಿ. ನಿಮ್ಮನಿಮ್ಮಲ್ಲಿ ವ್ಯಾಪಾರದಲ್ಲಾದರೂ ಪೋಟಾಪೋಟಿಯಿಲ್ಲದಿರಲಿ. ಎಲೈ ಪುರುಷರೇ ನಿಮ್ಮ ಪತ್ನಿಯರನ್ನು ಪ್ರೀತಿಸಿರಿ. ಅವರನ್ನು, ಭಗವಂತನು ನಿಮ್ಮಲ್ಲಿ ಒಪ್ಪಿಸಿಟ್ಟಿರುವ ನಿಧಿಯೋ ಎಂಬಂತೆ ತಿಳಿದು ಗೌರವದಿಂದ ರಕ್ಷಿಸಿರಿ. ಪತ್ನೀಪರಿತ್ಯಾಗವು ಮಹಾಪಾಪವೂ ಹೇಯವಾದುದೂ ಎಂಬುದನ್ನು ಮರಯಬೇಡಿರಿ. ನಿಮ್ಮ ಸೇವಕರನ್ನು ದಯೆಯಿಂದಲೂ ಪ್ರೇಮದಿಂದಲೂ ಕಾಪಾಡಿರಿ. ಅವರು ಅಜ್ಞಾನದಿಂದ ಮಾಡುವ ತಪ್ಪುಗಳನ್ನು ದಿನಕ್ಕೆ ಎಪ್ಪತ್ತುಸಾರಿ ಕ್ಷಮಿಸಿರಿ. ಗುಲಾಮರನ್ನು ಸ್ವತಂತ್ರರನ್ನಾಗಿ ಬಿಟ್ಟುಬಿಡುವುದಕ್ಕಿಂತಲೂ ದೇವರಿಗೆ ಹೆಚ್ಚು ಪ್ರಿಯಕರವಾದ ಕಾರ್ಯವು ಮತ್ತಾವುದೂ ಇಲ್ಲವೆಂದು ತಿಳಿಯಿರಿ. ಜಾಕೆ, ನಾನು ಹೊರಟುಹೋದ ತರುವಾಯ, ಪುನಃ ನಿಮ್ಮ ಹಿಂದಿನ ಮಾರ್ಗಗಳಿಗೆ ತಿರುಗಿ, ಒಬ್ಬರ ಕತ್ತನ್ನೊಬ್ಬರು ಕೊಯ್ದುಕೊಳ್ಳದಂತೆ ಜಾಗ್ರತರಾಗಿರಿ. ಇಲ್ಲಿದ್ದು ಇದನ್ನುಕೇಳಿದವನು-ಇಲ್ಲಿ ಹಾಜರಿರದ ಮತ್ತೊಬ್ಬ

ನಿಗೆ ಹೇಳಲಿ' ಎಂದು ನುಡಿದರು. ತರುವಾಯ ಅಂತರಿಕ್ಷದ ಕಡೆಗೆ ತಲೆಯೆತ್ತಿ —ಓ ಪ್ರಭುವೇ ನಾನು ಕೊಡಬೇಕಾಗಿದ್ದ ಸಂದೇಶವನ್ನು ಕೊಟ್ಟಿದ್ದೇನೆ. ನನ್ನ ಕರ್ತವ್ಯವನ್ನು ನೆರವೇರಿಸಿದ್ದೇನೆ' ಎಂದು ಉಚ್ಚರಿಸಿ, ಕೈಯೆತ್ತಿ 'ಅಲ್ಲಿ ನೆರೆದಿದ್ದ ಜನರನ್ನು ಆಶೀರ್ವದಿಸಿದರು. ಆ ಮೇಲೆ ಅಲ್ಲಿಂದ ಹೊರಟು ತಮ್ಮ ಶಿಷ್ಯಸಂಗಡದೊಂದಿಗೆ ಮದೀನಾಪಟ್ಟಣಕ್ಕೆ ಪ್ರಯಾಣಮಾಡಿದರು.

ಈ ಸಾರಿ ಮದೀನಾ ಪಟ್ಟಣವನ್ನು ಸೇರಿದಾಗಿನಿಂದ ಅವರ ದೇಹಾರೋಗ್ಯವು ಕುಂದತೊಡಗಿತು. ಬರುಬರುತ್ತಾ ಅಸೌಖ್ಯವು ಪ್ರಬಲಿಸಿತು. ಮುಂದೊಂದು ಶುಕ್ರವಾರ ಪೈಗಂಬರರು ಪ್ರಾರ್ಥನಾ ವೇದಿಕೆಯನ್ನು ಬಹು ಕಷ್ಟದಿಂದ ಏರಿ, ನೆರೆದಿದ್ದ ಶಿಷ್ಯ ವೃಂದವನ್ನು ಕುರಿತು—"ಪ್ರಿಯ ಬಾಂಧವರೇ ನಿಮ್ಮ ಪೈಗಂಬರನು ಮೃತನಾದನೆಂದು ನಿಮ್ಮಲ್ಲಿ ಹಬ್ಬಿದ ಸುಳ್ಳು ವಾರ್ತೆಯೇ ನಿಮಗೆ ಬಹು ಕಳವಳವನ್ನುಂಟುಮಾಡಿತೆಂದು ಕೇಳಿದೆನು ಆದರೆ ನನ್ನ ಹಿಂದೆ ಬಂದಿದ್ದ ಯಾವ ಪೈಗಂಬರನಾದರೂ ಶಾಶ್ವತವಾಗಿದ್ದು ಬಿಟ್ಟುದನ್ನು ನೀವು ಕೇಳಿದ್ದೀರಾ! ನಾನೂ ನಿಮ್ಮನ್ನು ಬಿಟ್ಟು ಹೋಗಬಾರದೆಂದು ನೀವು ಅಪೇಕ್ಷಿಸುವುದರಲ್ಲಿ ಅರ್ಥವಿಲ್ಲ. ಪ್ರತಿಯೊಂದು ವಸ್ತುವಿಗೂ ಗೊತ್ತಾದ ಕಾಲಾವಧಿಯುಂಟು. ನನ್ನನ್ನು ಯಾರು ಕಳುಹಿಸಿದರೋ ಆ ಪರಮಪಿತನಲ್ಲಿಗೆ ನಾನು ಹಿಂದಿರುಗುತ್ತೇನೆ. ನಿಮ್ಮಲ್ಲಿ ನನ್ನ ಕೊನೆಯ ಮನವಿಯೊಂದುಂಟು; ಅದನ್ನು ಗಮನವಿಟ್ಟು ಕೇಳಿರಿ. ಪ್ರಿಯ ಭ್ರಾತೃಗಳೇ, ನೀವು ಐಕಮತ್ಯದಿಂದಿರಿ. ಪರಸ್ಪರ ಪ್ರೀತಿಸಿರಿ. ನ್ಯಾಯವಾದ ವ್ಯವಹಾರಗಳಲ್ಲೆಲ್ಲಾ ಒಬ್ಬನಿಗೊಬ್ಬನು ನೆರವಾಗಿರಿ. ಸತ್ಯವನ್ನು ರಕ್ಷಿಸಲು ಒಬ್ಬನಿಗೊಬ್ಬನು ಸಹಾಯಕನೂ ಮಾರ್ಗದರ್ಶಕನೂ ಆಗಿರಿ. ಇವುಗಳಿಂದಲೇ ಎಲ್ಲರೂ ಉದ್ಧಾರವಾಗುವಿರಿ" ಎಂದು ಹೇಳಿ ಕೊನೆಗೆ,

"ಯಾವನು ಇಹಲೋಕದಲ್ಲಿ ಪ್ರಸಿದ್ಧನಾಗಬೇಕೆಂಬ ಅತ್ಯಾಸೆಯನ್ನು ತ್ಯಜಿಸಿ, ದುಷ್ಕಾರ್ಯಗಳಿಗೆ ಪ್ರವೇಶಿಸದೆ ಇರುವನೋ, ಮತ್ತಾವನು ಪಾಪಭೀತಿಯುಳ್ಳವನಾಗಿರುವನೋ ಅವನಿಗೆ ಭಗವಂತನು ಸದ್ಗತಿಯನ್ನು ತಪ್ಪದೆ ದಯಪಾಲಿಸುವನು" ಎಂಬರ್ಥದ ಕೊರಾನ್ ವಾಕ್ಯವನ್ನು ಓದಿಹೇಳಿ, ತರುವಾಯ ಕೆಳಗಿಳಿದು ಪಕ್ಕದಲ್ಲೇ ಇದ್ದ 'ಆಯೇಷಾ ಎಂಬ ತಮ್ಮ ಪತ್ನಿಯಿದ್ದ ಮನೆಗೆ ಮೆಲ್ಲನೆ ನಡೆದರು.

ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ದೀನಜನೋದ್ಧಾರಕಳಾದ

ಪಂಡಿತ ರಮಾಬಾಯಿ ಸರಸ್ವತಿ

-+ ಶ್ರೀರಾಮಸಹಾಯಂ +-

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## ( ಸಚಿತ್ರ ಮಾಸ ಪುಸ್ತಕಾವಳಿ )

**ಮುನ್ನುಡಿ : —**

ಹತ್ತೊಂಬತ್ತನೆಯ ಶತಮಾನದಲ್ಲಿ ಉದ್ಭವಿಸಿ ಮಾತೃದೇಶ ಸೇವಾ ಕಾರ್ಯದಲ್ಲಿ ಶ್ರಮಿಸಿದ ಭಾರತ ಪುತ್ರಿಯರಲ್ಲಿ, ನಮ್ಮ ಕಥಾನಾಯಿಕೆಯಾದ **ಪಂಡಿತಾ ರಮಾಬಾಯಿ ಸರಸ್ವತಿ**ಯೂ ಒಬ್ಬಾಕೆಯು ಬಡತನದಲ್ಲಿ ಹುಟ್ಟಿ, ಬಹು ಹೀನ-ದೀನ ಸ್ಥಿತಿಯಲ್ಲಿ ಬೆಳೆದು, ಗ್ರಾಮ್ಯೈಕ ರಾತ್ರಿಯಾಗಿ ಅಲೆದು, ತಂದೆತಾಯಿ ಬಂಧುಬಾಂಧವರನ್ನೆಲ್ಲ ಕಳೆದುಕೊಂಡು ಏಕಾಕಿನಿಯಾಗಿ ನಿಂತರೂ ಈ ಸಾಧ್ವೀಮಣಿಯು ತನ್ನ ಜೀವಿತವನ್ನು ಲೋಕಸೇವೆಯೆಂಬ ಸಾರ್ಥಕ ಕಾರ್ಯಕ್ಕಾಗಿ ಉಪಯೋಗಿಸಿ ಸುಪ್ರಸಿದ್ಧಳಾದಳು. ನಮ್ಮಲ್ಲಿ ಅನಾದಿ ಕಾಲದಿಂದ ನಡೆದುಬಂದ ಸಾಮಾಜಿಕ ಪದ್ಧತಿಯನ್ನನುಸರಿಸಿ, ಸ್ತ್ರೀಯರು ಸಾರ್ವಜನಿಕ ಸೇವಾಕಾರ್ಯಗಳನ್ನು ಕೈಕೊಳ್ಳಲು ಸಾಧ್ಯವಿಲ್ಲದಿರುತ್ತಿರುವಲ್ಲಿ ಪಂಡಿತಾ ರಮಾಬಾಯಿಯು ತನ್ನ ಭಗಿನೀವರ್ಗವು ಪಡುತ್ತಿದ್ದ ಅನಂತ ಕಷ್ಟಸಂಕಟಗಳನ್ನು ಕಂಡು ಎದೆ ಕರಗಿ-ಕರುಳು ಮರುಗಿ, ಮತಾಂತರವನ್ನು ಹೊಂದಿಯಾದರೂ ಅವರ ಉದ್ಧಾರಕ್ಕೆ ಅವಶ್ಯಕವಾದ ಸಾಧನ ಸಾಮಗ್ರಿಗಳನ್ನೊದಗಿಸಿದಳು. ಆವರಗೆ ಯಾರೂ ಕೈಕೊಂಡು ನಡೆಯಿಸಿರದ-ಅಲ್ಲಲ್ಲ, ಅದೊಂದು ಗಮನಿಸಲರ್ಹವಾದ ವಿಚಾರವೆಂದು ಯೋಚಿಸಲು ಸಹ ಹೇಸಿದ-ಆ ದುರ್ದೈವಿ ಭಾರತದೇಶದ ವಿಧವಾ ಸ್ತ್ರೀಯರ ದುರ್ಗತಿ ವಿಚಾರವನ್ನು ಕುರಿತು ಬಹು ದೀರ್ಘವಾಗಿ ಯೋಚಿಸಿ, ಅವರ ಪುನರುದ್ಧಾರ ವಿಷಯವನ್ನೂ ಅವರ ಶೇಷ ಜೀವಿತವನ್ನು ಸಾರ್ಥಕ ರೀತಿಯಿಂದ ಸಾಗಿಸುವ ಮಾರ್ಗಗಳನ್ನೂ ಕುರಿತು ಚರ್ಚಿಸಿ, ಆ ಬಗೆಯ ಸೇವಾ ಕಾರ್ಯಕ್ಕೆ ಒಂದು ಸ್ಥಿರ ರೂಪವನ್ನು ಕಲ್ಪಿಸಿದ ಪುಣ್ಯಶೀಲೆಯು ನಮ್ಮ ಕಥಾನಾಯಿಕೆಯು. ಈ ಮಹತ್ಕಾರ್ಯ ಸಾಧನೆಗಾಗಿ ಇಂಗ್ಲೆಂಡು ಅಮೆರಿಕಾ ಜಪಾನ್ ಮುಂತಾದ ಖಂಡಾಂತರ ದೇಶಗಳನ್ನು ಸಂದರ್ಶಿಸಿ, ಅಲ್ಲಿಯ ಸುಪ್ರಸಿದ್ಧ ವ್ಯಕ್ತಿಗಳೊಂದಿಗೆ ಪ್ರಸ್ತಾಪಿಸಿ, ತಾನು ಕೈಕೊಂಡ ಆ ಕಾರ್ಯಕ್ಕೆ ಅವರ ಸಹಾನುಭೂತಿ ಪ್ರೋತ್ಸಾಹಗಳನ್ನು ಗಳಿಸಿಕೊಂಡು ಕಾರ್ಯಸಾಧನೆ ಮಾಡಿದ ಪ್ರೌಢಳು ನಮ್ಮ ಕಥಾನಾಯಿಕೆಯು. ಆವರೆಗೆ ನಮ್ಮಲ್ಲಿ ಯಾರೂ ನಡೆಯಿಸಿರದ-ಅಲ್ಲ ಯೋಚಿಸಿ ಸಹ ಅರಿಯದ, ಆ ಕಾರ್ಯವನ್ನು ಅಷ್ಟು ಸಮರ್ಪಕ ರೀತಿಯಿಂದ ನೆರವೇರಿಸಿದರೂ, 'ನಾನು ಮಾಡಿದವಳು' ಎಂಬ ಭಾವಕ್ಕೆ ಮನಸ್ಸಿನಲ್ಲಿ ಲೇಶಮಾತ್ರವೂ ಎಡೆಗೊಡದೆ, "ಸಮಸ್ತವೂ ಲೋಕ

ಪಿತನಾದ ಆ ಜಗತ್ಕರ್ತನ ಸೇವೆ" ಯೆಂಬ ನಿರ್ಮಮ ಭಾವದಿಂದ ಅಹರ್ನಿಶಿ ಕೇವಲ ಪರತಂತ್ರಳಂತೆ ಕಾರ್ಯತತ್ಪರಳಾಗಿದ್ದ ಕರ್ಮಯೋಗಿನಿಯು ನಮ್ಮ ಕಥಾನಾಯಿಕೆಯು!—

ನಮ್ಮಲ್ಲಿ ಸಾರ್ವಜನಿಕ ಕಾರ್ಯಗಳಿಗೆ ತೊಡಗತಕ್ಕವರು ಅನೇಕಾನೇಕ ಕಷ್ಟನಷ್ಟಗಳಿಗೆ ತಲೆಗೊಡಬೇಕಾಗಿದೆ. ಸ್ವಾರ್ಥಸಾಧನೆಯ ದುರುದ್ದೇಶದಿಂದಲ್ಲದ, ನಿಷ್ಕಾಮ ಭಾವದಿಂದ ಲೋಕಸೇವಾ ಕಾರ್ಯಕ್ಕೆಂದು ಸಿದ್ಧರಾಗಿ ನಡುಕಟ್ಟಿ ಮುಂದಕ್ಕೆ ಬರತಕ್ಕವರು ನಮ್ಮಲ್ಲಿ ಸಾವಿರಕ್ಕೊಬ್ಬರು-ಲಕ್ಷಕ್ಕೊಬ್ಬರೂ ಸಿಕ್ಕರು ಎಂದರ ಅದು ದೋಷವಲ್ಲ. ಹಾಗೆ ಬರುವ ಒಬ್ಬರಬ್ಬರು ಪುಣ್ಯಾತ್ಮರು ಕೈಕೊಳ್ಳುವ ಜನಸೇವೆಯು ಅಂಥಾ ಕಾರ್ಯಕ್ಕೊ ನಮ್ಮವರಿಂದ ಯೋಗ್ಯ ಉತ್ತೇಜನ-ಅಲ್ಲಲ್ಲ, ಸಹಾನುಭೂತಿ ದೊರೆಯುವುದು ಸಹ ಎಷ್ಟೋ ಕಠಿಣವಾಗಿದೆ. ಸಾಲದುದಕ್ಕೆ ಅವನ ಮೇಲೆ ಇಲ್ಲಸಲ್ಲದ ದೂರು ಆಕ್ಷೇಪಣೆ ಅಪನಿಂದೆ ಮುಂತಾದುವುಗಳನ್ನು ಹೊರಿಸಲೆತ್ನಿಸಿ ಅವನು ತಲೆಯೆತ್ತಿ ಚೇತರಿಸಿಕೊಳ್ಳಲಾರದಂತೆ ನಮ್ಮವರೇ ಮಾಡಿಬಿಡುವರು! ಅವನೆಲ್ಲಾದರೂ, ಅಲ್ಪ ಸ್ವಲ್ಪ ಧೈರ್ಯೋತ್ಸಾಹಗಳಿಂದ ಮುಂದೆ ಬಂದ ಜಳ್ಳು ಮನಸ್ಸಿನವನಾಗಿದ್ದರೆ, ಮುಂದೆ ತನ್ನ ಜನ್ಮವಿರುವ ವರೆಗೆ " ಬಿಸಿ ಹಾಲಿಗೆ ಬಾಯಿಕ್ಕಿದ ತೆನಾಲಿರಾಮನ ಬೆಕ್ಕಿನಂತೆ " ಹತ್ತು ಮಂದಿಯ ಕಾರ್ಯವೆಂದೊಡನೆಯೇ, ದೂರದಿಂದಲೇ ನಮಸ್ಕಾರಹಾಕಿ ಹಿಂದೆ ನಿಲ್ಲುವಂತೆ ಆಗಿಹೋಗುವುದು. ಸಾಲದುದಕ್ಕೆ, ವಿವಿಧ ಮುಖವಾಗಿರುವ ದೇಶಾಭಿವೃದ್ಧಿ ಸ್ವಜನಾಭಿವೃದ್ಧಿ ಕಾರ್ಯಗಳನ್ನು ಕೈಕೊಳ್ಳುವವರಿಗೆ ಶಾಸ್ತ್ರಾಧಾರ ಸಿಕ್ಕದಿರುವುದೊಂದು! ಶಾಸ್ತ್ರಗಳನ್ನು ರಚಿಸಿದ ಸಹಸ್ರಾರು ವರ್ಷಗಳ ಹಿಂದಿನ ಕಾಲದಲ್ಲಿ, ಜಗತ್ತಿನ ವಿವಿಧ ಜನಾಂಗಗಳೊಂದಿಗೆ ಬೆರೆಯುವ-ಅಲ್ಲದೆ, ಮತ ಧರ್ಮ ಭಾಷ ಲೌಕಿಕನೀತಿ ಮುಂತಾದುವುಗಳಲ್ಲ ಲೇಶಮಾತ್ರವೂ ಸಂಬಂಧವಿಲ್ಲದ ಖಂಡಾಂತರಗಳವರ ಕಾಲ್ತುಳಿತಕ್ಕೆ ಒಳಪಟ್ಟಿರುವಂತಹ ದುಸ್ಥಿತಿಯು ನಮ್ಮವರಿಗೆ ಪ್ರಾಪ್ತಿಸಿದ್ದಿತೆ ಎಂಬುದನ್ನು ನಮ್ಮಲ್ಲಿ ಯಾರೂ ಗಮನಿಸುವುದೇ ಇಲ್ಲ! ಉತ್ತಮನಿಂದ ಮೊದಲುಗೊಂಡು ಕನಿಷ್ಠನವರೆಗೆ, ನಿತ್ಯಾಚರಣೆಯಲ್ಲ-ಅವರು ಅಷ್ಟು ಮುಖ್ಯವೆಂದು ಹೇಳುವ-ಶಾಸ್ತ್ರೋಕ್ತಿಗಳನ್ನನುಸರಿಸಿ ಎಷ್ಟ ಮಂದಿ ನಡೆಯುವರೆಂದು ಅಂಜನ ಹಾಕಿಕೊಂಡು ಹುಡುಕತೊಡಗಿದರ, ಲಕ್ಷಕ್ಕೊಬ್ಬನು ಸಿಕ್ಕರೆ ನಾವು ಧನ್ಯರೆಂದುಕೊಂಡೇವು! ಆದರೂ ಅಭಿವೃದ್ಧಿ ಮಾರ್ಗ

ವನ್ನು ಕುರಿತು ಯೋಚಿಸತೊಡಗಿದಾಗ ಮಾತ್ರ ಶಾಸ್ತ್ರ ವಚನವು, ನಳರಾಜ
ನಿಗೆದುರು ಬಿದ್ದ ಕಾರ್ಕೋಟಕನಂತೆ-ತಪ್ಪದೆ ಅಡ್ಡ ಬಂದು, ಮಾರ್ಗಕಟ್ಟಿ
ಮಲಗಿ ಬಿಡುವುದು. ಇದನ್ನೂ ದಾಟಿ ಮುಂದೆ ನಡೆದರ, ನೂರಾರು
ಜಾತಿಗಳು, ಸಹಸ್ರಾರು ಪಂಗಡಗಳು, ಒಬ್ಬರಿಗೊಬ್ಬರಿಗೆ ಸಂಬಂಧವಿಲ್ಲ-
ಬಳಕೆಯಿಲ್ಲ, ಸ್ನೇಹ ಸೌಜನ್ಯಾದಿಗಳುಂಟಾಗವು. ಈ ಜಾತಿ ಮತ ಪಂಗಡ
ಗಳ ಗಲಭೆಯಿಂದ ಸಹಾಯ ಮಾಡುವುದಕ್ಕಲ್ಲ-ಸಹಾಯ ಹೊಂದುವುದಕ್ಕೆ
ಸಹ ಜನರು ಧೈರ್ಯ ಮಾಡಿ ಮುಂದರಿದು ಬರರು. ಹಾಗೆ ಬಂದರೆ ಕುಲ
ಸ್ಥರು ಹೊರಗೆ ಹಾಕುವರೆಂಬ ಭಯ! ಈ ತೊಂದರೆಯನ್ನೂ ಹೇಗಾದರೂ
ನೀಗಬಹುದೆಂದರೆ, ಮುಂದಿರುವುದು ದೊಡ್ಡ ದ್ರವ್ಯಾಭಾವ! ನಮ್ಮಲ್ಲಿ,
ಅಧಿಕಾರದ ದಂಭ ದರ್ಪಗಳಿಗೆ ಬೆದರಿ,-ಅಥವ ಕೀರ್ತಿ ಪ್ರತಿಷ್ಠೆ ಬಿರುದು
ಬಹುಮತಿಗಳ ಅಪೇಕ್ಷೆಯಿಂದ ದ್ರವ್ಯವನ್ನು ದುಂದು ದುರ್ವ್ಯಯಗಳಿಂದ
ಸೂರೆಗೊಳಿಸುವ ಲಕ್ಷ್ಮೀಪುತ್ರರೇ ಬಹುಮಂದಿಯಲ್ಲದೆ, ಕಾರ್ಯ
ಗೌರವ, ಅದರಿಂದುಂಟಾಗುವ ಪ್ರಯೋಜನ, ತನ್ನ ದ್ರವ್ಯದ ಸಾರ್ಥಕತೆ
ಮುಂತಾದುವುಗಳನ್ನು ಕುರಿತು ದೀರ್ಘವಾಗಿ ಯೋಚಿಸಿ ಈಶ್ವರಾರ್ಪಣ
ಬುದ್ಧಿಯಿಂದ ದೇಶಸೇವೆಗೆಂದು ದ್ರವ್ಯಸಹಾಯ ಮಾಡಿ ಅಂತಹ ಕಾರ್ಯ
ಗಳನ್ನು ಉತ್ತೇಜನಗೊಳಿಸುವ ಮಹಾನುಭಾವರು ಅತ್ಯಲ್ಪವೆಂದೇ, ಬಹು
ದುಃಖದಿಂದ ಹೇಳಬೇಕಾಗಿದೆ. ನಮ್ಮ ದೇಶದಲ್ಲಿ ವಿದ್ಯಾವಂತರಿಲ್ಲದಿಲ್ಲ,
ಧನವಂತರಿಲ್ಲದಿಲ್ಲ, ಶ್ರೀಮಂತರಿಗೆ ಕೊರತೆಯಿಲ್ಲ. ಆದರೆ ಅವರಲ್ಲನೇಕರಿಗೆ
ಸ್ವದೇಶ ಸ್ವಭಾಷೆ ಸ್ವಜನ ಇವರಲ್ಲಿ ಅಭಿಮಾನವಾಗಲೀ, ಅವುಗಳ ಅಭಿವೃದ್ಧಿ
ಯಲ್ಲಿ ಅಭಿಲಾಷೆಯಾಗಲೀ. ಇಲ್ಲದಿರುವುದರಿಂದ-ಪಿತ್ರಾರ್ಜಿತ ಆಸ್ತಿಯ
ಆಧಾರವಿಲ್ಲದೆ ನಿಷ್ಕಾಮ ಬುದ್ಧಿಯಿಂದ ಸಾರ್ವಜನಿಕ ಸೇವೆಗೆ ಹೊರಡ
ತಕ್ಕವನು "ಪರೋಪಕಾರಿ-ಲೋಕಹಿತಕಾರಿ" ಎಂಬ ಸ್ತೋತ್ರಗಳಿಗಲ್ಲ-
"ಹುಚ್ಚ, ಮತಿಹೀನ-ಮನೆಗೆಮಾರಿ" ಎಂಬ ಅಪನಿಂದೆಗಳಿಗೆ ಗುರಿಯಾಗಿ,
ತನ್ನನ್ನು ನಂಬಿದವರನ್ನು ಭಿಕ್ಷೆಗೆ ಗುರಿಮಾಡುವುದು ತಪ್ಪದು. ಇದರಿಂದ
ಪರೋಪಕಾರ ಕಾರ್ಯಗಳಲ್ಲಿ ಧುರೀಣರಾಗಬಹುದಾದಷ್ಟು ಉತ್ಸಾಹ-
ಯೋಗ್ಯತೆಗಳನ್ನುಂಟಾಗಿರುವ ಅನೇಕಾನೇಕ ಮಂದಿ ಈ ಬಡತನದ ಭಯ
ದಿಂದ ಲೋಕ ದೃಷ್ಟಿಯಿಂದ ಮರೆಯಾಗಿ ಉದರನಿರ್ವಹಣ ಮಾಡುತ್ತಿರು
ವರು. ನಮ್ಮಲ್ಲಿಯ ಧನವಂತರು ಪ್ರಕೃತ ಲೋಕಸ್ಥಿತಿಯನ್ನು ಗಮನಿಸಿ,
ತಮ್ಮ ವಿಲಾಸಾದಿಗಳಿಗೆ ವೆಚ್ಚಿಸುವ ಮೊತ್ತದಲ್ಲಿ, ಒಂದು ಪಾದಾಂಶವನ್ನು
ಯಾವುದಾದರೊಂದು ಸತ್ಕಾರ್ಯಕ್ಕೆಂದು ವಿನಿಯೋಗಿಸಲು ಸಿದ್ಧರಾದರೆ,

ದೇಶಾಭಿವೃದ್ಧಿಕರವಾದ ಸತ್ಕಾರ್ಯಗಳು ಅನೇಕ ಮುಖವಾಗಿ ಅಭಿವೃದ್ಧಿಯಾಗುವುವು. ಮುಂದೆ ಬಂದು ಕೆಲಸ ಮಾಡಲು ಅನೇಕರು ಸಿದ್ಧರಾಗುವರು.

ಭಾರತ ದೇಶದಲ್ಲಿ ಈಗಿನಷ್ಟು ಮಟ್ಟಿಗಾದರೂ ಲೋಕಜಾಗೃತಿಯಿಲ್ಲದಿದ್ದ-ಈಗ್ಯೆ ಅರ್ಧ ಶತಮಾನದ ಹಿಂದೆ, ಈ ಬಗೆಯ ಕಾರ್ಯಕ್ಷೇತ್ರಕ್ಕಿಳಿದ ನಮ್ಮ ಕಥಾನಾಯಿಕೆಯು ಸಹಿಸಬೇಕಾಗಿ ಬಂದ ಕಷ್ಟ ದುಃಖ ಸಂಕಟ ಅಪನಿಂದೆ ಮನೋವ್ಯಧೆಗಳ ಪ್ರಮಾಣವನ್ನು ವರ್ಣಿಸುವುದು ಅಪ್ರಕೃತವು. ನಮ್ಮ ಕಥಾನಾಯಿಕೆಯಂತೆ ನಿಷ್ಕಾಮ ಭಾವದಿಂದ, ಈಶ ಸೇವೆಯೆಂದೇ ತಿಳಿದು ಈ ಬಗೆಯ ದೇಶಸೇವೆಗೆ ತೊಡಗಿರುವವರು, ಈ ಕಷ್ಟನಷ್ಟಗಳೆಲ್ಲವೂ ತಮ್ಮ ದಾರ್ಢ್ಯ ಪರೀಕ್ಷೆಗಾಗಿ ಬರುತ್ತವೆಯೆಂದು ತಿಳಿದು ಅಚಲರಾಗಿ ನಿಂತು ಮುಂದರಿವರಲ್ಲದೆ, ಅವುಗಳಿಗಂಜಿ ಹಿಂಜರಿಯರು. ಆದರೆ, ಅವರು ಕೈಕೊಳ್ಳುವ ಕಾರ್ಯಗಳಲ್ಲಿ ಸಹಾನುಭೂತಿ ತೋರಿಸುವರು, ಅಧಿಕ ಸಂಖ್ಯೆಯಿಂದ ದೊರೆತಷ್ಟೂ, ಅವರು ಹೊಸ ಹೊಸ ಮಾರ್ಗಗಳಲ್ಲಿ-ಇನ್ನೂ ಹೆಚ್ಚಾಗಿ ಜನಸೇವೆ ಮಾಡಲು ಅವಕಾಶವಾಗುವುದೆಂಬುದನ್ನು ಮಾತ್ರ ಯಾರೂ ಮರೆಯಬಾರದು.

ಈ ಬಗೆಯ ಸೇವಾ ಕಾರ್ಯದ ಮಹೋದ್ದೇಶ ಸಾಧನೆಗಾಗಿ, ಬ್ರಾಹ್ಮಣ ವರ್ಣದಲ್ಲಿ ಜನ್ಮವೆತ್ತಿದ ನಮ್ಮ ಕಥಾನಾಯಿಕೆಯು ಮತಾಂತರ ಹೊಂದಿ ಕ್ರೈಸ್ತಳಾದ ಸಂಗತಿಯು ಮಾತ್ರ ಕೆಲವರ ಮನಸ್ಸಿಗೆ ವಿಕಲ್ಪವೆನಿಸಬಹುದು. ಇದರ ಸಾಧಕ ಬಾಧಕ ವಿಚಾರವು ಗ್ರಂಥಪಠನೆಯಿಂದ ವ್ಯಕ್ತವಾಗುವುದು. ಹೇಗೂ ರಮಾಬಾಯಿಯು ಭಾರತ ಪುತ್ರಿಯು. ಭಾರತೀಯರ ಉದ್ಧಾರಕ್ಕಾಗಿ ಜೀವಾವಧಿ ಶ್ರಮಿಸಿದಳು. ಆದುದರಿಂದ ಆಕೆಯಲ್ಲಿ ತೋರಿಬಂದ ವಿದ್ಯಾವೈದುಷ್ಯಾದಿಗಳು, ಮಾನವಜಾತಿಯ ಮೇಲಿನ ಅವ್ಯಾಜಪ್ರೇಮ, ಸ್ವಜನಾಭಿಮಾನ, ಪರೋಪಕಾರ ಪರಾಯಣತೆ, ಕರ್ತವ್ಯನಿಷ್ಠೆ, ತ್ಯಾಗಗುಣ, ಭಗವದ್ಭಕ್ತಿ ಮುಂತಾದುವು ಅನುಕರಣೀಯ ಸದ್ಗುಣಗಳೆಂಬ ಭಾವನೆಯಿಂದ ಆ ಪುಣ್ಯಶೀಲಳ ಈ ಚರಿತ್ರೆಯನ್ನು ಕರ್ಣಾಟಕ ಭಾಂಧವರ ಮುಂದಿಟ್ಟಿದ್ದೇವೆ. ಯಥಾಪೂರ್ವವಾಗಿ ಇದನ್ನೂ ಸ್ವೀಕರಿಸಿ ಗ್ರಂಥಮಾಲೆಯನ್ನು ಪ್ರೋತ್ಸಾಹಿಸಬೇಕೆಂದು ಕೋರುತ್ತೇವೆ.

ಬೆಂಗಳೂರು ನಗರ.
ತಾ|| ೨೨—೧೦—೧೯೨೭

ಇತಿ ಸುಜನ ವಿಧೇಯ,
**ಯಂ. ರಾಮರಾವ್.**

॥ ಶ್ರೀರಾಮಸಹಾಯಂ ॥

ದೀನಜನೋದ್ಧಾರಕಳಾದ

ಪಂಡಿತಾ

# ರಮಾಬಾಯಿ ಸರಸ್ವತಿ



## ಅಧ್ಯಾಯ ೧ "ಅಂಕುರಾರ್ಪಣ"

"ಭಾರತದೇಶವು ನಮ್ಮ ಮಾತೃಭೂಮಿ" ಎಂಬ ನಿಶ್ಚಯಾಭಿಪ್ರಾಯವೂ ಅಭಿಮಾನವೂ ನಮ್ಮಲ್ಲಿದ್ದುದಾದರೆ, ಅದನ್ನು ಸಾರ್ಥಕಗೊಳಿಸುವಲ್ಲಿ ನಾವು ಯೋಗ್ಯತಾನುಸಾರ ಶ್ರಮಿಸದಿದ್ದರೆ ತೀರದು, ಎಂದರೆ ಮಾತೃಭೂಮಿಯ-ಅರ್ಥಾತ್ ಮಾತೃಭೂಮಿಯಲ್ಲಿ ವಾಸಿಸುವ ಜನತೆಯ ಸುಖದುಃಖಗಳು ಮಾನಾಪಮಾನಗಳು ಕಷ್ಟನಷ್ಟಗಳು ದಾರಿದ್ರ್ಯ ದುಸ್ಥಿತಿಗಳು ಮುಂತಾದುವುಗಳಲ್ಲಿ ಆತ್ಮೀಭಾವವನ್ನು ವಹಿಸದವನು ಮಾತೃಭಕ್ತನಾದ ಪುತ್ರನೆನಿಸಲಾರನು. ಶ್ರದ್ಧಾವಂತನಾದ ಪುತ್ರನು, ತನ್ನ ಮಾತೆಯ ಸೇವೆಯಲ್ಲಿ ತನುಮನ ಧನಗಳನ್ನರ್ಪಿಸಲು ಸಿದ್ಧನಿರುವನು. ಮಾತೃದೇವತೆಯ ಮಾನಸಂರಕ್ಷಣೆಯಲ್ಲಿ ಎದೆಯ ರಕ್ತವನ್ನು ಬಸಿಯಲೂ-ಕತ್ತಿಯ ಬಾಯಿಗೆ ಎದೆಯೊಡ್ಡಿ ನಿಲ್ಲಲೂ ಅವನು ಹಿಂಜರಿಯನು. ಹಾಗೆ ದೇಶಮಾತೆಗಾಗಿ ಪ್ರಾಣ ಕೊಡುವವನು ಮಾತ್ರವೇ ಅಲ್ಲ; ಬದುಕಿ ಅಸಹನೀಯ ಕಷ್ಟನಷ್ಟಗಳಿಗೂ ಹಿಂಜರಿಯದೆ, ಸರ್ವ ಸ್ವಾರ್ಥತೆಯನ್ನೂ ತ್ಯಾಗ ಮಾಡಿ ಯಾವನು ಸೇವೆ ಮಾಡಲು ಸಿದ್ಧನಿರುವನೋ ಅವನು ಧೀರನಾದ ಮಾತೃಭಕ್ತನೆಂಬ ಕೀರ್ತಿಗೆ ಪಾತ್ರನಿರುವನು.

ದೇಶಸೇವೆ ಮಾಡಬೇಕೆಂದರೆ ಒಂದೇ ಮಾರ್ಗವಲ್ಲ,-ಅನೇಕ ಮಾರ್ಗಗಳಿವೆ. ಚಕ್ರವರ್ತಿಯಿಂದ ತಳವಾರನವರೆಗೂ ರಾಜ್ಯಾಂಗದ ಪ್ರತಿಯೊಬ್ಬ ವ್ಯಕ್ತಿಯೂ, ಲಕ್ಷಾಧಿಪತಿಯಿಂದ ಭಿಕ್ಷುಕನವರೆಗಿನ ಜನಾಂಗದ ಪ್ರತಿಯೊಬ್ಬ ವ್ಯಕ್ತಿಯೂ, ದೇಶಸೇವೆ ಮಾಡಲು ಅವಕಾಶವುಂಟು. "ಕೇವಲ ಸಾವಿರಸಾವಿರವಾಗಿ ಧನವನ್ನು ಕೊಟ್ಟರೆ ಮಾತ್ರ ದೇಶಸೇವೆ ಮಾಡಿದಂತಾಗುವುದು" ಎಂಬ ಭಾವನೆಯು ಯಾರಿಗೂ ಇರಬಾರದು. ಅಥವ "ಯುದ್ಧಕ್ಕೆ ನಡೆದು ಶತ್ರುವಿನ ಕರಕೃಪಾಣಕ್ಕೆ ತಲೆಯನ್ನು ತೆರೆವುದು ಮಾತ್ರವೇ ದೇಶಸೇವೆ" ಎಂಬುದೂ ತಕ್ಕುದಲ್ಲ! ಆ ಕಾರ್ಯಗಳು ದೇಶಸೇವೆಯಲ್ಲಿ ಪರಮಾವಧಿ ಕಾರ್ಯಗಳಾಗಬಹುದು. ಅವುಗಳನ್ನು ಪ್ರತಿಯೊಬ್ಬನೂ ಸದಾಕಾಲವೂ ಆಚರಿಸಲು ಸಾಧ್ಯವಿಲ್ಲದಿದ್ದರೂ, ಸಮಯ ಬಂದಾಗ ಆ ರೀತಿ ಮಾಡಲು ಪ್ರತಿಯೊಬ್ಬನೂ ಸಿದ್ಧನಾಗಿರತಕ್ಕುದು ಅವನ ಕರ್ತವ್ಯವು! ಸಾಮಾನ್ಯ ದಿನಚರಿಯಲ್ಲಿ ಜನಾಂಗದ ಪ್ರತಿಯೊಬ್ಬ ವ್ಯಕ್ತಿಯೂ ಮಾಡತಕ್ಕ ವ್ಯವಸಾಯ ಪಶುಪಾಲನೆ ವ್ಯಾಪಾರ ಕೈಕಲಸಗಳು ರಾಜ್ಯಾಂಗ ವೃತ್ತಿ (ಸರ್ಕಾರಿಯ ನೌಕರಿ) ಸಂಗೀತ ಸಾಹಿತ್ಯಾದಿ ಕಲಾಭ್ಯಾಸ, ಗ್ರಂಥ ರಚನೆ ಮುಂತಾದ ಪ್ರತಿಯೊಂದು ವೃತ್ತಿಯೂ ದೇಶಸೇವೆಯಲ್ಲದೆ ಬೇರೇನೂ ಅಲ್ಲ.—ಆಯಾ ವೃತ್ತಿಗಳನ್ನು ಈಗ ಮಾಡತಕ್ಕವರು ಅವುಗಳನ್ನು ಕೇವಲ ತಮ್ಮ ಉದರ ಭರಣ ಅಥವ ಕುಟುಂಬ ಭರಣಕ್ಕಾಗಿ ಮಾಡುತ್ತಿರುವೆವೆಂಬ ಸ್ವಾರ್ಥ ಭಾವನೆಯಿಂದ ಕೂಡಿರುವರಲ್ಲದೆ, ತಾವು ಮಾಡುತ್ತಿರುವ ಆ ಉದ್ಯೋಗವು ಜನಸೇವೆ ಅರ್ಥಾತ್ ದೇಶಸೇವೆ ಎಂಬ ಭಾವನೆಯಿಂದಲಲ್ಲ! ದೇಶಸೇವೆ ಎಂದು ಹೇಳಿಕೊಂಡರೂ, ಹೇಳಿಕೊಳ್ಳದಿದ್ದರೂ ಆ ಕೆಲಸಗಳನ್ನೇನೋ ಅವರು ಮಾಡೇ ಮಾಡುವರಲ್ಲವೆ! ಆದರ, ಅವರು ತಮ್ಮ ಉದರ ಅಥವ ಕುಟುಂಬಭರಣಕ್ಕಾಗಿ ಮಾಡಿಯೇ ತೀರಬೇಕಾಗಿರುವ ಆ ಕೆಲಸಗಳನ್ನೇ 'ದೇಶಸೇವೆ' ಎಂಬ ಭಾವನಾವ್ಯತ್ಯಾಸದಿಂದ ಮಾತ್ರ ಮಾಡತೊಡಗಿದರೆ, ಅದರಿಂದ ಈಗ ಆಗುತ್ತಿರುವುದಕ್ಕಿಂತಲೂ ಹತ್ತರಷ್ಟು ಫಲವಾಗುವುದು. ಈ ಭಾವನಾವ್ಯತ್ಯಾಸದಿಂದ ಕೆಲಸ ಮಾಡುವವನಲ್ಲಿ "ಕೇವಲ ತಾನು ಮತ್ತು ತನ್ನ ಬೊಜ್ಜು ಅಥವ ತಾನು-ತನ್ನಕುಟುಂಬ" ಎಂಬ ಸಂಕುಚಿತ ಭಾವವು ನಾಶವಾಗಿ ದೃಷ್ಟಿಯು ವಿಸ್ತಾರವಾಗುವುದು.

ಸ್ವಾರ್ಥತೆಯು ಕಡಮೆಯಾಗುವುದು. ತ್ಯಾಗಬುದ್ಧಿ ಪರೋಪಕಾರ ಬುದ್ಧಿಗಳು ಅಂಕುರಿಸುವುವು. ಪರರ ಕಷ್ಟ ದುಃಖಗಳೆಂದರೆ ಮರುಗುವ ದಯಾ ಗುಣವು ಮೊಳೆದೋರುವುದು. ಇದರಿಂದ ಆಗುವ ಮತ್ತೊಂದು ದೊಡ್ಡ ಪ್ರಯೋಜನವುಂಟು. ಒಬ್ಬನು ತನಗಾಗಿ ಎಂದರೆ ಸ್ವಾರ್ಥ ಸಾಧನೆಗಾಗಿ ಒಂದು ಕೆಲಸ ಮಾಡುತ್ತೇನೆಂಬ ಭಾವನೆಯಿರುವವರೆಗೂ ಆ ಕಾರ್ಯ ಸಂಬಂಧದ ಸಮಸ್ತ ಭಾರವೂ ಅವನ ತಲೆಯಮೇಲೆ ಹೊತ್ತಂತಿರುವುದು,- ಎದೆಯಮೇಲೆ ದೊಡ್ಡ ಪರ್ವತವೇ ಕುಳಿತಂತಿರುವುದು ಆದರೆ ಅವನಲ್ಲಿ "ತಾನು ಮಾಡುತ್ತಿರುವ ಕಾರ್ಯವು ಕೇವಲ ಸ್ವಾರ್ಥ ಸಾಧನೆಗಾಗಿಯಲ್ಲ- ದೇಶಕ್ಕಾಗಿ, ದೇಶಾಭಿವೃದ್ಧಿಗಾಗಿ, ತನ್ನ ಮಾತೃಭೂಮಿಯ ಸೇವೆಗಾಗಿ" ಎಂಬ ಭಾವನೆಯು ಮಾತ್ರ ಉಂಟಾಗಿ ದೃಢಪಡಲಿ! ಒಡನೆಯೇ ತನ್ನೊಬ್ಬನ ಎದೆಯ ಮೇಲಿದ್ದ ಅಷ್ಟು ಭಾರವನ್ನೂ ವಿಶಾಲವಾದ ದೇಶದಮೇಲೆ ಹಂಚಿ ಇಟ್ಟಂತಾಗಿ ಹಗುರ ತೋರುವುದು. ಈ ಅರ್ಥವನ್ನು ಹೇಳುವುದಕ್ಕಾಗಿಯೇ ಶ್ರೀ ದಾಸರಾಯರು "ಸಕಲ ಕಾರ್ಯಗಳನ್ನೂ 'ಶ್ರೀ ಹರಿ ಸೇವೆ' ಎಂಬ ಭಾವನೆಯಿಂದ ಮಾಡು" ಎಂದಿರುವರು.

ಆದರೆ ಈ ಸ್ಥಿತಿಯು ನೆನೆಸಿಕೊಂಡೊಡನೆಯೇ ಪ್ರಾಪ್ತಿಸದು. ಅದಕ್ಕೂ ಸಾಧನೆ ಬೇಕು. ಆ ಸಾಧನೆಯನ್ನು ಹೀಗೆ ಆರಂಭಿಸಬಹುದು. ಭಾರತ ದೇಶದಲ್ಲಿ ಮೂವತ್ತೂರು ಕೋಟಿ ಪ್ರಜಾ ಸಂಖ್ಯೆಯುಂಟಲ್ಲವೆ! ಅಷ್ಟು ಪ್ರಜಾ ಸಂಖ್ಯೆಯೂ, ಮತ್ತು ಅಸಂಖ್ಯ ಪಶು ಪಕ್ಷಿ ಮೃಗಾದಿ ಪ್ರಾಣಿ ವರ್ಗಗಳೂ ಇಲ್ಲದೆ ಕೇವಲ ಪರ್ವತ ವೃಕ್ಷ ಕೆರೆ ನದಿಗಳು-ಕಾಡು ಮೇಡು ಗಳುಮಾತ್ರವಿದ್ದರೆ ಆಗ ಅದನ್ನು ದೇಶವೆಂದು ಗಮನಿಸುತ್ತಿದ್ದವರು ಯಾರು? ಆದುದರಿಂದ ಸದ್ಯಃ ದೇಶದಲ್ಲಿರುವ ಪ್ರಜಾಸಂಖ್ಯೆ ಪಶುಪಕ್ಷಿ ತೃಣತರುಗುಲ್ಮಾದಿಗಳೆಲ್ಲವೂ ತಮ್ಮ ಮಾತೃಭೂಮಿಯ ಪ್ರಾಣವೆಂಬ ಭಾವನೆಯು ಮೊದಲು ಮನಸ್ಸಿನಲ್ಲಿ ಉತ್ಪನ್ನವಾಗಲಿ! ತಮಗೆ ಜನ್ಮವಿತ್ತ ಈ ದೇಶ ಮಾತೆಯ ಪ್ರಾಣಸ್ವರೂಪವಾದ ಈ ಪ್ರಜಾ ಪಶುಪಕ್ಷಿ ತೃಣತರುಗುಲ್ಮಾದಿ ಗಳ ಸುಸ್ಥಿತಿಗಾಗಿ ತಾನು ಕೈಕೊಂಡಿರುವ ಯಾವುದೊಂದು ಕಾರ್ಯವೂ ಆ ಮಾತೃಸೇವೆಯೇ ಎಂಬ ಭಾವನೆಯು ಉದಯಿಸಲಿ! ಆ ಸೇವಾ ಕಾರ್ಯ ವನ್ನು ಒಬ್ಬನು ಬ್ರಾಹ್ಮಣನಾಗಿ ಬುದ್ಧಿ ಶಕ್ತಿಯಿಂದ ಎಂದರೆ, ಧರ್ಮ

ಬೋಧೆ ವಿದ್ಯಾದಾನ ಶಾಸ್ತ್ರವಿಚಾರ ಗ್ರಂಥರಚನೆ ಕವಿತಾಲೇಖನ ಸಂಗೀತ ಸಾಹಿತ್ಯಾದಿಕುಶಲಕಲಾವ್ಯವಸಾಯ ಮುಂತಾದುವುಗಳ ಮೂಲಕ ಮಾಡ ಬಹುದು. ಇನ್ನೊಬ್ಬನು ಕ್ಷತ್ರಿಯನಾಗಿ ಕಾಯಶಕ್ತಿಯನ್ನುಪಯೋಗಿಸಿ ಕತ್ತಿಯನ್ನು ಹಿಡಿದು ತನ್ನಾ ಜನನಿಯ ಮಾನ ಪ್ರಾಣಗಳ ರಕ್ಷಣೆಗಾಗಿ ಅರಿಗಳೊಂದಿಗೆ ಹೋರಾಡಬಹುದು. ದೇಶದಲ್ಲಿ ಹಾವಳಿ ಮಾಡುವ ಕಳ್ಳ ಕಾಕರನ್ನೂ ಪುಂಡುಪೋಕರಿಗಳನ್ನೂ ಅಡಗಿಸಬಹುದು. ಅಶಕ್ತರಿಗೂ ಅನಾಥರಿಗೂ ಅಬಲೆಯರಿಗೂ ಬೆಂಬಲನಾಗಿ ರಕ್ಷಿಸಬಹುದು. ಭೀತರನ್ನು ಕಾಪಾಡಬಹುದು. ಆರ್ತರ ಪ್ರಾಣರಕ್ಷಕನಾಗಬಹುದು. ಮತ್ತೊಬ್ಬನು ವೈಶ್ಯನಾಗಿ ಆರ್ಥಿಕ ಬಲದಿಂದ ತನ್ನಾ ಮಾತೆಯ ಉದರ ಸೇವೆಗಾಗಿ ವಿವಿಧ ದವಸ ಧಾನ್ಯಗಳನ್ನು ಬೆಳೆದು ದೇಶದ ಎಲ್ಲಾ ಭಾಗಕ್ಕೂ ಒದಗಿಸಬಹುದು. ಆಕೆಯ ಸುರಕ್ಷಣೆಗಾಗಿ ಧನಸಂಗ್ರಹಣ ಮಾಡಬಹುದು. ಆಕೆಯ ಸೌಂದರ್ಯಾಭಿವೃದ್ಧಿಗಾಗಿ ವಿವಿಧ ಕಲಾಕುಶಲತೆಗಳಿಗೆ ಪ್ರೋತ್ಸಾಹ ಕೊಡಬಹುದು. ಛತ್ರ ಮಠ ದೇವಾಲಯಾದಿಗಳನ್ನೂ ಕೆರೆಕೊಳಗಳನ್ನೂ ಸ್ಥಾಪಿಸಬಹುದು. ವ್ಯವಸಾಯ ವ್ಯಾಪಾರ ಪಶುಪಾಲನೆ ಮುಂತಾದ ವಿವಿಧ ವೃತ್ತಿ ವಿಶೇಷಗಳನ್ನು ಉತ್ತೇಜನಗೊಳಿಸಿ ಅಭಿವೃದ್ಧಿ ಪಡಿಸಬಹುದು. ಮೇಲ್ಕಂಡಂತೆ ಬುದ್ಧಿಶಕ್ತಿ (ಬ್ರಾಹ್ಮಣ) ಕಾಯಶಕ್ತಿ ಧೈರ್ಯ ಸಾಹಸಾದಿ ಗಳು (ಕ್ಷತ್ರಿಯ) ಧನಸಂಗ್ರಹಣ (ವೈಶ್ಯ) ಈ ಮೂರರಲ್ಲೂ ಅಶಕ್ತರೆಂದೆ ನಿಸಬಹುದಾದ ಅಪ್ರಬುದ್ಧರು ಹಿರಿಯ ಅಣ್ಣಂದಿರಂತಿರುವ ಮೇಲಿನ ಮೂರು ವರ್ಗದವರು ಹೇಳುವ ಕೆಲಸಗಳನ್ನು ಮಾಡುತ್ತಾ, ಈ ಬಗೆಯ ವಿಶ್ವ ಕುಟುಂಬದ ಸುರಕ್ಷಣೆಗಾಗಿ ಸಹಾಯ ಮಾಡಬಹುದು. ಹೀಗೆ "ಆದ್ಯಂತ ದೇಶವೂ ದೊಡ್ಡದೊಂದು ಕುಟುಂಬ'' ವೆಂಬ ಭಾವನೆಯು ನಮ್ಮಲ್ಲಿ ತೋರಿ ಬಂದೊಡನೆಯೇ ಒಳಜಗಳ ಕದನಗಳೂ, ಶ್ರೇಷ್ಠಾ ಶ್ರೇಷ್ಠತೆಗಳಿಗಾಗಿ ಒದ್ದಾಡುವ ಅಲ್ಪ ಭಾವಗಳೂ ನಾಶವಾಗಿ ಐಕಮತ್ಯವು ಪ್ರಬಲಿಸುವುದು. "ಪ್ರಪಂಚದಲ್ಲಿ ನಾನೊಬ್ಬನೇ ಅಸಹಾಯನಾಗಿ ನಿಲ್ಲ ಬೇಕಾಗಿಲ್ಲ; ನನ್ನೊಂದಿಗೆ ಭಾರತೀಯ ಜನತೆಯೇ ಇದೆ'' ಎಂಬೊಂದು ಕೇವಲ ಭಾವನೆಯೇ ದೊಡ್ಡ ಬೆಂಬಲವಾಗಿದ್ದು ನಿರ್ಭೀತತೆಯು ಕಂಡು ಬರುವುದು. ತನ್ನವನೇ-ತನ್ನ ದೇಶೀಯನೇ ಆದ ಭಾರತೀಯನಲ್ಲಿ ಇವನು

ಉತ್ತರ ದೇಶೀಯನು, ಇವನು ದಾಕ್ಷಿಣಾತ್ಯನು, ಇವನು ಬಂಗಾಳಾ ದೇಶೀಯನು, ಇನ್ನೊಬ್ಬನು ಆಂಧ್ರನು ಬೇರೊಬ್ಬನು ಮರಾಟನು.—ಗುಜರಾತಿಯು ಎಂಬ ಭೇದಭಾವಗಳು ಸಹ ತೋರಿಬರಲಾರವು. "ನಮ್ಮೆಲ್ಲರದೂ ಆದ್ಯಂತ ಒಂದು ಕುಟುಂಬ" ವೆಂಬ ಭಾವನೆಯು, ದೇಹದ ಒಂದು ಭಾಗಕ್ಕೆ ಅಪಾಯ ಉಂಟಾದೊಡನೆಯೇ ಆ ಭಾಗಕ್ಕೆ ಕಣ್ಣು ಕೈಕಾಲುಗಳು ಮನಸ್ಸು ಬುದ್ಧಿ ಮುಂತಾದ ಎಲ್ಲಾ ಜ್ಞಾನೇಂದ್ರಿಯ ಕರಣೇಂದ್ರಿಯಗಳೂ ಹೇಗೆ ಒದುವುವೋ ಹಾಗೆಯೇ ದೇಶದ ಒಂದು ಭಾಗಕ್ಕೆ ಅಪಾಯ ಉಂಟಾದೊಡನೆಯೇ ಆ ಪ್ರದೇಶಕ್ಕೆ ಸಮಸ್ತರ ದೃಷ್ಟಿಯನ್ನೂ ಆಕರ್ಷಿಸುವುದು. ಲಕ್ಷಾಂತರ ಜನಗಳ ವಿವಿಧ ಮುಖವಾದ ಸಹಾಯವು ಏಕಕಾಲಕ್ಕೆ ಒದಗುವುದರಿಂದ ಪರ್ವತದಂತೆ ಪ್ರಾಪ್ತವಾದ ಆಪತ್ತು ತಿಳಿಮಂಜಿನಂತೆ ಕರಗಿಹೋಗುವುದು. ಸುಖಸಮೃದ್ಧಿಗಳು ಹೆಚ್ಚುವುವು. ನಮ್ಮ ದೇಶಮಾತೆಯು ಸುಖಸೌಭಾಗ್ಯಗಳಿಂದ ಸರಿಯುವರಲ್ಲಿ ಗೌರವಸ್ಥಳಾಗಿ-ಪ್ರಪಂಚದ ಹತ್ತು ಮಂದಿಯಲ್ಲಿ ತಲೆಯೆತ್ತಿಕೊಂಡು ಧೈರ್ಯವಾಗಿ ನಿಂತು, ತನ್ನ ಪ್ರತಿಭೆಯನ್ನು ಪ್ರಕಾಶಗೊಳಿಸುವಳು. ಮತ್ತು ತನ್ನ ಸುಸ್ಥಿತಿಗೆ ಸಹಾಯಕರಾದ ತನ್ನ ಪುತ್ರೀಪುತ್ರರನ್ನೂ ಆಶೀರ್ವದಿಸುವಳು. ಈ ಮಹತ್ಕಾರ್ಯ ಸಾಧನೆಗಾಗಿ ಯಾರೂ ತಮ್ಮ ಊರು ಗ್ರಾಮ ಮನೆ ಮಠಗಳನ್ನು ಬಿಡಬೇಕಾದುದಿಲ್ಲ. ಹೆಂಡಿರು ಮಕ್ಕಳನ್ನು ಬಿಟ್ಟು ಊರೂರು ಅಲೆಯಬೇಕಾದುದಿಲ್ಲ. ದ್ರವ್ಯ ಭೂಮಿ ಕಾಣಿಗಳನ್ನು ನೀಗಿ ಪರದೇಶಿಗಳಾಗಬೇಕಾದುದಿಲ್ಲ. ಆದರೆ ಪ್ರತಿಯೊಬ್ಬನೂ ತಾನು ಮಾಡುವ ಕಾರ್ಯವನ್ನು, ಅದು ಸರಕಾರಿಯ ನೌಕರಿಯಾಗಿರಲಿ, ವ್ಯಾಪಾರವಾಗಿರಲಿ, ಕೈಗಾರಿಕೆಯಾಗಿರಲಿ, ಅಥವ ಕೂಲಿಯಾಗಿರಲಿ, ಅಲ್ಲದೆ ಅದು ಎಷ್ಟು ಕ್ಷುದ್ರವಾದ ವೃತ್ತಿಯಾದರೂ ಆಗಿರಲಿ ಅದನ್ನು ನಿಷ್ಕಾಮ ಭಾವದಿಂದ-ದೇಶಹಿತ ಭಾವನೆಯಿಂದ ಮಾಡತೊಡಗಬೇಕು , ಅಷ್ಟೆ ! ಅದೇ ದೊಡ್ಡ ದೇಶಸೇವೆಯಾಗುವುದು. ಅಷ್ಟು ಮಾತ್ರ ಸಿದ್ಧಿಸಿತೆಂದರೆ, ಅದರ ಮುಂದಿನ ಮೆಟ್ಟಿಲು ತಾನೇ ಗೋಚರಿಸುವುದು.

ಇಂತಹ ದೇಶಹಿತ ಸಾಧನಾ ಕಾರ್ಯವನ್ನು ನಿಷ್ಕಾಮ ಭಾವದಿಂದ ಕೈಕೊಂಡು ನಡೆಯಿಸಿದ ಮಹಾಮಹಿಮರು ಎಷ್ಟೋ ಮಂದಿ ನಮ್ಮ

ಈ ಮಾತೃಭೂಮಿಯ ಗರ್ಭದಲ್ಲಿ ಜನಿಸಿದರು, ಜನಿಸಿರುವರು; ಜನಿಸಲಿರುವರು. ಅಂಥವರಲ್ಲಿ ನಮ್ಮ ಕಥಾನಾಯಿಕೆಯು ಅನಾಥ ಪೋಷಣೆ ಆರ್ತಜನರಕ್ಷಣೆ ವಿದ್ಯಾದಾನ ಮುಂತಾದ ಮಾರ್ಗಗಳಿಂದ ಸ್ವಜನ ಸೇವೆ ಮಾಡಿ ಮೇಲ್ಕಂಡ ಅಂತಹ ಸೇವೆಗಳೆಂಬ ಪುಷ್ಪಗುಚ್ಛಗಳಿಂದ ಮಾತೃವಿಗ್ರಹವನ್ನು ಆರಾಧಿಸಿ ಕೀರ್ತಿಶೇಷಳಾದಳು. ಆಕೆಯ ಚರಿತ್ರೆಯು ಇಂತು ಸಂಕ್ಷೇಪವಾಗಿ ಹೇಳಲ್ಪಡುತ್ತಗೆ!—

ದಕ್ಷಿಣ ಹಿಂದೂಸ್ಥಾನದ ಪಶ್ಚಿಮ ಪ್ರಾಂತದಲ್ಲಿ ಪಶ್ಚಿಮ ಘಟ್ಟಗಳಿವೆಯಷ್ಟೆ! ಅವುಗಳ ಪಾದ ಪ್ರದೇಶದಲ್ಲಿರುವ ಸಮತಳವಾದ ಭೂಭಾಗಕ್ಕೆ ಕೊಂಕಣವೆಂದು ಹೆಸರು. ಈ ಪಶ್ಚಿಮಘಟ್ಟ ಪ್ರಾಂತವನ್ನೇ ಅನುಸರಿಸಿಕೊಂಡು ಇನ್ನೂ ದಕ್ಷಿಣಕ್ಕೆ ಬಂದರೆ ಮಂಗಳೂರು ಮಂಡಲ (ಡಿಸ್ಟ್ರಿಕ್ಟ್-ಜಿಲ್ಲಾ)ವು ಸಿಕ್ಕುತ್ತದೆ. ಈ ಮಂಗಳೂರು ಮಂಡಲದಲ್ಲಿ ೧೯ ನಯ ಶತಮಾನದ ಆರಂಭದಲ್ಲಿ ಅನಂತ ಶಾಸ್ತ್ರಿ ಡೋಂಗ್ರೆ ಎಂಬೊಬ್ಬ ಚಿತ್ಪಾವನ್ ಕುಲಕ್ಕೆ ಸೇರಿದ ಬ್ರಾಹ್ಮಣನು ವಾಸವಾಗಿದ್ದನು ಈತನು ತನ್ನ ಬಾಲ್ಯದಲ್ಲಿ ವಿದ್ಯಾಭ್ಯಾಸಕ್ಕಾಗಿ ಕೆಲವರ್ಷಕಾಲ ಪೂನಾ ಪಟ್ಟಣದಲ್ಲಿ ವಾಸಿಸಿ, ಗುರುವಿನಲ್ಲಿ ಶಾಸ್ತ್ರ ಗ್ರಂಥಗಳನ್ನು ಓದಿ ತನ್ನ ನಿರಲಸಿಕೆ, ಸೂಕ್ಷ್ಮಮತಿ, ಜ್ಞಾಪಕಶಕ್ತಿ, ವಿಚಾರಪ್ರಜ್ಞೆ ಮುಂತಾದುವುಗಳಿಂದ ಗುರುವಿನ ಪ್ರೀತಿಗೆ ಪಾತ್ರನಾದನು. ಗುರುವು ತನ್ನ ಶಿಷ್ಯನ ಪ್ರತಿಭೆಗಾಗಿ ಪರಮಾನಂದಪಟ್ಟು 'ಶಾಸ್ತ್ರಿ' ಎಂಬ ಅನ್ವರ್ಥ ನಾಮದಿಂದ ತನ್ನ ಶಿಷ್ಯನನ್ನು ಸಂಬೋಧಿಸುತ್ತಿದ್ದನು. ಅನಂತ ಶಾಸ್ತ್ರಿಯು ಈ ಗುರುವು ಆ ಕಾಲದ ಸಂಸ್ಕೃತ ವಿದ್ವಾಂಸರಲ್ಲೆಲ್ಲಾ ಬಹು ಶ್ರುತನೆಂದೂ ಉದಾರಿಯೆಂದೂ ಪ್ರತಿಷ್ಠೆಯುನ್ನುಂಟಾಗಿದ್ದುದರಿಂದ, ೧೭೯೬ ರಿಂದ ೧೮೧೮ ರವರಗೆ ಪೂನಾ ಪಟ್ಟಣದಲ್ಲ ಮಹಾರಾಷ್ಟ್ರರ ಆಧಿಪತ್ಯವನ್ನು ನಡೆಯಿಸಿದ ಪೇಷ್ವೆ ಎರಡನೇ ಬಾಜೀರಾಯನ ಪತ್ನಿ ವಾರಣಾಸಿಬಾಯಿ ಎಂಬ ಸಾಧ್ವೀಮಣಿಗೆ ಸಂಸ್ಕೃತ ವಿದ್ಯಾಭ್ಯಾಸ ಮಾಡಿಸಲು ನಿಯಮಿತನಾಗಿದ್ದನು.

"ಸ್ತ್ರೀಯರು ವಿದ್ಯೆಯನ್ನು ಕಲಿಯುವುದೇ ಸಲ್ಲದು. ಅದರಲ್ಲೂ ಭಾರತೀಯರ ಸಕಲ ಧರ್ಮ ಗ್ರಂಥಗಳೂ ಬರಯಲ್ಪಟ್ಟಿರುವ ಸಂಸ್ಕೃತ ಭಾಷೆಯನ್ನಂತೂ ಅವರು ಸ್ವಪ್ನದಲ್ಲೂ ತಿಳಿಯಬಾರದು" ಎಂಬ ಭಾವನೆಯು

ಸರ್ವತ್ರ ಪ್ರಚಾರವಿದ್ದ ಆ ಕಾಲದಲ್ಲಿ, ವೃದ್ಧನಾದ ತನ್ನ ಗುರುವು, ರಾಜಸ್ತ್ರೀಯಾದ ವಾರಣಾಸಿಬಾಯಿಗೆ ಆ ದೇವ ಭಾಷೆಯಲ್ಲಿ ಶಿಕ್ಷಣ ಕೊಡುತ್ತಿದ್ದುದು ನಮ್ಮ ಚಿಕ್ಕ ವಯಸ್ಸಿನ ಅನಂತ ಶಾಸ್ತ್ರಿಗೆ ಕೌತುಕವೆನಿಸಿದ್ದಿತು. ಹೀಗಿದ್ದು ಕೆಲಕಾಲ ಕಳೆಯಲು ಶಾಸ್ತ್ರಿಯು ತನ್ನ ವಿದ್ಯಾಭ್ಯಾಸವನ್ನು ಪೂರೈಸಿ ಸ್ವಗ್ರಾಮವಾದ ಮಂಗಳೂರು ಮಂಡಲದ ಮಾಲ್ಹೇರಂಭಿ ಎಂಬ ಗ್ರಾಮಕ್ಕೆ ಬಂದು ವಿವಾಹಿತನಾಗಿ ಸಂಸಾರವನ್ನು ಹೂಡಿದನು. ತನ್ನ ಗುರುವೇ ಪ್ರತ್ಯಕ್ಷ ಉದಾಹರಣಸ್ವರೂಪನಾಗಿದ್ದರೂ ಆತನಿಗೆ ಆಗ ಪುನಃ "ಸ್ತ್ರೀಯರು ವಿದ್ಯಾಭ್ಯಾಸ ಮಾಡಬಹುದೇ?" ಎಂಬ ಸಂದೇಹವು ಉಂಟಾಗದಿರಲಿಲ್ಲ. "ದೇವಭಾಷೆಯಾದ ಸಂಸ್ಕೃತವನ್ನು ಲೋಕರೂಢಿಗೆ ವಿರೋಧವಾಗಿ ಸ್ತ್ರೀಯರಿಗೆ ಬೋಧಿಸುತ್ತಿದ್ದ ತನ್ನ ಗುರುವಿನ ಚರ್ಯೆಯು ಸಾಧುವಾದುದೆ?" ಎಂದು ಒಂದೊಂದು ಸಾರಿ ತರ್ಕಿಸುವನು. ಹಾಗೆಯೇ ಕೆಲವು ದಿನಗಳು ವಿಚಾರ ನಡಿಸುತ್ತಿರಲಾಗಿ ಪ್ರಾಚೀನ ಭಾರತದಲ್ಲಿ ಗಾರ್ಗಿ ಮೈತ್ರೇಯಿ ಸುಲಭಾ ಲೋಪಾಮುದ್ರೆ ಶಕುಂತಳಾ ಮುಂತಾದ ಅನೇಕಾನೇಕ ಮಂದಿ ಉನ್ನತ ವಿದ್ಯಾಭ್ಯಾಸಮಾಡಿ ನಾರೀಕುಲಶಿರೋಮಣಿಯರೆನ್ನಿಸಿಕೊಂಡಿದ್ದರೆಂಬುದು ಆತನ ಸ್ಮೃತಿಪಥಕ್ಕೆ ಬಂದಿತು. ಅವರಲ್ಲಿ ಕೆಲ ಮಂದಿ ಋಷಿಸ್ತ್ರೀಯರು ವೇದಋಕ್ಕುಗಳನ್ನು ರಚಿಸುವಷ್ಟು ಪ್ರತಿಭಾವಂತರಾಗಿ ಕೂಡ ಇದ್ದರೆಂಬ ಸಂಗತಿಯೂ ಗೋಚರಕ್ಕೆ ಬಂದು ಆತನ ಸಂಶಯವು ನಿವಾರಣೆಯಾಯಿತು. ಒಡನೆಯೇ ಆತನು, ಹಾಗಾದರೆ ನಾನೇಕೆ ನನ್ನ ಮನೆಯ ಹೆಂಗಸರಿಗೆ ವಿದ್ಯಾಭ್ಯಾಸ ಮಾಡಿಸಬಾರದೆಂದು ಯೋಚಿಸಿ, ತನ್ನ ಪತ್ನಿಗೆ ಸಂಸ್ಕೃತ ಭಾಷೆಯನ್ನು ಕಲಿಸಬೇಕೆಂದು ಸಂಕಲ್ಪಿಸಿದನು. ಆ ವಿಚಾರವು ಮನೆಯಲ್ಲಿ ತಿಳಿಯದಿರಲು ಸಾಧ್ಯವಾಗಲಿಲ್ಲ. ಒಡನೆಯೇ, ಆತನ ವೃದ್ಧಮಾತೆಯೂ ಬಂಧುಬಳಗದವರೂ ನೆರಹೊರೆಯವರೂ ಆತನನ್ನು ಪರಿಪರಿಯಿಂದ ಆಕ್ಷೇಪಿಸಿ, ಅಣಕಿಸಿ, ಅಲ್ಲಸಲ್ಲದ ವಿಘ್ನಗಳನ್ನು ತಂದೊಡ್ಡಿ, ನಿರುತ್ಸಾಹಗೊಳಿಸಿ ಎಂತೂ ಒಂದು ದಿನವಾದರೂ ಆತನು ತನ್ನ ಪ್ರಯತ್ನವನ್ನು ಸಾಗಗೊಳಿಸಲಿಲ್ಲ. ತಮ್ಮವರ ಈ ಬಗೆಯ ಚರ್ಯೆಯಿಂದ ಬೇಸರಗೊಂಡ ಅನಂತಶಾಸ್ತ್ರಿಯು, ಪತ್ನಿಯೊಂದಿಗೆ ತೀರ್ಥಯಾತ್ರೆಗೆಂದು ಪ್ರಯಾಣಮಾಡಿದನು. ಸುಪ್ರಸಿದ್ಧ ವಿದ್ಯಾ

ವಂತನೂ ಚತುಶ್ಶಾಸ್ತ್ರ ಪಂಡಿತನೂ ಆದ ಆ ಬ್ರಾಹ್ಮಣನಿಗೆ ದೇಶದಲ್ಲಿ ಆಶ್ರಯ ಸಿಕ್ಕುವುದೂ-ಜೀವನ ನಡೆಯುವುದೂ ಕಷ್ಟವಾಗಿ ತೋರಲಿಲ್ಲ. ಆತನು ಅಲ್ಲಲ್ಲಿ ಸಂಚರಿಸುತ್ತಾ ಈ ನಮ್ಮ ಮೈಸೂರು ದೇಶಕ್ಕೂ ಬಂದು, ವಿದ್ವತ್ಪಕ್ಷಪಾತಿಯೂ ಗುಣಗ್ರಹಣಶೀಲನೂ ಆಗಿದ್ದ ಆಗಿನ ಮಹಾರಾಜನ ಆಶ್ರಯದಲ್ಲಿ ಹತ್ತು ವರ್ಷ ಕಾಲ ಆಸ್ಥಾನ ವಿದ್ವಾಂಸನಾಗಿ ವಾಸಿಸಿದ್ದನೆಂದು ಆತನ ಚರಿತ್ರೆಯು ಹೇಳುತ್ತದೆ. ತರುವಾಯ ಉತ್ತರದೇಶಪ್ರಾಂತ ಯಾತ್ರೆಹೊರಟು, ಮಧುರಾ, ಬೃಂದಾವನ, ಅಯೋಧ್ಯೆ, ಹರಿದ್ವಾರ, ಕಾಶಿ ಮುಂತಾದ ಸುಪ್ರಸಿದ್ಧ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ, ಕಾಶಿಯ ರಾಜಾಸ್ಥಾನದಲ್ಲಿ ಕೆಲಕಾಲವಿದ್ದನು. ಈ ಕಾಲದಲ್ಲೆಲ್ಲಾ, ಅನುವು ದೊರೆ ತಾಗೆಲ್ಲ ತನ್ನ ಪತ್ನಿಗೆ ಯುಕ್ತ ರೀತಿಯಿಂದ ಬೋಧಿಸಿ ಪ್ರಜ್ಞಾವಂತಳನ್ನು ಮಾಡಲು ಬೇಸರು ಪಡಲಿಲ್ಲ. ಹೀಗೆ ಪರಪ್ರಾಂತದಲ್ಲೇ ಬಹು ಕಾಲ ವಾಸಿಸಿದ ತರುವಾಯ, ಒಂದು ದಿನ ಜನ್ಮಸ್ಥಳದ ದರ್ಶನಾಭಿಲಾಷೆಯು ಉತ್ಪನ್ನವಾಗಲು ಸ್ವಗ್ರಾಮವನ್ನು ಕುರಿತು ಪ್ರಯಾಣ ಮಾಡಿದನು. ಈ ಪ್ರಯಾಣದಲ್ಲಿ ಆತನ ಪ್ರಿಯಪತ್ನಿಯು ಕಾಲಾಧೀನಳಾದಳು. ಪತ್ನೀ ವಿಯೋಗದಿಂದ ಚಿಂತಾಕುಲಿತನಾದ ಅನಂತಶಾಸ್ತ್ರಿಯು, ಏಕಾಕಿಯಾಗಿಯೇ ಮಾರ್ಗಕ್ರಮಣ ಮಾಡುತ್ತ 'ಪೈರಣವೆಂಬ ಪಟ್ಟಣವನ್ನು ಸೇರಿ ಅಲ್ಲಿ ಕೆಲ ದಿನಗಳು ತಂಗಿರಲು, ದೈವಾನುಕೂಲ ಒದಗಿಬಂದು, ಆತನಂತೆಯೇ ತೀರ್ಥಯಾತ್ರಾತತ್ಪರನಾಗಿದ್ದ ಒಬ್ಬ ಬ್ರಾಹ್ಮಣೋತ್ತಮನು, ತನ್ನ ಪುತ್ರಿಯರಲ್ಲೊಬ್ಬಳನ್ನು ಆತನಿಗೆ ಕನ್ಯಾದಾನ ಮಾಡಿಕೊಟ್ಟನು. ಲಕ್ಷ್ಮೀಬಾಯಿಯೆಂಬ ನಾಮಧೇಯದಿಂದ ಅನಂತಶಾಸ್ತ್ರಿಯು ಪಾಣಿಗ್ರಹಣಮಾಡಿದ ಈ ಸುಶೀಲೆಯೇ ನಮ್ಮ ಕಥಾನಾಯಿಕೆಯನ್ನು ಗರ್ಭಧಾರಣ ಮಾಡಿದ ಸಾಧ್ವೀಮಣಿಯು.

ಎರಡನೆಯ ಮದುವೆಯಾದಾಗ ಅನಂತಶಾಸ್ತ್ರಿಯ ವಯಸ್ಸು ನಾಲ್ವತ್ತನಾಲ್ಕಾಗಿತ್ತು. ಆಗ ಲಕ್ಷ್ಮೀಬಾಯಿಗೆ ಇನ್ನೂ ಒಂಬತ್ತನೆಯ ವರ್ಷ ನಡೆಯುತ್ತಿತ್ತು. ಶಾಸ್ತ್ರಿಯು ತನ್ನ ಆ ಚಿಕ್ಕ ಪತ್ನಿಯೊಂದಿಗೆ ಪ್ರಯಾಣ ಮಾಡಿ, ಕೆಲ ದಿನಗಳೊಳಗಾಗಿ ಸ್ವಗ್ರಾಮವಾದ ಬಿಲ್ಲೇರಂಭಿಯನ್ನು ಸೇರಿದನು. ಬಹು ದಿನಗಳ ಮೇಲೆ ಬಂದ ಮಗನನ್ನು ಕಂಡ ಆತನ ವೃದ್ಧ

ಮಾತೆಯು ಪರಮಾನಂದಪಟ್ಟಳೆಂದು ಹೇಳಬೇಕೇನು ! ಗುಣವಂತೆಯಾದ ತನ್ನ ಮೊದಲನೆಯ ಸೊಸೆಯ ಮರಣಕ್ಕಾಗಿ ವ್ಯಸನಪಟ್ಟಳಾದರೂ ಎರಡನೆಯ ಆ ಚಿಕ್ಕ ಸೊಸೆಯ ರೂಪಲಾವಣ್ಯಗಳು, ವಿನಯ ಗಾಂಭೀರ್ಯಗಳು, ಮುಂತಾದುವುಗಳಿಗಾಗಿ ಆನಂದಿಸದಿರಲಿಲ್ಲ. ಅನಂತಶಾಸ್ತ್ರಿಯು ಈಗಲೂ ತನ್ನ ಸುಧಾರಣಾ ಚಿತ್ತವೃತ್ತಿಯನ್ನು ಬದಲಾಯಿಸಲಿಷ್ಟಪಡದೆ, ತನ್ನಾ ಚಿಕ್ಕ ವಯಸ್ಸಿನ ಮಡದಿಗೇ ಓದುಗಲಿಸಲಿಚ್ಛಿಸಿದನು-ಯತ್ನಿಸಿದನು. ವಿದ್ಯಾವಂತನೂ ದೇಶಸಂಚಾರದಿಂದ ವಿಶೇಷಾನುಭವಿಯೂ ಆಗಿದ್ದ ತನ್ನ ಮಗನ ಇಷ್ಟಕ್ಕೆ ಪ್ರತಿ ಹೇಳಲು ಮುದುಕಿಯಾದ ಆತನ ತಾಯಿಯು ಧೈರ್ಯಗೊಳ್ಳದಿದ್ದರೂ, ಸ್ವಜನರೂ ಪರಕೀಯರೂ ನೆರೆಹೊರೆಯ ಜನರೂ ಆತನ ಈ ಸುಧಾರಣಾ ಪಥವನ್ನು ಅತ್ಯಂತ ಅವಹೇಳನ ದೃಷ್ಟಿಯಿಂದ ಕಂಡು ಆಕ್ಷೇಪಿಸತೊಡಗಿದರು. ಕೂಪಸ್ಥ ಮಂಡೂಕಗಳಂತಿದ್ದು, ಹೊರಗಿನ ವಿಶಾಲ ಪ್ರಪಂಚದಲ್ಲಿ ಏನು ನಡೆಯುತ್ತಿದೆ ಎಂಬುದರ ಬೆಳಕನ್ನೇ ಅರಿಯದ ಆ ಜನಗಳ ಮಧ್ಯದಲ್ಲಿದ್ದು ತನ್ನ ಅಭಿಲಾಷೆಯನ್ನು ನೆರವೇರಿಸಿಕೊಳ್ಳುವುದು ಅಸಾಧ್ಯವೆಂದು ಆತನಿಗೆ ಮನವರಿಕೆಯಾಗದಿರಲಿಲ್ಲ. ಆ ಕಠಿಣ ಪ್ರಶ್ನೆಯನ್ನು ಹೇಗೆ ಬಿಡಿಸಬಹುದೆಂಬುದನ್ನು ಯೋಚಿಸುತ್ತಾ ಕೆಲದಿನಗಳನ್ನು ಕಳೆವುದರೊಳಗಾಗಿ ಒಂದು ದಿನ ಆತನ ವೃದ್ಧ ಮಾತೆಯು ತನ್ನ ದೇಹಯಾತ್ರೆಯನ್ನು ಮುಗಿಸಿದಳು. ಮುಂದೆ ಅನಂತಶಾಸ್ತ್ರಿಯು ತನ್ನ ತಾಯಿಗೆ ಅಪರ ಸಂಸ್ಕಾರ ಕ್ರಿಯೆಗಳನ್ನೆಲ್ಲ ಶಾಸ್ತ್ರೋಕ್ತ ರೀತಿಯಿಂದ ಆಚರಿಸಿ ಮುಂದೆ ತನ್ನ ಮಾರ್ಗಕ್ಕೆ ತಡೆಯನ್ನುಂಟುಮಾಡುವ ಆ ಸ್ವಜನರ ಮಧ್ಯದಲ್ಲಿರಲು ಇಷ್ಟಪಡದೆ, ತನ್ನ ಆ ಚಿಕ್ಕ ವಯಸ್ಸಿನ ಪತ್ನಿಯೊಂದಿಗೆ ಹೊರಟು, ಏಕಾಂತವಾಸಕ್ಕೆಂದು ಪ್ರಯಾಣಮಾಡಿದನು. ಹಾಗೆ ಮಾರ್ಗಕ್ರಮಣ ಮಾಡುತ್ತ ಆ ದಂಪತಿಗಳು, ಪಶ್ಚಿಮಘಟ್ಟದ ಪ್ರಾಂತಾರಣ್ಯವೊಂದರಲ್ಲಿ, ಮೂರು ನದಿಗಳು ಸಂಗಮವಾಗುವ ಗಂಗಾಮೂಲವೆಂಬ ಒಂದಾನೊಂದು ಪುಣ್ಯಕ್ಷೇತ್ರವನ್ನು ಸೇರಿದರು. ಆ ಪ್ರದೇಶದ ಪ್ರಕೃತಿ ಸೌಂದರ್ಯವೂ, ಪಾವಿತ್ರ್ಯತೆಯೂ, ವೈರಾಗ್ಯಪರ ಚಿತ್ತವೃತ್ತಿಯ ಅನಂತಶಾಸ್ತ್ರಿಯ ಮನಸ್ಸಿಗೆ ಅತಿಶಯತೃಪ್ತಿಯನ್ನುಂಟುಮಾಡಲು, ಧೀರ ಚಿತ್ತವೃತ್ತಿಯ ಆ ಚಿತ್ಪಾವನ ಬ್ರಾಹ್ಮಣನು ಆ ನಿರ್ಜನ ಸ್ಥಳದಲ್ಲಿ ತನ್ನಾ ಚಿಕ್ಕ ವಯಸ್ಸಿನ

ಮಡದಿಯೊಂದಿಗೆ ಏಕಾಂಗಿಯಾಗಿ ವಾಸಿಸಲು ಸಂಕಲ್ಪಿಸಿ, ಒಂದು ಚಿಕ್ಕ ಮನೆಯನ್ನು ಕಟ್ಟಿಕೊಂಡು ಇರತೊಡಗಿದನು. ಆ ಸ್ಥಳದಲ್ಲಿ ತನ್ನ ಮನ ಬಂದ ಸುಧಾರಣೆಯನ್ನು ಮಾಡಲು ಯಾರ ಪ್ರತಿಬಂಧಕವೂ ಇಲ್ಲ ದಿದ್ದುದರಿಂದ, ಶಾಸ್ತ್ರಿ ಮಹಾಶಯನು, ತನ್ನಾ ಪತ್ನಿಗೆ ಸಂಸ್ಕೃತ ವಿದ್ಯಾ ಭ್ಯಾಸಮಾಡಿಸಲು ಪ್ರಾರಂಭಿಸಿ, ಇಂತು ಸುಧಾರಣೆಯ ಅಂಕುರಾರ್ಪಣ ಮಾಡಿದನು.



## ಅಧ್ಯಾಯ ೨ "ಅನಾಥಸ್ಥಿತಿ"

ಮಹಾರಣ್ಯದ ಮಧ್ಯದಲ್ಲಿದ್ದ ಆ ಆಶ್ರಮದಲ್ಲಿದ್ದರೂ ಆತನು ಏಕಾಂಗಿಯಾಗಿರಲಿಲ್ಲ. ಕೆಲವು ದಿನಗಳೊಳಗಾಗಿಯೇ ಆತನನ್ನು ಆಶ್ರಯಿಸಿ ವಿದ್ಯಾಭ್ಯಾಸ ಮಾಡಲೋಸುಗ ಅನೇಕಮಂದಿ ವಿದ್ಯಾರ್ಥಿಗಳು ಅಲ್ಲಿಗೆ ಬಂದು ಸೇರಿದರು. ಅನಂತಶಾಸ್ತ್ರಿಯ ಆ ಗುಡಿಸಲು, ದೊಡ್ಡದೊಂದು ಋಷ್ಯಾಶ್ರಮವೆಂಬಂತೆ ತೋರಸಾಗಿತು. ಸೌ|| ಲಕ್ಷ್ಮೀಬಾಯಿಯೂ ಇತರ ವಿದ್ಯಾರ್ಥಿಗಳಂತೆಯೇ ತನ್ನ ಪತಿಯೂ-ಗುರುವೂ ಆಗಿದ್ದ ಅನಂತಶಾಸ್ತ್ರಿಯ ಬಳಿಯಲ್ಲ ವಿದ್ಯಾಭ್ಯಾಸ ಮಾಡಿದಳು. ಶಾಸ್ತ್ರಿ ಮಹಾಶಯನ ಈ ಬಗೆಯ ಆಶ್ರಮ ವಾಸವು ಹನ್ನೆರಡು ವರ್ಷಕಾಲ ಸಾಗಿತು. ಈ ದೀರ್ಘ ಕಾಲದಲ್ಲ ಲಕ್ಷ್ಮೀಬಾಯಿಯ ವಿದ್ಯಾಭ್ಯಾಸವು ಕಾವ್ಯ ತರ್ಕ ವ್ಯಾಕರಣಾದಿ ಸಾಹಿತ್ಯ ಭಾಗದಲ್ಲೂ, ಪುರಾಣ ಧರ್ಮಶಾಸ್ತ್ರಾದಿಗಳಲ್ಲೂ, ಮನ್ವಾದಿಶ್ರುತಿ ಉಪ ನಿಷದಾದಿಗಳಲ್ಲೂ ಉತ್ತಮ ರೀತಿಯಿಂದ ನಡೆದು, ಆಕೆಯು, ತನ್ನ ಪತಿಯು ಕಾರ್ಯಾಂತರದಿಂದ ಹೊರಕ್ಕೆ ಹೋಗಿದ್ದಾಗ್ಗೆ ಶಿಷ್ಯಮಂಡಲಿಗೆ ಪಾಠಹೇಳು ವಷ್ಟು ಮಟ್ಟಿಗೆ, ಯೋಗ್ಯತೆಯನ್ನು ಸಂಪಾದಿಸಿದ್ದಳು. ಹನ್ನೆರಡು ಹದಿ ಮೂರು ವರ್ಷಗಳ ಹಿಂದೆ, ಕೇವಲ ಒಂಬತ್ತು ವರ್ಷದ ಬಾಲಿಕೆಯಾಗಿದ್ದಾಗ ಭಯಭೀತಿಗಳಿಂದ ಕಂಗೆಡುತ್ತಾ, ವಿಧಿಯಿಲ್ಲದೆ, ಪತಿಯ ಮಾತಿಗೆ ಪ್ರತಿ ಹೇಳಲರಿಯದೆ, ಗ್ರಾಮವಾಸವನ್ನೂ, ಜೊತೆಗಾತಿಯರನ್ನೂ, ಸ್ವಜನರನ್ನೂ

ಬಿಟ್ಟು, ಅರಣ್ಯಮಧ್ಯದ ಏಕಾಂತವಾಸಕೆ ಬಂದಿದ್ದ ಆ ಸಾಧ್ವಿಯು, ಈಗ ತನ್ನ ಚಿತ್ಪಾವನ್ ಕುಲಕ್ಕೆ ಸ್ವಾಭಾವಿಕವಾದ ಧೈರ್ಯ ಸ್ಥೈರ್ಯ ಗಾಂಭೀರ್ಯಾದಿಗಳನ್ನೂ, ಕರ್ತೃತ್ವಶಕ್ತಿಯನ್ನೂ ಪ್ರದರ್ಶಿಸುತ್ತ ಆಶ್ರಮದ ಕೆಲಸ ಕಾರ್ಯಗಳನ್ನು ಉತ್ತಮರೀತಿಯಿಂದ ನೆರವೇರಿಸಿಕೊಂಡು ಉಪನಿಷತ್ಕಾಲದ ಗೃಹಿಣಿಯೋ ಎಂಬಂತೆ ತೋರುತ್ತಿರುವಳು. ಆ ಗುರುಕುಲದಲ್ಲಿ ವಾಸಿಸುತ್ತಿದ್ದ ವಿದ್ಯಾರ್ಥಿಗಳು ಆಕೆಯನ್ನು ಮಾತೃಭಾವನೆಯಿಂದ ಕಾಣುತ್ತಿದ್ದುದು ಅತಿಶಯವಲ್ಲ! ಆಕೆಯು ಅಷ್ಟು ಚಿಕ್ಕ ವಯಸ್ಕಳಾದರೂ, ಅಷ್ಟುಮಂದಿಯ ಆಹಾರ ಪಾನೀಯಗಳ ಸಿದ್ಧತೆಯಲ್ಲಿ ಬೇಸರಪಡದೆ, ಗೊಣಗುಟ್ಟದೆ ಎಲ್ಲವನ್ನೂ ಸಕಾಲಕ್ಕೆ ಒದಗಿಸುತ್ತಾ, ಎಲ್ಲರನ್ನೂ ಪುತ್ರಭಾವನೆಯಿಂದ ಕಂಡು ಅವರ ಗೌರವ ಪ್ರೀತಿ ವಿಶ್ವಾಸಗಳಿಗೆ ಪಾತ್ರಳಾದಳು.

ಸೌ|| ಲಕ್ಷ್ಮೀಬಾಯಿಯು ಅನಂತಶಾಸ್ತ್ರಿಗೆ ಆರು ಮಂದಿ ಮಕ್ಕಳನ್ನು ಹೆತ್ತು ಕೊಟ್ಟಳು. ಅವರಲ್ಲಿ ನಮ್ಮ ಕಥಾನಾಯಿಕೆಯಾದ ರಮಾಬಾಯಿಯೇ ಕೊನೆಯವಳು. ರಮಾಬಾಯಿಯ ಜನನವು ೧೮೫೮ ನೆಯ ಸಂವತ್ಸರದ ಏಪ್ರೆಲ್ ಮಾಸದಲ್ಲಿ, ಒಂದಾನೊಂದು ವೈಶಾಖ ಶುದ್ಧ ದಶಮಿಯ ಶುಭ ದಿನದಲ್ಲಿ ಆಯಿತು. ಲಕ್ಷ್ಮೀಬಾಯಿಯ ಗರ್ಭಸುಧಾಂಬುಧಿಯಲ್ಲಿ ಜನಿಸಿದ ಆರು ಮಂದಿ ಮಕ್ಕಳಲ್ಲಿ ಮೂವರು ಶಿಶುತನದಲ್ಲೇ ಕಾಲವಶರಾಗಲು, ಅನಂತಶಾಸ್ತ್ರಿಯು ಮಿಕ್ಕ ಮೂವರು ಮಕ್ಕಳನ್ನೂ ಪತ್ನಿಯನ್ನೂ ಕರದುಕೊಂಡು ಆ ಗಂಗಾಮೂಲ ಕ್ಷೇತ್ರದಿಂದ ಹೊರಡುವ ಯೋಚನೆ ಮಾಡಿದನು. ಆತನ ಮನಸ್ಸಿನಲ್ಲಿದ್ದ-ತನ್ನ ಪತ್ನಿಯನ್ನು ವಿದ್ಯಾವಂತಳನ್ನಾಗಿ ಮಾಡಬೇಕೆಂಬ-ಉದ್ದೇಶವು ಸಾರ್ಥಕವಾದುದರಿಂದ, ಇನ್ನು ಮುಂದೆ ಮಕ್ಕಳೊಂದಿಗನಾದ ಆತನು ಅರಣ್ಯಮಧ್ಯದಲ್ಲಿ ವಾಸಿಸಬೇಕಾದ ಕಾರಣವು ತಿಳಿಯಲಿಲ್ಲ. ಅಲ್ಲದೆ, ಆ ವೇಳೆಗೆ ಆತನ ಸೌಭಾಗ್ಯದ ದಿನಗಳೂ ಅಂತ್ಯವಾಗಿ ಆತನು ತನ್ನ ಕುಟುಂಬ ಸಂರಕ್ಷಣೆಗಾಗಿ ನಿತ್ಯವೂ ಏನಾದರೂ ಪ್ರಯತ್ನಮಾಡಿಯೇ ತೀರಬೇಕಾದ ಸಂಭವವುಂಟಾಗಿದ್ದಿತು. ಆತನ ಪೂರ್ವ ವಯಸ್ಸಿನಲ್ಲಿ ರಾಜಾಧಿರಾಜರು ದಾನಮಾಡಿದ್ದ ಅಸಂಖ್ಯದ್ರವ್ಯವೂ ಆಯಾ ಕಾಲಗಳಲ್ಲೇ ಮಿತಿಯನ್ನರಿಯದ ವೆಚ್ಚದಿಂದ ಲಯವಾದುದರಿಂದ, ದೇಹಪಟುತ್ವವು ಕುಂದುತ್ತಾ ಸಾಗಿದ್ದ ಈಗಿನ ವೃದ್ಧಾಪ್ಯದಲ್ಲಿಯೂ

ಚಿಕ್ಕ ವಯಸ್ಸಿನ ಹೆಂಡತಿಯು ಮತ್ತು ಚಿಕ್ಕ ಚಿಕ್ಕ ಮಕ್ಕಳ ಜೀವನ ನಿರ್ವಹಣಕ್ಕಾಗಿ, ಆತನು ದುಡಿದೇ ತೀರಬೇಕಾದ ವಿಧಿಯು ಪ್ರಾಪ್ತಿಸಿದ್ದಿತು. ಆತನ ಸಂಪಾದನೆಯೇನು ಕಡಮೆ ದರ್ಜೆಯದಿರಲಿಲ್ಲ! ನಮ್ಮ ಆಗಿನ ಮೈಸರು ಮಹಾರಾಜನೇ ಇಪ್ಪತ್ತೈದು ಸಹಸ್ರ ರೂಪಾಯಿಗಳನ್ನು ಕೊಟ್ಟಿದ್ದನಂತೆ! ನೇಪಾಳದ ರಾಜನು ಆನೆಯನ್ನೂ ಅನೇಕ ಧನಕನಕಗಳನ್ನೂ ದಾನ ಮಾಡಿದ್ದನಂತೆ! ರಮಾಬಾಯಿಯು-'ತನ್ನ ಪತಿಯ ಬಳಿಯಲ್ಲಿ ಒಂದಾನೊಂದು ವೇಳೆ ನೂರ ಎಪ್ಪತ್ತೈದು ಸಾವಿರ ರೂಪಾಯಿಗಳಿದ್ದುವು' ಎಂದು ತನ್ನ ತಾಯಿಯಿಂದ ಕೇಳಿದ್ದ ವಿಚಾರವನ್ನು ಕಥೆಯಾಗಿ ಹೇಳುತ್ತಿದ್ದುದುಂಟು. ಆದರೆ ವೈರಾಗ್ಯಪರ ಚಿತ್ತವೃತ್ತಿಯ ಆ ಸದ್ಬ್ರಾಹ್ಮಣನು ಹನ್ನೆರಡು ವರ್ಷ ಕಾಲದೊಳಗಾಗಿ ಆ ಅತಿಶಯ ದ್ರವ್ಯವನ್ನೂ ವೆಚ್ಚಿಸಿ ಕೊನೆಗೆ ನಿರ್ಗತಿಕನಾದನು.

ಲಕ್ಷ್ಮೀಬಾಯಿಯು ತನ್ನ ಕೊನೆಯ ಕೂಸಾದ ರಮಾಬಾಯಿಯನ್ನು ಹೆತ್ತು, ಇನ್ನೂ ಆರು ತಿಂಗಳು ಮಾತ್ರ ಆಗಿದ್ದಿತು. ಅಷ್ಟರಲ್ಲೇ ಅನಂತ ಶಾಸ್ತ್ರಿಯು ಆಶ್ರಮದಿಂದ ಹೊರಹೊರಟನು. ಮಗುವಿನ ತೊಟ್ಟಿಲನ್ನು ಒಬ್ಬ ಸೇವಕನ ತಲೆಯ ಮೇಲೆ ಹೊರಿಸಿಕೊಂಡು ಆ ದಂಪತಿಗಳು ಗಂಗಾಮೂಲದಿಂದ ನಡೆದು ಸಮೀಪದ ಒಂದಾನೊಂದು ಊರನ್ನು ಸೇರಿದರು. ಮುಂದೆ ಒಂದು ಊರಿನಿಂದ ಮತ್ತೊಂದೂರಿಗೆ ಯಾತ್ರಾರ್ಥ ತಿರುಗುವುದೇ ಅವರ ನಿತ್ಯವೃತ್ತಿಯಾಗಿ ಪರಿಣಮಿಸಿತು. ಹೋಗಿ ತಂಗಿದ ಒಂದು ಹೊಸ ಊರಿನಲ್ಲಿ ಅನಂತಶಾಸ್ತ್ರಿಯು ಒಂದು ದೇವಾಲಯವನ್ನೋ ಛತ್ರವನ್ನೋ ಆಶ್ರಯಿಸಿ ಭಾಗವತಾದಿ ಪುರಾಣಗಳನ್ನು ಹೇಳುವನು. ಆತನ ಪತ್ನಿಯಾದ ಲಕ್ಷ್ಮೀಬಾಯಿಯು ಮೃದುಮಧುರ ಕಂಠಸ್ವರದಿಂದ ಭಾಗವತ ಶ್ಲೋಕಗಳನ್ನು ಹೇಳುತ್ತಿರಲು ಆ ಅಪೂರ್ವ ಪಠನವೈಖರಿಯು ಶ್ರೋತೃಗಳನ್ನು ಮುಗ್ಧರನ್ನಾಗಿ ಮಾಡಿಬಿಡುವುದು. ಅಲ್ಲದೆ ಹಾಗೆ ಆಕೆಯು ಹೇಳಿದ ಸಂಸ್ಕೃತ ಶ್ಲೋಕಗಳನ್ನು ವಿವರಿಸಿ ದೇಶಭಾಷೆಯಲ್ಲಿ ಹೇಳುತ್ತಿದ್ದ ಶಾಸ್ತ್ರಿ ಮಹಾಶಯನ ವರ್ಣನಾಪದ್ಧತಿಯೂ ಅವರಿದ್ದಲ್ಲಿಗೇ ಅನೇಕರನ್ನು ಆಕರ್ಷಿಸುತ್ತಿದ್ದುದರಿಂದ ಅವರ ಜೀವನವು ಎಂದಿನಂತೆಯೇ ತಾಪತ್ರಯವನ್ನರಿಯದೆ ಸಾಗಲು ಪ್ರತಿಬಂಧಕವಿರಲಿಲ್ಲ. ಹೀಗೆ ಮಹದ್ಗ್ರಂಥಗಳಾದ

ಭಾಗವತಾದಿ ಪುರಾಣಗಳನ್ನು ಆದ್ಯಂತವಾಗಿ ಹೇಳಬೇಕಾಗಿ ಬಂದಾಗ ಮಾತ್ರ ಒಂದೊಂದು ಊರಿನಲ್ಲಿ ನಾಲ್ಕಾರು ತಿಂಗಳು-ಹೆಚ್ಚೆಂದರೆ ಒಂದು ವರ್ಷ ಕಾಲದವರೆಗೆ ವಾಸಿಸುತ್ತ, ಹಾಗಿಲ್ಲದಿದ್ದಲ್ಲಿ ಕ್ಷೇತ್ರದಿಂದ ಕ್ಷೇತ್ರಕ್ಕೆ ಸಂಚರಿಸಿಕೊಂಡು ಆ ದಂಪತಿಗಳು ಭಾರತದೇಶದ ಅನೇಕ ತೀರ್ಥಯಾತ್ರಾ ಸ್ಥಳಗಳನ್ನು ಸಂದರ್ಶಿಸಿದರು. ಇಂತು ಕೆಲಕಾಲ ಆ ದಂಪತಿಗಳು ತೀರ್ಥ ಯಾತ್ರೆಯೊಂದಿಗೆ ಲೋಕಯಾತ್ರೆಯನ್ನೂ ಸಾಗಿಸುತ್ತಿದ್ದರು.

ರಮಾಬಾಯಿಗೆ ಸ್ಪಷ್ಟವಾಗಿ ಮಾತನಾಡುವಷ್ಟು ಸಾಮರ್ಥ್ಯವುಂಟಾ ದೊಡನೆಯೇ ಲಕ್ಷ್ಮೀಬಾಯಿಯು ಅವಳ ವಿದ್ಯಾಭ್ಯಾಸವನ್ನು ಕುರಿತು ಗಮನಿಸತೊಡಗಿದಳು. ದೇವದೇವತೆಯರ ಸ್ತೋತ್ರ ರೂಪವಾದ ಸಂಸ್ಕೃತ ಶ್ಲೋಕಗಳನ್ನು ಬಾಯಿಪಾಠವಾಗಿ ಹೇಳಿಕೊಡುವಳು. ಪುರಾಣೋಕ್ತ ಗಳಾದ ಧ್ರುವ ಪ್ರಹ್ಲಾದ-ಸೀತಾ ಸಾವಿತ್ರಿ ಮುಂತಾದ ಪುಣ್ಯಶೀಲರ ಚರಿತ್ರೆಗಳನ್ನು ಆ ಚಿಕ್ಕ ಮಗುವಿನ ಮಾತುಗಳಲ್ಲೇ ಕಥೆಗಳಾಗಿ ಅವಳಿಗೆ ಹೇಳುವಳು. ಕ್ರಮವಾಗಿ ಅಕ್ಷರಾಭ್ಯಾಸವು ಆಗಿ, ವಿದ್ಯಾಭ್ಯಾಸವು ಗೊತ್ತಾಗಿ ಎಂಟನೆಯ ವಯಸ್ಸಿನಿಂದ ಆರಂಭವಾಯಿತು. ಲಕ್ಷ್ಮೀಬಾಯಿಯು ಅಮರವನ್ನೂ ಭಾಗವತವನ್ನೂ ಭಗವದ್ಗೀತೆಯನ್ನೂ ತನ್ನ ಮಗಳಿಗೆ ಬಾಯಿ ಪಾಠ ಮಾಡಿಸಲಾರಂಭಿಸಿದಳು. ಅಲ್ಲದ ಅನಂತಶಾಸ್ತ್ರಿಯಿಂದ ಕ್ರಮಕ್ರಮ ವಾಗಿ ವ್ಯಾಕರಣ ಕಾವ್ಯ ನಾಟಕಾದಿಗಳೂ ಬೋಧಿಸಲ್ಪಟ್ಟುವು. ರಮಾ ಬಾಯಿಗೆ ಹದಿನೈದು ವಯಸ್ಸಾಗುವ ವೇಳೆಗೆ ಆಕೆಯು ಸಂಸ್ಕೃತ ಭಾಷ ಯಲ್ಲಿ ಯಾವ ಉದ್ಗ್ರಂಥವನ್ನಾದರೂ ಓದಿಕೊಂಡು ಸ್ವತಃ ಅರ್ಥ ಮಾಡಿ ಕೊಳ್ಳುವಷ್ಟು ಜ್ಞಾನವನ್ನು ಸಂಪಾದಿಸಿಕೊಂಡಳು. ವ್ಯವಸಾಯವು ಅವಿಚ್ಛಿನ್ನವಾಗಿ ನಡೆಯುತ್ತಲೇ ಇದ್ದುದರಿಂದ ಆ ಬಾಲಿಕೆಗೆ ಸಂಸ್ಕೃತ ಭಾಷೆಯಲ್ಲೇ ಗಂಟೆಗಂಟೆಗಳ ಕಾಲ ಮಾತನಾಡುವಷ್ಟು ಪ್ರಾವೀಣ್ಯತೆಯೂ ಉಂಟಾಯಿತು.

ಮೇಲ್ಕಂಡಂತೆ ಗಂಗಾಮೂಲವನ್ನು ಬಿಟ್ಟು ಯಾತ್ರೆಗಾಗಿ ಹೊರಟ ಅನಂತಶಾಸ್ತ್ರಿಯು ತನ್ನ ಚಿಕ್ಕ ಚಿಕ್ಕ ಮಕ್ಕಳನ್ನೂ ಹೆಂಡತಿಯನ್ನೂ ಕರದು ಕೊಂಡು ಸ್ಥಳದಿಂದ ಸ್ಥಳಕ್ಕೆ ಕ್ಷೇತ್ರದಿಂದ ಕ್ಷೇತ್ರಕ್ಕೆ ಸುತ್ತುತ್ತಿದ್ದನಲ್ಲವೆ? ಹೀಗಾಗಿ ಅವರು ತಿರುಪತಿ ಬೆಟ್ಟಕ್ಕೆ ಬಂದು ಸೇರಿದಾಗ ರಮಾಬಾಯಿಗೆ

ನಾಲ್ಕು ವರ್ಷ ವಯಸ್ಸಾಗಿದ್ದಿತು. ಅಲ್ಲಿ ಪಾಪನಾಶಿನಿ ಮುಂತಾದ ತೀರ್ಥಗಳಲ್ಲಿ ಸ್ನಾನಮಾಡಿಕೊಂಡು, ಎಲ್ಲರೂ ಸ್ವಾಮಿಯನ್ನು ಆರಾಧಿಸಿದರು. ತರುವಾಯ ಅಲ್ಲಿಂದ ಹೊರಟು ಗುಜರಾತು ಕಾಥಿಯವಾರ್ ಪ್ರಾಂತಗಳಲ್ಲಿದ್ದ ದ್ವಾರಕಾ ಬೃಂದಾವನ ಮುಂತಾದ ಪುಣ್ಯಸ್ಥಳಗಳನ್ನು ಕುರಿತು ಪ್ರಯಾಣ ಮಾಡಿದರು. ಅವರು ದ್ವಾರಕಾಪುರಿಯನ್ನು ಸೇರಿದಾಗ ರಮಾಬಾಯಿಗೆ ಹದಿಮೂರು ವರ್ಷವಯಸ್ಸಾಗಿದ್ದಿತು. ಅಲ್ಲಿಯ ಸಮುದ್ರಸ್ನಾನವು ಬಹು ಪುಣ್ಯಕರವಾದುದೆಂದು ತಿಳಿದು, ಅನಂತಶಾಸ್ತ್ರಿಯು ಅಖಂಡ ಒಂದು ಪರ್ವಕಾಲ ಸಮಸ್ತ ಪಾಪಕ್ಷಯಕಾರಿಯಾದ ಆ ಸಮುದ್ರ ಸ್ನಾನಮಾಡಿ ಕೃತಕೃತ್ಯನಾಗಬೇಕೆಂದು ಸಂಕಲ್ಪಿಸಿ, ಆ ಊರಿನಲ್ಲೇ ನಿಂತುಬಿಟ್ಟನು. ಪುರಾಣಪ್ರವಚನಾದಿಗಳಿಂದ ಜೀವನಯಾತ್ರೆಯನ್ನು ಸಾಗಿಸಿಕೊಳ್ಳುತ್ತಾ, ಭಕ್ತಿಯುತರಾಗಿ ತೀರ್ಥಕ್ಷೇತ್ರಾದಿಗಳನ್ನು ಸಂದರ್ಶಿಸುತ್ತಿದ್ದರಾದರೂ ಅನಂತಶಾಸ್ತ್ರಿ ಲಕ್ಷ್ಮೀಬಾಯಿಯರು ಅತ್ಯಂತ ವಿಚಾರಯುಕ್ತ ಮನಸ್ಥಿತಿಯುಳ್ಳವರಾಗಿದ್ದರು. ತೀರ್ಥಕ್ಷೇತ್ರಾದಿಗಳಲ್ಲಿ ಬಹು ವಿಶೇಷರೀತಿಯಿಂದ ಹೇಳಲ್ಪಡುತ್ತಿರುವ ಸ್ಥಳಪುರಾಣಾದಿಗಳ ವಿವರಣೆಗಳನ್ನು ಕೇಳಿ ಅವುಗಳನ್ನು ಮೂಢನಂಬಿಕೆಯಿಂದ ಒಪ್ಪಿಕೊಳ್ಳದೆ ಅವು ನಿಶ್ಚಯವೇ ಎಂದು ವಿಮರ್ಶಾಪೂರ್ವಕ ವಿಚಾರಮಾಡಲು ತೊಡಗುವರು. ಅನೇಕವೇಳೆ ಸ್ಥಳಪುರಾಣಾದಿಗಳಲ್ಲಿ ವಿವರಿಸಲ್ಪಟ್ಟ ವೃತ್ತಾಂತಗಳಿಗೂ ಕ್ಷೇತ್ರಾದಿಗಳಲ್ಲಿ ಪ್ರತ್ಯಕ್ಷವಾಗುತ್ತಿದ್ದ ವಿದ್ಯಮಾನಗಳಿಗೂ ಅಜಗಜಾಂತರದಷ್ಟು ವ್ಯತ್ಯಾಸವು ತೋರಿಬರುತ್ತಿದ್ದಿತು. ಮಹಾ ಪಾಪನಾಶಕರವೆಂದು ಪ್ರಸಿದ್ಧಿಹೊಂದಿದ ಕ್ಷೇತ್ರಗಳ ಕೊಳಗಳಲ್ಲಿನ ನೀರು ಕೈಯಿಂದ ಮುಟ್ಟಲು ಕೂಡ ಯೋಗ್ಯವಲ್ಲವೆಂಬಷ್ಟು ಹೊಲಸಾಗಿ ಕ್ರಿಮಿಕೀಟಯುಕ್ತವಾಗಿರುತ್ತಿದ್ದುದನ್ನು ಕಣ್ಣಿನಿಂದ ನೋಡಿಯೂ ಅವುಗಳನ್ನು ದಿವ್ಯ ತೀರ್ಥಗಳೆಂದು ನಂಬಿ ಸ್ನಾನ ಆಚಮನಗಳಿಗಾಗಿ ಉಪಯೋಗಿಸಲು ಅವರ ಮನಸ್ಸು ಹೇಸಿತು. ಅಲ್ಲದೆ ಮಹಾ ಪುಣ್ಯಕ್ಷೇತ್ರಗಳೆಂದು ಪ್ರಸಿದ್ಧಿ ಹೊಂದಿದ ತಿರುಪತಿ ಮುಂತಾದ ದೊಡ್ಡ ದೊಡ್ಡ ಸ್ಥಳಗಳಲ್ಲಿಯೂ ಯಾತ್ರಿಕರಿಂದ ಸಾಧ್ಯವಾದಷ್ಟೂ ದ್ರವ್ಯ ಸಂಗ್ರಹಮಾಡುವ ವಿವಿಧ ಮಾರ್ಗಗಳನ್ನು ಹುಡುಕಿಟ್ಟುಕೊಂಡು ನ್ಯಾಯಾನ್ಯಾಯ ಪುಣ್ಯಪಾಪ ಸತ್ಯಾಸತ್ಯಗಳನ್ನು ಗಮನಿಸದೆ, ಇಂತು ಕೇವಲ ದ್ರವ್ಯಸಂಗ್ರಹಣೋದ್ಯೋಗದಲ್ಲೇ ಮಗ್ನರಾಗಿದ್ದ ಕ್ಷೇತ್ರವಾಸಿ

ಗಳ-ಅರ್ಚಕವರ್ಗದ ಚರ್ಯೆಯು ಅವರನ್ನು ಅತಿಶಯ ಬೇಸರ ಗೊಳಿಸಿತು. 'ಅಂತಃಕರಣಪೂರ್ವಕವಾಗಿ-ಮನಸಾ ವಾಚಾ ಕರ್ಮಣಾ ಉದ್ದೇಶಿಸಿ ಮಾಡಿದ ಒಂದಾನೊಂದು ಪಾಪಕಾರ್ಯವು ಕ್ಷೇತ್ರವಾಸಿಗೆ ನಾಲ್ಕು ಹಣವನ್ನು ಕೊಟ್ಟಮಾತ್ರಕ್ಕೆ ಯಾವರೀತಿ ಪರಿಹಾರವಾಗುವುದು ?' ಎಂಬ ವಿಚಾರವು ಅವರ ಮನಸ್ಸನ್ನು ಬಾಧಿಸತೊಡಗಿತು. ಯಾತ್ರಾಸ್ಥಳಗಳಲ್ಲಿ ಧನವಂತರಿಗೆ ಮಾತ್ರ ನಡೆಯುತ್ತಿದ್ದ ಬಹು ಬಗೆಯ ಉಪಚಾರಗಳು, ಸ್ವಾಮಿಯ ದರ್ಶನಾದಿಗಳು ತೀರ್ಥ ಪ್ರಸಾದಗಳ ವಿನಿಯೋಗ ಮುಂತಾದುವುಗಳನ್ನೂ-ಒಂದಿಗೇ, ಯಾತ್ರೆಯ ಮಹೋದ್ದೇಶದಿಂದಲೇ ಬಹು ದೂರದಿಂದ ಕಷ್ಟಪಟ್ಟು ನಡೆದು ಬಂದಿದ್ದರೂ ಬಡವರಿಗೆ ಸ್ವಾಮಿಯ ದರ್ಶನಕ್ಕೂ, ತೀರ್ಥ ಪ್ರಸಾದಾದಿಗಳ ಪ್ರಾಪ್ತಿಗೂ ಉಂಟಾಗುತ್ತಿದ್ದ ಅಸಹನೀಯ ಕಷ್ಟತಾಪತ್ರಯಗಳನ್ನೂ ಕಣ್ಣಾರ ಕಂಡು ಅನಂತಶಾಸ್ತ್ರಿಯು ಆ ಕ್ಷೇತ್ರವಾಸಿಗಳ-ಮುಖ್ಯವಾಗಿ ಆ ದೇವಾಲಯಗಳ ಅಧಿಕಾರಿಗಳ ಉದ್ಧಟತನ ಸ್ವಾರ್ಥತೆ ದಂಭ ಮುಂತಾದುವುಗಳಿಗಾಗಿ ಬಹು ಅಸಹ್ಯಪಟ್ಟನು. ದೇವರಿಗೆ ತುಲಸೀ ಪುಷ್ಪಾದಿಗಳನ್ನು ಏರಿಸಿ ಪೂಜಿಸಬೇಕೆಂದರ ದುಡ್ಡು, ಹರಿದ್ರಾ ಕುಂಕುಮಾದಿಗಳಿಂದ ಅರ್ಚಿಸಲು ದುಡ್ಡು, ತೀರ್ಥಕೊಡಬೇಕಂದರ ದುಡ್ಡು, ಮಂಗಳಾರತಿ ಮಾಡಬೇಕೆಂದರೆ ದುಡ್ಡು, ಹೀಗೆ ಕುಳಿತರ ನಿಂತರ ದುಡ್ಡೇದುಡ್ಡಾಗಿರುವಾಗ ನಿರ್ಧನರು ಕೇವಲ ತಮ್ಮ ಬಡತನದ ಕಾರಣದಿಂದ ಸ್ವಾಮಿಯ ದರ್ಶನ ಅರ್ಚನಾದಿಗಳಿಗೆ ಶುದ್ಧವಾಗಿ ಅಪಾತ್ರರೇ ? ಎಂಬ ವಿಚಾರವಾದರೂ ಅವರ ಮನಸ್ಸನ್ನು ಬಾಧಿಸದಿರಲಿಲ್ಲ. ಈ ಸಂಗತಿಗಳ ಮೇಲೆ ಮನೆಯಲ್ಲಿ ಹೇರಳವಾತುಕಥೆಗಳು ನಡೆಯುವುವು ಪುರಾಣಗಳಲ್ಲಿ ಗುಂಭಾರ್ಥದಿಂದ ಹೇಳಲ್ಪಟ್ಟ ಅನೇಕ ವಿಚಾರಗಳಿಗೆ ಸಮಂಜಸಾರ್ಥಗಳುಂಟೇ ಎಂಬ ಬಗ್ಗೆ ಮನೆಯಲ್ಲಿ ಯಾವಾಗಲೂ ಚರ್ಚೆಯಿದ್ದೇ ಇರುತ್ತಿದ್ದಿತು. ಅನಂತಶಾಸ್ತ್ರಿಯು ಸಾಧ್ಯವಾದ ಮಟ್ಟಿಗೂ ಮನೆಯಲ್ಲಿನ ವಿಚಾರಯುಕ್ತ ಚಿತ್ತವೃತ್ತಿಯ ಪತ್ನೀಪುತ್ರರ ಪ್ರಶ್ನೆಗಳಿಗೆಲ್ಲಾ ಉತ್ತರಗಳನ್ನು ಹೇಳುತ್ತಿದ್ದನಾದರೂ, ದೇವರೂ ದುಡ್ಡಿಗೇ ಪ್ರಾಧಾನ್ಯತೆಯನ್ನು ಕೊಟ್ಟು ಧನವಂತರಾದವರಿಗೆ ಮಾತ್ರ ಸುಲಭನಾಗಿರುವನೇ ಎಂಬುದಕ್ಕೆ ಉತ್ತರವನ್ನು ಕೊಡಲಾರದಿದ್ದನು. ಭಕ್ತಿಪೂರ್ವಕವಾಗಿ ಸಮರ್ಪಿಸಿದ ಕೇವಲಪತ್ರಪುಷ್ಪಫಲತೋಯಾ (ನೀರು) ದಿಗಳನ್ನಾದರೂ

ಪ್ರೀತಿಯಿಂದ ಸ್ವೀಕರಿಸುತ್ತೇನೆಂದು ಸ್ವಾಮಿಯು ಹೇಳಿರುವಲ್ಲಿ, ಕ್ಷೇತ್ರಾ ದಿಗಳಲ್ಲಿ ಆಗುತ್ತಿರುವ ಈ ಸುಲಿಗೆಯು ಅರ್ಚಕಾದಿಗಳ ಸ್ವಾರ್ಥತೆಯ ಫಲ ವಾಗಿ ಉಂಟಾದುದಲ್ಲದೆ ಬೇರಲ್ಲವೆಂದು ಆತನಿಗೆ ಮನವರಿಕೆಯಾಯಿತು. ಆ ತಮ್ಮ ಸುಲಿಗೆಯ ಕಾರ್ಯಗಳನ್ನು ಅವ್ಯಾಹತವಾಗಿ ನಡೆಯಿಸಲು, ತಿರು ಪತಿಯಲ್ಲಿ ದೇವರಿಗೇ—'ತೀರ್ಥ ಪ್ರಸಾದಾದಿಗಳನ್ನು ಸಹ ಮಾರಿಕೊಂಡು ಧನವನ್ನು ಶೇಖರಿಸುವ ಕೃಪಣ'ನೆಂದು ಮುಂತಾಗಿ ಉಪನಾಮಕರಣಗಳ ನ್ನು ಮಾಡಿರುವುದೂ ಈ ಅರ್ಚಕ ಪರಂಪರೆಯ ಚೇಷ್ಟೆಯೇ ಎಂದು ಯೋ ಚಿಸದಿರಲು ಅವರಿಗೆ ಸಾಧ್ಯವಾಗಲಿಲ್ಲ. ಇವೆಲ್ಲವೂ ಚಿಕ್ಕವಯಸ್ಸಿನ ರಮಾ ಬಾಯಿಯ ಮನಸ್ಸಿನ ಮೇಲೆ ಸ್ಪಷ್ಟರೀತಿಯಿಂದ ಮೂಡುತ್ತಿದ್ದುವು.

ಹೀಗೆ ಪ್ರಯಾಣದೊಂದಿಗೇ ವಿದ್ಯಾಭ್ಯಾಸವೂ ಸಾಗುತ್ತಿರಲು ರಮಾ ಬಾಯಿಗೆ ಹದಿನೈದು ವರ್ಷಗಳು ತುಂಬುತ್ತಿರುವವೇಳೆಗೆ ಅನಂತಶಾಸ್ತ್ರಿಯು ಬಹು ವೃದ್ಧನಾದನು. ಬಿಡದೇ ಮಾಡುತ್ತಿದ್ದ ದೇಶಸಂಚಾರ, ಮಿತಿಯಿಲ್ಲದೆ ಅನುಭವಿಸಿದ ಕಷ್ಟಕಾರ್ಪಣ್ಯಗಳು, ತೀರ್ಥಕ್ಷೇತ್ರಾದಿಗಳಲ್ಲಿ ಆಚರಿಸುತ್ತಿದ್ದ ವ್ರತ ನಿಯಮ ಉಪವಾಸಾದಿಗಳು ಮುಂತಾದುವುಗಳಿಂದ ದೇಹವು ಜರ್ಝ ರಿತವಾಯಿತು. ದೃಷ್ಟಿಪಾಟವವು ಕಡಮೆಯಾಯಿತು. ಧ್ವನಿಯು ಕುಗ್ಗಿತು. ಕರಚರಣಾದಿಗಳಲ್ಲಿ ದಾರ್ಢ್ಯವು ತಪ್ಪಿ ದೇಹವು ಶಿಥಿಲವಾಯಿತು. ಮುಂದೆ ಪುರಾಣಾದಿಗಳಿಂದ ದ್ರವ್ಯಶೇಖರಮಾಡಿ ಕುಟುಂಬ ಭರಣಮಾಡುವ ಆ ಶೋತ್ತ್ರವು ಉಳಿಯಲಿಲ್ಲ. ಪೂರ್ವ ವಯಸ್ಸಿನಲ್ಲಿ ಸಂಪಾದಿಸಿದ ಅಪಾರ ದ್ರವ್ಯವು ವೆಚ್ಚವಾಗಿ ಹೋದುದಂತಿರಲಿ. ಈಚೆಗೆ ಕೆಲ ದಿನಗಳಿಂದ ಉತ್ತ ಮರೀತಿಯಿಂದಲೇ ಸಂಪಾದನೆಯಾಗುತ್ತಿದ್ದ ದ್ರವ್ಯದ ಲೇಶಾಂಶವೂ ಅವ ರಲ್ಲಿ ಉಳಿದಿರಲಿಲ್ಲ. ಆ ದಿನದ ಖರ್ಚಿಗಾಗಿ ಮಿಕ್ಕುದು ದಾನ ಧರ್ಮಗಳಿಗಾಗಿ ವಿನಿಯೋಗವಾಗುವುದು. ನಾಳೆಗೆ ಪುನಃ ದೇವರು ಕೊಡದಿರುತ್ತಾನೆಯೇ ಎಂಬ ನಂಬಿಕೆಯಮೇಲೆ ಆ ದಂಪತಿಗಳು ಆರ್ತರಾಗಿ ಯಾಚಿಸಿದವರಿಗೆ ತಮ್ಮಲ್ಲಿದ್ದುದನ್ನು ಕೊಟ್ಟುಬಿಡದೆ ಇರುತ್ತಿರಲಿಲ್ಲ. ಇದರಿಂದ ಎಂತೂ ಬ ಡತನವೂ ಒಂದಿಗೇ ಯಜಮಾನನ ವೃದ್ಧಾಪ್ಯವೂ ಏಕಕಾಲದಲ್ಲಿ ಅವರ ಮ ನೆಯೊಳಕ್ಕೆ ಒಟ್ಟಿಗೇ ಕಾಲುಚಾಚಿದುವು. ಮುಂದೆ ಪುರಾಣವು ಆತನಿಂದ ಸಾಗದಾಯಿತು! ಕೇವಲ ಹದಿನಾರು ವರ್ಷಗಳ ಆತನ ಮಗನು ಆ ವೃತ್ತಿ

ಯಿಂದ ದ್ರವ್ಯಸಂಪಾದನೆ ಮಾಡಲು ಅಶಕ್ತನಾಗಿದ್ದನು. ಬೇರಾವ ವೃತ್ತಿ ಪರಿಚಯವೂ ಅವರಿಗಿರಲಿಲ್ಲ. ಉತ್ತಮ ಸ್ಥಿತಿಯಲ್ಲಿ ಬದುಕಿದ ಅವರು ಭಿಕ್ಷೆ ಬೇಡುವುದನ್ನು ಮಾನಕ್ಕೆ ಕಡಮೆಯೆಂದು ತಿಳಿಯುತ್ತಿದ್ದರೆಂಬುದನ್ನು ಹೇಳ ಬೇಕಾದುದಿಲ್ಲವಷ್ಟೆ ! ಹೀಗಾಗಿ ಆ ಕುಟುಂಬವು ಬಹು ಕಷ್ಟತಾಪತ್ರಯ ಗಳಿಗೆ ಸಿಕ್ಕಿಬಿದ್ದಿತು.

ಆ ಕಾಲದಲ್ಲಿ ಎಂದರೆ ೧೮೭೬-೭೭ನೆಯ ಸಂ||ಗಳಲ್ಲಿ ಅನಂತಶಾಸ್ತ್ರಿಯ ಕುಟುಂಬದವರು ಮದರಾಸಾಧಿಪತ್ಯದಲ್ಲಿದ್ದರು. ಆಗ ಆ ಪ್ರಾಂತದಲ್ಲಿ ದೊಡ್ಡ ಕ್ಷಾಮವುಂಟಾಗಿ ಅನ್ನ ನೀರುಗಳನ್ನು ಕಾಣದೆ ಸಹಸ್ರಾರು ಮಂದಿ ಮೃತ್ಯುವಿಗೆ ತುತ್ತಾದರು. ಮೊದಲೇ ಬಡತನ ವೃದ್ಧಾಪ್ಯಾದಿಗಳ ಬಾಧೆ ಯಿಂದ ಬಳಲುತ್ತಿದ್ದ ಆತನಿಗೆ ಈ ಕ್ಷಾಮಬಾಧೆಯೂ ಉಂಟಾದಮೇಲೆ ಮುಂದೆ ಹೇಳುವುದೇನು ? ರಮಾಬಾಯಿಯ ಅಣ್ಣನು ತಮ್ಮ ಕುಟುಂಬದ ಆ ಬಡತನದ ನಿವಾರಣೆಗಾಗಿ, ಏಳುವಾರಗಳು ಕೇವಲ ಒಂದು ದೊನ್ನೆ ಜಲ ಪಾನ ಮಾಡಿಕೊಂಡು ಆಂಜನೇಯೋಪಾಸನೆಯನ್ನು ಮಾಡಿದನು. ಅದ ರಿಂದಲೂ ಏನೂ ಪ್ರಯೋಜನವಾಗಲಿಲ್ಲ. ಈ ಸ್ಥಿತಿಯಲ್ಲೇ ಅವರು ಮತ್ತೊಂದುವೇಳೆ ತಿರುಪತಿ ಬೆಟ್ಟವನ್ನು ಹತ್ತಿಮೇಲಕ್ಕೆ ಹೋದರು. ಮುಂದೆ ಹನ್ನೊಂದು ದಿನಗಳವರೆಗೆ ಅವರಿಗೆ ಒಂದಗುಳು ಅನ್ನ ಸಹ ದೊರೆಯಲಿಲ್ಲ. ಕೇವಲ ಮರದ ಎಲೆ ಕಾಯಿ ಕಸರುಗಳನ್ನು ತಿಂದು ನೀರು ಕುಡಿದು ಎಲ್ಲರೂ ಹೇಗೋ ಕಾಲಯಾಪನೆ ಮಾಡಿದರು. ಈ ಮಧ್ಯೆ ಅತಿಶಯ ಜ್ವರ ಬಾಧೆಯೂ ಆ ವೃದ್ಧನನ್ನು ಮತ್ತಷ್ಟು ಹಣ್ಣು ಮಾಡಿತು. ಅನಂತಶಾಸ್ತ್ರಿಯು ತನಗೆ ಅವಸಾನಕಾಲ ಒದಗಿತೆಂದು ಕೊಂಡನು. ಆ ದುಸ್ಥಿತಿಯಲ್ಲೂ ಆ ಸದ್ಬ್ರಾಹ್ಮಣನು ಅವಸರ ಸನ್ಯಾಸವನ್ನಾದರೂ ಸ್ವೀಕರಿಸಿ ಜಲ ಸಮಾಧಿ ಹೊಂದಿ ಜನ್ಮ ಸಾರ್ಥಕ್ಯವನ್ನುಂಟು ಮಾಡಿಕೊಳ್ಳಬೇಕೆಂದುಕೊಂಡನು. ಹಾಗೆಂದು ಯೋಚಿಸಿ, ಲಕ್ಷ್ಮೀಬಾಯಿಯನ್ನೂ, ಮಗನನ್ನೂ ಹತ್ತಿರಕ್ಕೆ ಕರೆದು ಕೊನೆಗಾಲದಲ್ಲಿ ಹೇಳಬೇಕಾದ ಬುದ್ಧಿವಾದಗಳನ್ನು ಹೇಳಿ ಕಳುಹಿಸಿ ಆಮೇಲೆ ರಮಾಬಾಯಿಯನ್ನು ಹತ್ತಿರಕ್ಕೆ ಕರೆದು, ತಲೆಯ ಮೇಲೆ ಕೈಯಿಟ್ಟು –"ಮಗಳೇ ನನ್ನ ಮಕ್ಕಳಲ್ಲೆಲ್ಲಾ ನೀನೇ ಕಿರಿಯವಳಾದ್ದರಿಂದ ನಿನ್ನ ಮೇಲೆ ನಾನು ಬಹು ಮಮತೆಯನ್ನಿಟ್ಟಿದ್ದೆನು. ನಿನ್ನನ್ನು ತಕ್ಕಮಟ್ಟಿಗೂ ವಿದ್ಯಾ

ವಂತಳನ್ನಾಗಿ ಮಾಡಿದ್ದೇನೆ. ನನಗೆ ಈಗ ಮೃತ್ಯುವೇಳೆಯು ಒದಗಿದೆ. ನನ್ನ ಮುದ್ದು ಮಗಳೆ! ದೇವರು ನಿನ್ನನ್ನು ಜೀವಂತಳನ್ನಾಗಿಟ್ಟಿದ್ದರೆ, ನೀನು ಎಂದಿಗೂ ಅಸತ್ಯ ಮಾರ್ಗವನ್ನು ಪ್ರವೇಶಿಸದಂತೆ ಎಚ್ಚರವಾಗಿರು. ಜಗತ್ಕರ್ತನನ್ನು ಮರಯದೆ ಮತಪದ್ಧತಿಗೆ ಕುಂದುತಾರದೆ, ಸರ್ವದಾ ಸತ್ಯಪಥದಲ್ಲೇ ನಡೆಯುತ್ತಿರು. ನಿನ್ನನ್ನು ಭಗವಂತನ ರಕ್ಷಣೆಗೆ ವಹಿಸುತ್ತೇನೆ — ಆತನೇ ನಿನ್ನನ್ನು ಕಾಪಾಡುವನು" ಎಂದು ಆಶೀರ್ವದಿಸಿದನು. ತರುವಾಯ ವಿದ್ವಾಂಸನಾದ ಆತನು ಶಾಸ್ತ್ರೋಕ್ತ ರೀತಿಯಿಂದ ಮನಸಾ ಸರ್ವಸಂಗಗಳನ್ನೂ ಪರಿತ್ಯಜಿಸಿ ಸಂಕಲ್ಪ ಪೂರ್ವಕವಾಗಿ ಸನ್ಯಾಸಾಶ್ರಮ ಸ್ವೀಕಾರ ಮಾಡಿದನು. ಆದರೆ ಜಲಸಮಾಧಿಯನ್ನು ಹೊಂದಲು ಇನ್ನೂ ಮೃತ್ಯುವೇಳೆಯು ಒದಗಿ ಬಂದಿರಲಿಲ್ಲವೆಂದು ತೋರುತ್ತದೆ, ಪುನಃ ಒಂದೆರಡು ದಿನಗಳು ಅತಿಶಯ ಕಷ್ಟದಿಂದ ಕಾಲ ಕಳೆದು ಎಲ್ಲರೂ ಬೆಟ್ಟದಿಂದಿಳಿದು ಸಮೀಪದ ಒಂದಾನೊಂದು ಗ್ರಾಮವನ್ನು ಸೇರಿ ಅಲ್ಲಿದ್ದ ಒಂದು ದೇವಸ್ಥಾನವನ್ನು ಆಶ್ರಯಿಸಿ ಮೃತ್ಯುಮುಖನಾಗಿದ್ದ ಶಾಸ್ತ್ರಿಯನ್ನು ನೆರಳಿನಲ್ಲಿ ಮಲಗಿಸಿದರು. ಹತ್ತೆಂಟು ದಿನಗಳಿಂದಲೂ ಹೊಟ್ಟೆ ತುಂಬುವಂತೆ ಒಪ್ಪೊತ್ತಿನ ಊಟವನ್ನು ಸಹ ಕಾಣದಿದ್ದ ಅವರ ಆಯಾಸ ಬಳಲಿಕೆ ಸಂಕಟಗಳನ್ನು ವರ್ಣಿಸಲಳವಲ್ಲ! ಕೊನೆಗೊಂದು ದಿನ ಆತನಿಗೆ ಮೃತ್ಯು ಒದಗಿತು. ಅವರು ಬ್ರಾಹ್ಮಣರು ಹೌದೋ ಅಲ್ಲವೋ ಎಂಬ ಸಂದೇಹದಿಂದ ಆ ಶವವನ್ನು ಅಲ್ಲಿಂದೆತ್ತಿ ಸಂಸ್ಕರಿಸುವುದಕ್ಕೆ ಸಹಾ ಆಗ್ರಾಮದ ಯಾರೂ ಸಹಾಯಕರಾಗಿ ಬಾರದೆ ಹೋದರು. ಆಗ ರಮಾಬಾಯಿಯೂ ಆಕೆಯ ಅಣ್ಣನೂ ಕಣ್ಣೀರು ಕಾಲುವೆಯಾಗಿ ಸುರಿಯುತ್ತಿರಲು ಮಹದ್ವ್ಯಸನದಿಂದ ಆ ತಮ್ಮ ವೃದ್ಧಪಿತನ ದೇಹವನ್ನು ಒಂದು ಧೋತ್ರದಲ್ಲಿ ಕಟ್ಟಿಕೊಂಡು, ಬಹು ಕಷ್ಟದಿಂದ ಹೊತ್ತು ಊರ ಹೊರಕ್ಕೆ ಸಾಗಿಸಿ, ಸನ್ಯಾಸಿಯ ದೇಹವಾದುದರಿಂದ ಹುಗಿದು ಎಂತೂ ಸಂಸ್ಕರಿಸಿ ಅತಿಶಯ ವ್ಯಸನದಿಂದ ಹಿಂದಿರುಗಿದರು. ಪತಿಯ ಮರಣವಾದ ತರುವಾಯ ಇತ್ತ ಲಕ್ಷ್ಮೀಬಾಯಿಯೂ ಜ್ವರದ ಮತ್ತು ಹಸಿವೆಯ ಬಾಧೆಯಿಂದ ನಿಶ್ಶಕ್ತಳಾದಳು. ಆಕೆಯು ತನ್ನ ಪತಿಗಿಂತಲೂ ಬಹು ಕಿರಿಯವಳಾಗಿದ್ದರೂ ರೋಗಬಾಧೆಯನ್ನು ಸಹಿಸಲಾರದೆ ಮೃತ್ಯುಮುಖವನ್ನು ಎದುರುನೋಡುತ್ತಾ ದಿನಕ್ಷಣಗಳನ್ನು ಎಣಿಸಸಾಗಿದಳು.

ಅಂತಹ ಸ್ಥಿತಿಯಲ್ಲೇ ಅವರು ಬಹುಕಷ್ಟಸಹನೆಮಾಡಿ ಅಲ್ಲಿಂದ ರಾಯಚೂರುವರೆಗೆ ಪ್ರಯಾಣಮಾಡಿ ಸಾಗಿದ್ದರು. ಅಲ್ಲಿಗೆ ಸೇರಿದ ಮೇಲೆ ಒಂದು ದಿನ ಆಕೆಯೂ ದೀರ್ಘನಿಶ್ವಾಸವನ್ನು ಬಿಟ್ಟಳು. ಅನಾಥರಾದ ಆ ಮಕ್ಕಳಿಬ್ಬರ ಕಷ್ಟಕಾರ್ಪಣ್ಯಗಳನ್ನು ಎಷ್ಟೆಂತ ವರ್ಣಿಸಲಾದೀತು? ರಮಾಬಾಯಿಯೂ ಆಕೆಯ ಅಣ್ಣನೂ ಆ ತಮ್ಮ ಪ್ರಿಯಮಾತೆಯ ಶವವನ್ನೂ ಭುಜತಲೆಗಳ ಮೇಲೆ ಹೊತ್ತು ರುದ್ರಭೂಮಿಗೆ ಸಾಗಿಸಿ ಎಂತೂ ದಹನಕ್ರಿಯೆಯನ್ನು ನೆರವೇರಿಸಿದರು. ಹೀಗೆ ಒಂದು ಪಕ್ಷಕಾಲದೊಳಗಾಗಿ ಮಾತಾಪಿತೃಗಳಿಬ್ಬರನ್ನೂ ಕಳೆದುಕೊಂಡು ಅನಾಥರಾದ ಆ ಅಣ್ಣತಂಗಿಯರು ತಮ್ಮ ಆ ಸ್ಥಿತಿಯಲ್ಲಿ ಮುಂದೆ ಏನು ಮಾಡಬೇಕೆಂದು ತೋರದೆ, ಕೆಲ ದಿನಗಳು ಉದ್ದೇಶಹೀನರಾಗಿ ಅಲ್ಲಿಯಿಲ್ಲಿ ಸುತ್ತಾಡುತ್ತಾ ಕಾಲ ಕಳೆದರು.



## ಅಧ್ಯಾಯ ೩ "ಪಂಡಿತಾ—ಸರಸ್ವತಿ"

ಲೋಕದಲ್ಲಿ ಪರರ ಕಷ್ಟವೇನೆಂಬುದನ್ನು ತಿಳಿಯಬೇಕಾಗಿದ್ದರೆ, ಮನುಷ್ಯನು ಸ್ವತಃ ಕಷ್ಟಾನುಭವ ಮಾಡಿರಬೇಕು. ಸರ್ವದಾ ಸುಖಸಂತೋಷಗಳ ಸಮೂಹದಲ್ಲೇ ಬೆಳೆದವನಿಗೆ ಕಷ್ಟ ದುಃಖ ಕ್ಷಾಮ ದಾರಿದ್ರ್ಯಾದಿಗಳಲ್ಲಿ ಮುಳುಗಿ ಕಾಲಯಾಪನೆ ಮಾಡುತ್ತಿರುವವರ ನಿಶ್ಚಯಸ್ಥಿತಿಯ ಜ್ಞಾನವಾಗುವುದು-ಸ್ವಾಭಾವಿಕವಾಗಿ ಸಾಧ್ಯವಿಲ್ಲ. ಅಲ್ಲ-ಹಾಗೂ ಅಲ್ಲ: ಯಾವಾಗಲೂ ಸುಖಸಂತೋಷಗಳಲ್ಲಿ ಮುಳುಗಿದ್ದವನು, ದುಃಖಿಗಳ ನಿಜಸ್ಥಿತಿಯನ್ನಲ್ಲ-ಸುಖಸಂತೋಷಗಳ ನಿಜವಾದ ಅನುಭವವನ್ನು ಸಹ ಹೊಂದಲಾರನು. ಉಪ್ಪು ಕಾರಗಳನ್ನು ತಿಂದವನಿಗೆ ಸಿಹಿಯು ರುಚಿ ತೋರುವಂತೆ ಸರ್ವದಾ ಬೆಲ್ಲ ಸಕ್ಕರೆಗಳನ್ನೇ ತಿನ್ನುತಿದ್ದವನಿಗೆ ತೋರಲಾರದಲ್ಲವೆ! ಕಾಲಿಗೆ ಜೋಡನ್ನು ಮೆಟ್ಟಿಕೊಂಡಿರುವವನಿಗೆ ಪ್ರಪಂಚವೆಲ್ಲ ಚಕ್ಕಳದಿಂದಲೇ ಹೊದಿಸಲ್ಪಟ್ಟಿರುವಂತೆ ಗೋಚರಿಸುವುದು ಸ್ವಾಭಾವಿಕವು. ಆದುದರಿಂದ ಕಷ್ಟಪಟ್ಟು, ಕಷ್ಟದ ಸ್ವರೂಪವೇನೆಂಬುದನ್ನು ತಿಳಿದಿರುವವರಿಗೆ ಐಶ್ವರ್ಯ ಪದ

ವಿಗಳು ದೊರೆತಲ್ಲಿ - ಒಂದು ವೇಳೆ ಅವರು ದುರ್ವ್ಯಸನದಿಂದ ಸ್ವಾರ್ಥಿಗಳೂ ದುರಹಂಕಾರಿಗಳೂ ಆಗಿ, ತಮ್ಮ ಪೂರ್ವಸ್ಥಿತಿಯನ್ನು ಮರೆಯದಿದ್ದರ- ಲೋಕಕ್ಕೆ ಅಲ್ಪಸ್ವಲ್ಪ ಮೇಲುಂಟಾಗಬಹುದಲ್ಲದೆ, ಆ ಭರ್ಗ ಶ್ರೀಮಂತ ರಿಂದಲೇ ದುಃಖಿಗಳ ದುಃಖಶಮನವಾಗುವುದೆಂದು ಭಾವಿಸುವುದು ಮೊಲಕ್ಕೆ ಕೊಂಬು ಹುಟ್ಟುವುದೆಂದು ನಂಬುವಷ್ಟು ನಿಶ್ಚಯ. ಆದರೆ, ಪೂರ್ವ ಸುಕೃತ ವಿಶೇಷದಿಂದ ಅಂತಹ ಆಗರ್ಭ ಶ್ರೀಮಂತರು ಲೋಕಸಂಗ್ರಹ ಣದ ಸದುದ್ದೇಶಪ್ರೇರಿತರಾಗಿ ಅಪೇಕ್ಷೆಪಟ್ಟು ದಾರಿದ್ರ್ಯವನ್ನು ಸ್ವೀಕರಿಸು ವರಾದರೆ, ಜಗತ್ತಿನಲ್ಲಿ ವ್ಯಾಪಿಸಿರುವ ಅಸಂಖ್ಯ ಪ್ರಾಣಿಗಳ ದುಃಖ ಕಷ್ಟ ಸಂ ಕಟಗಳು ದೂರವಾಗುವುವು. ಇದಕ್ಕೆ ಗೌತಮಬುದ್ಧ, ಅಶೋಕ ಚಕ್ರ ವರ್ತಿ, ಮಹಾತ್ಮಾ ಗಾಂಧಿ ಮುಂತಾದವರು ಉದಾಹರಣಸ್ವರೂಪರು.

ನಮ್ಮ ಕಥಾನಾಯಿಕೆಯಿಂದ ಪ್ರಪಂಚದಲ್ಲಿ ನಡೆಯಿಸಬೇಕಾಗಿದ್ದ ಅಗಾಧಕಾರ್ಯಗಳ ಪೂರ್ವಸಿದ್ಧತೆಗಾಗಿಯೋ ಎಂಬಂತೆ, ಆಕೆಯನ್ನು ಈ ಅನುಭವವೆಂಬ ಪಾಠಶಾಲೆಯಲ್ಲಿಟ್ಟು ಸರ್ವೇಶ್ವರನು, ಭಾರತದೇಶದಲ್ಲಿ ವಿಶೇಷ ಸಂಖ್ಯೆಯವರಾಗಿರುವ ಕ್ಷುದ್ರದರಿದ್ರರು ಎಂತೆಂತಹ ಕಷ್ಟ ದುಃಖ ಸಂಕಟಗಳ ಪಾಲಾಗಿದ್ದಾರೆಂಬುದನ್ನು ಆಕೆಗೆ ಮನವರಿಕೆ ಮಾಡಿಸಿದನು. ಆ ಕಷ್ಟಕಾರ್ಪಣ್ಯಗಳನ್ನು ಸಾಧ್ಯವಾದಷ್ಟುಮಟ್ಟಿಗೆ ನೀಗಿಸಲು ಆಕೆಯ ಬಳಿ ದುಡ್ಡುಕಾಸುಗಳಿಲ್ಲದಿದ್ದರೂ, ಆಕೆಯಲ್ಲದ್ದ ಅಕ್ಷಯ ಪ್ರಜ್ಞಾ ಸೌಭಾ ಗ್ಯವು ಬೇಕಾದಷ್ಟು ಹಣಕಾಸುಗಳನ್ನೊದಗಿಸುವ ಸಾಮರ್ಥ್ಯವುಳ್ಳದೆಂ ಬುದು ಸರ್ವೇಶ್ವರನಿಗೆ ಗೋಚರವಿಲ್ಲವೇನು ? ತಾಯಿತಂದೆಗಳು ಮೃತರಾದ ಕೆಲವು ದಿನಗಳೊಳಗಾಗಿಯೇ ಬಹು ದಿನಗಳಿಂದ ರೋಗಬಾಧೆಯಿಂದ ನರ ಳುತ್ತಿದ್ದ ಅವರ ಅಕ್ಕನೂ ಮೃತ್ಯುವಶಳಾದಳು. ಮುಂದೆ ಉಳಿದವರು ರಮಾಬಾಯಿ ಮತ್ತು ಶ್ರೀನಿವಾಸನೆಂಬ ಆಕೆಯ ಅಣ್ಣ ! ಈ ಇಬ್ಬರೂ ತಮಗೆ ಮುಂದೆ ಮಾರ್ಗವೇನು ಎಂಬುದೇ ಗೋಚರವಾಗದೆ, ಕೇವಲ ವಿಧಿ ಪ್ರೇರಿತರಂತೆ-ಕಾಲು ಕರೆದೊಯ್ದೆಡೆಗೆ ನಡೆಯುತ್ತಾ-ಸಾಗುತ್ತಿದ್ದರು. ಹೀಗಾಗಿ ಕೆಲವು ದಿವಸಗಳ ಮೇಲೆ ಅವರು ಎಲ್ಲೆಲ್ಲೋ ಸುತ್ತಿ ಕೊನೆಗೆ ಪಂಜಾಬು ದೇಶವನ್ನು ಸೇರಿದರು. ಅಲ್ಲಿಯ ಭಯಂಕರ ಚಳಿಯನ್ನು ಸಹಿ ಸುವುದು ಕ್ಷುದ್ಬಾಧೆಗಿಂತಲೂ ಅತಿಶಯ ಕಷ್ಟವೆನ್ನಿಸಿತು. ಅದರಿಂದ ಬಿಡು

ಗಡೆಹೊಂದಲು ಅವರಲ್ಲಿ ತಕ್ಕಷ್ಟು ಬಟ್ಟೆಬರೆಗಳೂ ಸಹ ಇಲ್ಲದೆ, ಅವರು ನದಿಯ ಒಣಮರಳಿನಲ್ಲಿ ತಮ್ಮ ದೇಹಗಳು ಹಿಡಿಸುವಂತೆ ಚಿಕ್ಕಗುಂಡಿಗಳನ್ನು ಮಾಡಿ, ಅವುಗಳಲ್ಲಿ ಕುಳಿತುಕೊಂಡು ಮೇಲೆ ಒಣಗಿದ ಮರಳನ್ನು ಎಳೆದುಕೊಂಡು ಹೀಗೆ ಚಳಿಯುಬಾಧೆಯನ್ನು ನಿವಾರಿಸಿಕೊಳ್ಳುತ್ತಾ ಕೆಲ ದಿನಗಳನ್ನು ಕಳೆದರಂತೆ! ಮುಂದೆ ಕಾಶ್ಮೀರ ದೇಶದಲ್ಲೂ ಹಿಮಾಲಯಾ ಪರ್ವತದ ಪ್ರದೇಶಗಳಲ್ಲೂ ಸಂಚರಿಸಿ, ಅನೇಕ ಪುಣ್ಯಾತೀರ್ಥಗಳಲ್ಲಿ ಸ್ನಾನ ಮಾಡಿ ಅಲ್ಲಲ್ಲಿ ದೊರೆತ ದೇವ ದೇವತೆಗಳನ್ನೂ ಆರಾಧಿಸಿದರು. ಎಷ್ಟೊ ಸ್ಥಳಗಳಲ್ಲಿ ಕಂಡಕಂಡ ದೇವರಿಗೆಲ್ಲಾ ಕೈಮುಗಿದು, ಪುಣ್ಯಕ್ಷೇತ್ರಗಳಲ್ಲಿ ಮಿಂದರಾದರೂ ಅವರ ದಾರಿದ್ರ್ಯ ದುಃಖವು ಲೇಶಮಾತ್ರವೂ ಕುಂದಲಿಲ್ಲ. ರೋಗ ದುಃಖ ದಾರಿದ್ರ್ಯಾದಿಗಳು ಪಾಪದ ಫಲವಾಗಿ ಪ್ರಾಪ್ತವಾಗುತ್ತವೆಂಬ ಸಂಗತಿಯು ಅವರಿಗೆ ತಿಳಿದಿತ್ತಾದುದರಿಂದ-ಅಂತಹ ಜನ್ಮ ಜನ್ಮಾಂತರದ ಅನಂತ ಪಾಪ ರಾಶಿಗಳನ್ನಾದರೂ ಕ್ಷಯಿಸುವುದರಲ್ಲಿ ಸುಪ್ರಸಿದ್ಧ ಕ್ಷೇತ್ರಗಳೆಂದು ಹೆಸರುವಾಸಿಯಾಗಿದ್ದ ಅನೇಕ ದಿವ್ಯಸ್ಥಳಗಳನ್ನು ಸಂದರ್ಶಿಸಿ, ತೀರ್ಥಸ್ನಾನ ಆರಾಧನೆಗಳನ್ನು ನಡೆಯಿಸಿ, ವ್ರತನಿಯಮ ಉಪವಾಸಗಳನ್ನು ಆಚರಿಸಿದರಾದರೂ ಲೇಶಾಂಶವೂ ಫಲವಾಗದಿದ್ದುದು ಅವರ ನಂಬಿಕೆಯನ್ನು ಹೋಗಲಾಡಿಸಿತು. ಸಾಲದುದಕ್ಕೆ ಅಂತಹ ಪುಣ್ಯಕ್ಷೇತ್ರ ತೀರ್ಥಗಳ ಸಾನಿಧ್ಯದಲ್ಲೂ-ಅವುಗಳ ಆಧಿಪತ್ಯವನ್ನು ವಹಿಸಿದ್ದ ಜನಗಳಲ್ಲಿ ನೆಲೆಸಿದ್ದ ಅತ್ಯಾಸೆ ಕ್ಷುದ್ರತನ ಒಣದಂಭ ದರ್ಪಗಳೂ ಧಾರ್ಮಿಕ ಅಶ್ರದ್ಧೆ ಧರ್ಮಾಂಧತೆ ಮುಂತಾದುವುಗಳೇ ಅವರ ಕಣ್ಣಿಗೆ ಬೀಳುತ್ತಿದ್ದುವು. ಇವುಗಳನ್ನೆಲ್ಲ ಕಂಡು ಬೇಸರಪಟ್ಟ ಅವರು, ಯಾವ ಪ್ರಯತ್ನದಿಂದ ಆ ದುಃಖ ದುಸ್ಥಿತಿಗಳನ್ನು ಮೂಲೋತ್ಪಾಟನಗೊಳಿಸಬಹುದೆಂದು ಯೋಚಿಸುತ್ತಾ ಪ್ರಯಾಣಮಾಡಿ, ಕೆಲವು ದಿನಗಳಮೇಲೆ ಕಲ್ಕತ್ತಾ ಪಟ್ಟಣವನ್ನು ಸೇರಿದರು.

ಆಗ ಕಲ್ಕತ್ತಯು ಭಾರತದೇಶದ ರಾಜಧಾನಿನಗರವಾಗಿದ್ದುದಲ್ಲದೆ, ಸಮಸ್ತ ವಿಧವಾದ ಲೌಕಿಕಾಭಿವೃದ್ಧಿ ಕಾರ್ಯಗಳಿಗೂ ಮಾತೃಸ್ಥಾನವೂ ಮಾರ್ಗದರ್ಶಿಯೂ ಆಗಿದ್ದಿತು. ಬಹುವಿಧ ದುಃಖ ತಾಪತ್ರಯಗಳೂ, ರೋಗ ಕ್ಷುದ್ರ ದಾರಿದ್ರ್ಯಾದಿಗಳೂ ಹಳ್ಳಿಗಾಡಿನ ಗಿಂತಲೂ ಅಂತಹಪಟ್ಟಣ

ಗಳಲ್ಲಿ ಮನೆ ಮಾಡಿಕೊಂಡಿರುವುದೇ ಹೆಚ್ಚು. ಪಟ್ಟಣವಾಸಿಗಳ ಜೀವಿತದಲ್ಲಿ ಮುಖ್ಯವಾದ ಮೂರು ಸ್ಥಿತಿಗಳು ಕಂಡು ಬರುವುವು. ಐಶ್ವರ್ಯವಂತರು ದಿನದಿನವೂ ತಮ್ಮ ಪರಿಪರಿಯ ಭೋಗಸಾಮಗ್ರಿಗಳನ್ನು ಹೆಚ್ಚಿಸಿಕೊಳ್ಳುತ್ತಾ, ಮಿಕ್ಕ ಪ್ರಪಂಚದ ವಿಚಾರವನ್ನೇ ಯೋಚಿಸದೆ ಲೌಕಿಕ ವಿಷಯಾಭಿಲಾಷೆಯಲ್ಲಿ ಮುಳುಗಿ ಉರುಳಾಡುತ್ತಿರುವರು. ಕ್ಷುದ್ರ ದರಿದ್ರರು, ತಿನ್ನಲು ಕೂಳಿಲ್ಲದೆ, ಉಡಲು ಗೇಣುಬಟ್ಟೆಗೂ ಮಾರ್ಗ ಕಾಣದೆ ಬಹು ವಿಧ ರೋಗ ದುಃಖ ಸಂಕಟಗಳ ಪಾಲಾಗಿ ನರಳುತ್ತಾ ನರಕದಲ್ಲಿನ ಕ್ರಿಮಿಗಳೋ ಎಂಬಂತೆ ಹೊರಳುತ್ತಿರುವರು. ಈ ಇಬ್ಬರಿಗೂ ಮಧ್ಯಮ ತರಗತಿಯುವರೊಬ್ಬರುಂಟು. ಅವರು ಧನವಂತರಿಗೆ ಸೇವೆ ಮಾಡುವುದರಲ್ಲಿ ನಿರತರಾಗಿ ಹಾಗೆ ದೊರೆತಷ್ಟು ಸಂಪಾದನೆಯಿಂದ ಕಾಲ ಯಾಪನೆ ಮಾಡುತ್ತಿರುವರು. ಕೇವಲ ಪರಾಧೀನತೆಯಿಂದ ಜೀವಿಸುತ್ತಿರುವ ಆ ಸೇವಕಾ ವೃತ್ತಿಯುವರು ದೇಹ ಮನೋಬುದ್ಧಿಗಳ ಸ್ವಾತಂತ್ರ್ಯವನ್ನು ಕಳೆದುಕೊಂಡು ಕೇವಲ ಆ ವಿಷಯೇಚ್ಛುಗಳ ಕೈಬೊಂಬೆಗಳಾಗಿ ಕುಣಿಯುತ್ತಾ ಜೀವಿತವನ್ನು ಸಾಗಿಸುತ್ತಿರುವರು. ಈ ಮೂರು ತರಗತಿಗಳಲ್ಲದೆ ವಿವಿಧವೃತ್ತಿ ವ್ಯಾಪಾರ ರಾಜಸೇವೆ ಮುಂತಾದುವುಗಳನ್ನನುಸರಿಸಿದ ಜನರು ಸರ್ವದಾ ಅರ್ಥ ಸಂಗ್ರಹಣಶೀಲರಾಗಿ ಆ ವಿಚಾರದಲ್ಲೇ ಮಗ್ನರಾಗಿರುವುದರಿಂದ ಪಟ್ಟಣವಾಸದಲ್ಲಿ ಶಾಂತತೆಯೆಂಬುದು ಲವಮಾತ್ರವೂ ದೊರೆಯಲಾರದು. ಆದರೆ, ಯಾವುದಾದರೊಂದು ಬಗೆಯ ಸುಧಾರಣಾದಿಗಳು ಪ್ರಾರಂಭವಾಗಿ ಪ್ರಚುರವಾಗಬೇಕಾದರೆ, ಅವು ಹೀಗೆ ವಿವಿಧ ರೀತಿಯ ಜೀವಿತಗಳನ್ನುಂಟಾಗಿರುವ ಪಟ್ಟಣಗಳಲ್ಲಿ ಅಲ್ಲದೆ ಕ್ಷುದ್ರ ಗ್ರಾಮಗಳಲ್ಲಿ ಆಗಲಾರವು. ಬಡಜನಗಳ ದುಃಖ ದಾರಿದ್ರ್ಯಾದಿಗಳ ಶಮನಕ್ಕಾದರೂ ಕಾರಣಗಳು ಇಂತಹ ಸ್ಥಳಗಳಿಂದಲೇ ಹುಟ್ಟಿ ಹರಡಬೇಕು. ಅವುಗಳು ಅಡಿಗಡಿಗೆ ಕಣ್ಣಿಗೆ ಬೀಳುತ್ತಿರುವ ಕಾರಣದಿಂದ, ಎಂತಹ ಕಲ್ಲುಹೃದಯಿ ಯಾದರೂ ಒಂದೊಂದುವೇಳೆ ಲೇಶಮಾತ್ರ ಮೃದು ಭಾವವನ್ನು ವಹಿಸಿ ಆ ಬಡತನ ರೋಗ ಸಂಕಟಗಳ ನಿವಾರಣೆಗಾಗಿಯೂ ದುಃಖಿಗಳ ಸ್ಥಿತಿಯ ಸುಧಾರಣೆಗಾಗಿಯೂ ಅಲ್ಪ ಸ್ವಲ್ಪ ಪ್ರಯತ್ನಗಳು ನಡೆಯುತ್ತಿರುವುವು. ನಮ್ಮ ಕಥಾನಾಯಿಕೆಯಾದ ರಮಾಬಾಯಿ ಡೋಂಗ್ರೆಯೂ, ಆಕೆಯ

ಅಣ್ಣ ಶ್ರೀನಿವಾಸ ಅನಂತಶಾಸ್ತ್ರಿ ಡೋಂಗ್ರೆಯೂ ಅಲ್ಲಿಗೆ ೧೮೭೮ ನೆಯ ಸಂ|| ದಲ್ಲಿ ಬಂದುಸೇರಿ ಅಲ್ಲಿಯ ಸ್ಥಿತಿಗತಿಗಳೇನೆಂಬ ವಿಚಾರವನ್ನು ಕುರಿತು ತಿಳಿದುಕೊಳ್ಳತೊಡಗಿದರು. ರಮಾಬಾಯಿಯು ತಾನು ಅವರೆಗೆ ಕಲಿತಿದ್ದ ವಿದ್ಯಾಪ್ರಭಾವದಿಂದ ಜನಮನರಂಜಕವಾಗಿ ಉಪನ್ಯಾಸಗಳನ್ನು ಕೊಡಲು ಪ್ರಾರಂಭಿಸಿದಳು. ಆ ಉಪನ್ಯಾಸಗಳು ಸಂಸ್ಕೃತ ಭಾಷೆಯಲ್ಲೇ ನಡೆಯು ತ್ತಿದ್ದುದರಿಂದ ಜನಸಾಮಾನ್ಯಕ್ಕಿಂತಲೂ ಸಂಸ್ಕೃತ ವಿದ್ಯಾಭ್ಯಾಸಮಾಡಿ ದ ನಾಗರಿಕರೂ ಸುಪ್ರಸಿದ್ಧ ಪಂಡಿತರೂ ಆಕೆಯ ಉಪನ್ಯಾಸಗಳಿಗೆ ಬರು ವಂತಾದುದರಿಂದ ಆಕೆಯ ಕೀರ್ತಿಯು ಸ್ವಲ್ಪಕಾಲದಲ್ಲೇ ಬಹುದೂರ ವ್ಯಾಪಿಸಿತು. ಆ ಸ್ಥಳದ ಆಂಗ್ಲೇಯ ವಿದ್ಯಾಭ್ಯಾಸಮಾಡಿದ ದೊಡ್ಡ ಮನು ಷ್ಯರನೇಕರು ತಮ್ಮ ಸ್ತ್ರೀಯರಿಗೆ ಶಾಸ್ತ್ರಾಧಾರಗಳೊಂದಿಗೆ ಆರ್ಯಸ್ತ್ರೀ ಧರ್ಮಗಳನ್ನು ಕುರಿತು ಉಪನ್ಯಸಿಸುವಂತೆ ಆಕೆಯನ್ನು ಕೇಳಿಕೊಳ್ಳುತ್ತಿ ದ್ದರು. ಆಕೆಯು ಸಂಸ್ಕೃತದಲ್ಲಿ ಹೇಳಿದ ವಿಚಾರವು ಬಂಗಾಳಿ ಭಾಷೆ ಯಲ್ಲಿ ತರ್ಜುಮೆಮಾಡಿ ಸಭೆಯವರಿಗೆ ಹೇಳಲ್ಪಡುತ್ತಿದ್ದಿತು. ಹೀಗೆ ಕೆಲದಿನಗಳು ಸಾಗಿದುವು.

ಇಪ್ಪತ್ತು ವರ್ಷಗಳ ವಯಸ್ಸಾದರೂ ಇನ್ನೂ ವಿವಾಹಿತಳಾಗದಿ ದ್ದುದೂ ಭಾರತಸ್ತ್ರೀಯರು ಕಲಿಯಕೂಡದೆಂದು ಪ್ರತಿಬಂಧಕವಿದ್ದ ಸಂಸ್ಕೃತ ಭಾಷಾಭ್ಯಾಸವನ್ನು ಮಾಡಿದ್ದುದೂ ರಮಾಬಾಯಿಯನ್ನು ಕುರಿತು ಜನರು ವಿವಿಧ ರೀತಿಯಿಂದ ಮಾತನಾಡಿಕೊಳ್ಳಲು ಹೆಚ್ಚು ಅವ ಕಾಶವನ್ನು ಕಲ್ಪಿಸಿತು. ಅವರು ಹುಟ್ಟಿ ಬೆಳೆದ ಕಷ್ಟ ಕಾರ್ಪಣ್ಯಗಳ ಕಥೆ ಯನ್ನು ಕೇಳಿದವರು, ತನ್ನ ಕೊನೆಗಾಲದಲ್ಲಿ ಅನಂತಶಾಸ್ತ್ರಿಯು-' ಮಗ ಳೇ ನಿನ್ನನ್ನು ಭಗವಂತನ ರಕ್ಷಣೆಗೆ ವಹಿಸುತ್ತೇನೆ. ಆತನೇ ನಿನ್ನನ್ನು ಕಾಪಾಡುವನು ' ಎಂದು ನುಡಿದಿದ್ದುದು, ಆಕೆಯನ್ನು-ಪಶ್ಚಿಮಪ್ರಾಂತ್ಯ ದಲ್ಲಿರುವ ಪದ್ಧತಿಯಂತೆ ವಿಠೋಬನಿಗೆ ದೇವದಾಸಿಯಾಗಿ ಬಿಟ್ಟನೆಂದು ಕೆಲವರು ಅರ್ಥಮಾಡಿಕೊಂಡರು. ಆದರೆ ಹಾಗೆ ಯೋಚಿಸಲು ಏನೂ ಆಧಾರವಿಲ್ಲ. ಅನಂತಶಾಸ್ತ್ರಿಯು ನಮ್ಮ ಸ್ತ್ರೀಯರ ವಿಚಾರದಲ್ಲಿ, ಭಾರತಜನಾಂಗದಲ್ಲಿ ಬಹುದಿನಗಳಿಂದ ನಡೆದುಬಂದಿರುವ ಕಠಿಣ ನಿರ್ಬಂಧ ಪದ್ಧತಿಗಳನ್ನು ಒಪ್ಪದೆ, ತನ್ನ ಕುಲಸ್ಥರಿಗೂ ಬಂಧುಬಳಗದವರಿಗೂ

ವಿರೋಧವಾಗಿ ತನ್ನ ಹೆಂಡತಿಗೂ ಮಗಳಿಗೂ ವಿದ್ಯಾಭ್ಯಾಸಮಾಡಿಸಿದ ನೆಂಬುದು ಈ ವರಗೇ ತಿಳಿವಿದೆಯಲ್ಲವೆ! ಆ ಅಭಿಪ್ರಾಯದಿಂದಲೇ ತನ್ನ ಮಗಳು ಸಂಪೂರ್ಣ ವಿದ್ಯಾವತಿಯಾಗಿ ತರುವಾಯ ತಾನೇ ಅಪೇಕ್ಷಿಸಟ್ಟು ಮೆಚ್ಚುವ ವರನನ್ನು ತನ್ನ ಇಷ್ಟಾನುಸಾರ ವರಿಸಿ ವಿವಾಹವಾಗಲೆಂದು ಮನಸಾ ಅಪೇಕ್ಷಿಸಿದ್ದನಾದುದರಿಂದ ತಾನು ಬದುಕಿರುವವರೆಗೆ ಆಕೆಯ ಮದುವೆಯ ವಿಚಾರವನ್ನು ಕುರಿತು ಯೋಚನೆಯನ್ನೇ ಮಾಡಿರಲಿಲ್ಲ. ಇದಲ್ಲದೆ, ಸುಧಾರಣಾಚಿತ್ತವೃತ್ತಿಯ ಆ ಬ್ರಾಹ್ಮಣನು ತನ್ನ ಮಗಳನ್ನು ಹೇಯವಾದ ದೇವದಾಸಿಯನ್ನಾಗಿ ಬಿಡಲು ಒಪ್ಪುವನೆಂದು ಯೋಚಿಸು ವುದಾದರೂ ಸರ್ವಥಾ ಉಚಿತವಲ್ಲ!

ಕಲ್ಕತ್ತಾ ಪಟ್ಟಣಕ್ಕೆ ಬಂದ ಕೆಲವು ದಿನಗಳೊಳಗಾಗಿ, ಅವರು ಆಗ ಬ್ರಹ್ಮ ಸಮಾಜದಲ್ಲಿ ಸುಪ್ರಸಿದ್ಧ ಬೋಧಕ ಶಿರೋಮಣಿಯೆನಿಸಿದ್ದ ಶ್ರೀ. ಕೇಶವ ಚಂದ್ರಸೇನನ ದರ್ಶನಮಾಡಿದರು. ಆತನು ರಮಾಬಾಯಿಯ ವಿದ್ವತ್ತಿಗಾಗಿಯೂ ಪ್ರಜ್ಞಾವಾಗ್ಮಿಗಳಿಗಾಗಿಯೂ ಪರಮಾನಂದಪಟ್ಟು ಆಕೆಯನ್ನು ತನ್ನ ಮನೆಯ ಸ್ತ್ರೀಯರಿಗೆ ಪರಿಚಯಮಾಡಿಸಿ, ಆಕೆಗೆ ಒಂದು ವೇದಗ್ರಂಥವನ್ನೂ ಕೆಲವು ಉಪನಿಷತ್ಪುಸ್ತಕಗಳನ್ನೂ ಬಹುಮಾನವಾಗಿ ಕೊಟ್ಟು ಅವುಗಳನ್ನೂ ಓದಿಕೊಳ್ಳೆಂದು ಹೇಳಿದನು.

ಇನ್ನೂ ಕೇವಲ ಇಪ್ಪತ್ತು ವರ್ಷ ಪ್ರಾಯದ ಆ ಸ್ತ್ರೀರತ್ನವು ಅಭಿ ನವ ವಾಗ್ದೇವಿಯೋ ಎಂಬಂತೆ, ದಿವ್ಯ ಗೀರ್ವಾಣಭಾಷೆಯಲ್ಲಿ ಗಂಟೆಗಂಟೆ ಗಳವರೆಗೆ ಸ್ಪಷ್ಟವಾಗಿ ತಡೆಬಡೆಯಿಲ್ಲದೆ ಪ್ರಸಂಗಿಸುತ್ತಿದ್ದುದನ್ನು ಕೇಳಿ, ಆ ನಗರವಾಸಿಗಳು ಅದ್ಭುತಪಟ್ಟರು. ಆಕೆಯಲ್ಲಡಗಿದ್ದ ವಿದ್ಯಾಧನವಾದರೂ ಅಲ್ಪವಾದುದಲ್ಲ. ಭಾಗವತ ಮಹಾಗ್ರಂಥದ ಹದಿನೆಂಟು ಸಹಸ್ರ ಶ್ಲೋಕ ಗಳೂ ಆಕೆಗೆ ಹೃದ್ಗತವಾಗಿದ್ದುವು ಅಲ್ಲದೆ ಬಹು ಕಠಿಣವಾದ ವ್ಯಾಕರಣ ಶಾಸ್ತ್ರದ ಗೂಢವಿಷಯಗಳೂ ಛಂದಶ್ಶಾಸ್ತ್ರದ ರಹಸ್ಯಗಳೂ ಆಕೆಗೆ ಪರಿಚಯ ವಾಗಿದ್ದುವು. ಸಂಸ್ಕೃತದಲ್ಲಿ ಸರಾಗವಾಗಿ ಮಾತನಾಡುತ್ತಿದ್ದುದು ಮಾತ್ರ ವಲ್ಲ.-ಸಭೆಯಲ್ಲಿ ನಿಂತಿದ್ದಂತೆಯೇ ಯಾವ ಬಗೆಯ ಶ್ರಮೆಯನ್ನೂ ತೋರ್ಪ ಡಿಸದೆ ಛಂದೋಬದ್ಧವಾಗಿ ದಿವ್ಯ ಸಂಸ್ಕೃತ ಶ್ಲೋಕಗಳನ್ನು ಕವನಮಾಡಿ ಹೇಳುವ ಸಾಮರ್ಥ್ಯವನ್ನೂ ಗಳಿಸಿದ್ದಳು. ಆಕೆಯ ಪ್ರತಿಭೆಗಾಗಿ ಕಲ್ಕತ್ತಾ

ಪ್ರಾಂತದ ವಿದ್ವಾಂಸ ಪ್ರಪಂಚವೇ ಅದ್ಭುತಪಟ್ಟುಹೋಯಿತು. ಆಕೆಯ ವಿದ್ಯಾವೈದುಷ್ಯಗಳಿಗಾಗಿ ಉಬ್ಬರಾದ ಕಲ್ಕತ್ತಾ ನಗರದ ವಿದ್ವಾಂಸ ಸಮೂಹವು, ಅಲ್ಲಿಯ ವಿಶ್ವವಿದ್ಯಾನಿಲಯದ ಉಪನ್ಯಾಸಮಂದಿರದಲ್ಲಿ ಒಂದು ದೊಡ್ಡ ಸಭೆಯನ್ನು ನೆರೆಯಿಸಿ ಅದರಲ್ಲಿ ಆಕೆಯ ಅದ್ಭುತ ಪ್ರಜ್ಞಾ ದಿವ್ಯ ವಾಗ್ವಿಜೃಂಭಣೆಗಳನ್ನು ಕುರಿತು ಪ್ರಶಂಸಾರೂಪವಾದ ಕೆಲವು ಶ್ಲೋಕಗಳನ್ನು ಹೇಳಿದರು. ಉತ್ತರಕ್ಷಣದಲ್ಲಿಯೇ ರಮಾಬಾಯಿಯು ಅಲ್ಲಿ ನಿಂತಿದ್ದಂತೆಯೇ ಅದಕ್ಕೆ ಪ್ರತ್ಯುತ್ತರವಾಗಿ ಕೆಲವು ಶ್ಲೋಕಗಳನ್ನು ರಚಿಸಿ ಹೇಳಿದಳು. ಅವು—''ಮಹನೀಯರೇ ತಾವು ನನ್ನ ವಿಷಯದಲ್ಲಿ ಅರ್ಪಣೆ ಕೊಡಿಸಿದ ಈ ಸ್ತುತಿಗೆ ನಾನು ಸರ್ವಥಾ ಪಾತ್ರಳಲ್ಲ. ತಮ್ಮಾ ಸರಸ್ವತೀ ಪ್ರಸಾದದಲ್ಲಿ ನಾನೊಬ್ಬ ದೀನಸೇವಕಳು ಮಾತ್ರ. ಪೂಜ್ಯರಾದ ತಮ್ಮಂತಹ ಸರಸ್ವತ್ಯುಪಾಸಕರು, ನನ್ನ ವಿಷಯವಾಗಿ ಅನುಗ್ರಹಿಸಿದ ಈ ವಿಚಾರಗಳು ಕೇವಲ ಪರಕೀಯಳಾಗಿ ಈ ನಗರವನ್ನು ಪ್ರವೇಶಮಾಡಿದ ನನಗೆ ಬಹು ಭೂಷಣಾಸ್ಪದವಾಗಿವೆ''—ಎಂಬರ್ಥವನ್ನು ಸೂಚಿಸುತ್ತಿದ್ದುವು. ಈ ಬಗೆಯ ಗೌರವವು ಆಕೆಗೆ ಅನೇಕ ಕಡೆಗಳಲ್ಲಿ ನಡೆಯಿತು. ಎಲ್ಲೆಲ್ಲೂ ಸಭೆಗಳನ್ನು ನೆರೆಯಿಸಿ ಪಂಡಿತರು ಆಕೆಯನ್ನು ಗೌರವಿಸುವರು. ದೇಶೀಯ ವರ್ತಮಾನ ಪತ್ರಿಕೆಗಳೂ ಆಕೆಯ ವಿದ್ವತ್ತು ಪ್ರತಿಭೆಗಳನ್ನು ಕುರಿತು ಸಹಸ್ರಮುಖವಾಗಿ ಹೊಗಳಿದುವು. ಬೊಂಬಾಯಿ ಪ್ರಾಂತದ ಸಮಕಾಲೀನ ಪತ್ರಿಕೆಯೊಂದು –'ನಮ್ಮ ಸದ್ಯದ ಅಧೋಗತಿಗಿಳಿದ ಸ್ಥಿತಿಯಲ್ಲೂ ನಮ್ಮ ಸಹೋದರಿಯರಲ್ಲೊಬ್ಬಳು ತನ್ನ ವಿದ್ಯಾಪ್ರೌಢಿಮೆಗಳಿಂದ ಯಾವ ದೇಶದ ಸ್ತ್ರೀ ಕುಲಕ್ಕಾದರೂ ಭೂಷಣಪ್ರದಳಾಗಿದ್ದಾಳೆಂಬುದು, ನಮ್ಮಲ್ಲಿ ದೇಶಾಭಿಮಾನವಿರತಕ್ಕವರು ನಿಜವಾಗಿ ಹೆಮ್ಮೆಪಡತಕ್ಕುದಾಗಿದೆ' ಎಂದು ಬರೆಯಿತು. ಮುಂದೆ ಸ್ವಲ್ಪ ದಿನಗಳಲ್ಲೇ ಕಲ್ಕತ್ತಾ ನಗರದ (ನವದ್ವೀಪದ) ಸಂಸ್ಕೃತ ವಿದ್ವಾಂಸಮಂಡಲಿಯವರು ಮತ್ತೊಂದು ಘನತರವಾದ ಸಭೆಯನ್ನು ನೆರೆಯಿಸಿ ಅದಕ್ಕೆ ನಮ್ಮ ಕಥಾನಾಯಿಕೆಯನ್ನು ಆಹ್ವಾನಿಸಿ, ಆಕೆಯ ಪ್ರತಿಭೆಯನ್ನು ಕುರಿತು ಬಹು ಬಗೆಯಿಂದ ಪ್ರಶಂಸಿಸಿ '**ಸರಸ್ವತಿ**' ಎಂಬ ಅಸಾಧಾರಣವಾದ ಬಿರುದನ್ನಿತ್ತು ಗೌರವಿಸಿದರು. ಸರಸ್ವತಿಯು ವಿದ್ಯಾಭಿಮಾನಿ ದೇವತೆಯಲ್ಲವೆ ? ಸರಸ್ವತೀಪುತ್ರರನೇಕರು ನೆರೆದು 'ಸರಸ್ವತೀ' ಬಿರು

ದನ್ನು ಪ್ರಸಾದಿಸಿ ಸನ್ಮಾನಿಸಿದುದರಿಂದ ಮುಂದೆ ಆಕೆಯು 'ಪಂಡಿತಾ ರಮಾಬಾಯಿ ಸರಸ್ವತಿ' ಎಂಬ ನಾಮಧೇಯದಿಂದಲೇ ಸರ್ವತ್ರ ಸುಪ್ರಸಿದ್ಧಳಾದಳು.



**ಅಧ್ಯಾಯ ೪** **"ವಿವಾಹ-ವೈಧವ್ಯ"**

ಪಂಡಿತಾ ರಮಾಬಾಯಿ ಸರಸ್ವತಿಗೆ ಮುಂದೂ ಅನೇಕ ಸ್ಥಳಗಳಲ್ಲಿ ಗೌರವಾದಿಗಳು ನಡೆದುವು. ಆಗ ಕಲ್ಕತ್ತಾ ನಗರದ ನಿವಾಸಿಗಳಲ್ಲಿ ಶ್ರೇಷ್ಠರೆನ್ನಿಸಿದ್ದ ಮಹಾರಾಜಾ ಜ್ಯೋತೀಂದ್ರ ಮೋಹನ ಠಾಕೂರರು, ದೊಡ್ಡದೊಂದು ಸಭೆಯನ್ನು ನೆರೆಯಿಸಿ, ಆ ಸಭಾಸಮಕ್ಷಮ ಸಂಸ್ಕೃತ ಸಾಹಿತ್ಯ ವಿಚಾರದಲ್ಲಿ ಆಕೆಯನ್ನು ವಿವಿಧರೀತಿಯ ಪರೀಕ್ಷೆಗಳಿಗೆ ಒಳಪಡಿಸಿದರು. ಅವುಗಳಲ್ಲೆಲ್ಲಾ ಆಕೆಯು ತೋರ್ಪಡಿಸಿದ ಅತ್ಯದ್ಭುತ ವಿದ್ಯಾಪ್ರೌಢಿಮೆಯೂ, ಶೀಘ್ರ ವಿಷಯಗ್ರಹಣಸಾಮರ್ಥ್ಯವೂ, ಸಮಯಸ್ಫೂರ್ತಿಯೂ, ಕವಿತಾ ಚಾತುರ್ಯವೂ ಸಮಸ್ತ ಸಭಾಸದರನ್ನೂ ಬೆರಗುಗೊಳಿಸಿದುವು. ಮತ್ತೊಂದು ವೇಳೆ ಆನಂದಮೋಹನ ಬೋಸರೆಂಬ ಇನ್ನೊಬ್ಬ ದೊಡ್ಡಮನುಷ್ಯರು ಒಂದು ಸ್ತ್ರೀಯರ ಸಭೆಯನ್ನು ನೆರೆಯಿಸಿ, ಅಲ್ಲಿಗೆ ನಮ್ಮ ಕಥಾನಾಯಿಕೆಯನ್ನು ಆಹ್ವಾನಿಸಿ, ಒಂದು ಮಾನಪತ್ರವನ್ನೊಪ್ಪಿಸಿದರು. ಅದರಲ್ಲಿ -"ಆರ್ಯಮಹಿಳಾರತ್ನವೇ ನೀನು ಈ ಭಾರತವರ್ಷಕ್ಕೇ ಭೂಷಣಪ್ರಾಯಳಾಗಿರುವೆ. ನಿನ್ನ ಸಂಬಂಧದಿಂದ ನಾವು ಮಾತ್ರವಲ್ಲ-ಆದ್ಯಂತ ಭಾರತ ದೇಶವೂ ಹೆಮ್ಮೆಪಡುವಂತಿದೆ. ನಿನ್ನೀ ಉದಾಹರಣೆಯು ನಮ್ಮ ಸ್ತ್ರೀಜನರ ಮನೋಮಯಕೋಶವೂ ಎಂತಹ ಉನ್ನತ-ಅಗಾಧ ವಿಚಾರಗಳಿಂದ ಶೋಭಿಸಲರ್ಹವಾಗಿದೆಯೆಂಬುದನ್ನು ಪ್ರದರ್ಶಿಸುತ್ತಿದೆ. ಈವರೆಗೆ, ನಾವು ನಮ್ಮ ಸ್ತ್ರೀಯರೆದುರಿಗೆ ಪಾಶ್ಚಾತ್ಯ ಸ್ತ್ರೀಯರ ವಿದ್ಯಾವೈದುಷ್ಯಾದಿಗಳನ್ನು ಕುರಿತು ಮಾತ್ರ ಉದಾಹರಣೆಯಾಗಿ ಹೇಳಬೇಕಾಗಿತ್ತು. ಆದರೆ, ಇನ್ನುಮುಂದೆ, ಅಂತಹ ನಿಸ್ಸಹಾಯಸ್ಥಿತಿಗೆ ಒಳಪಡುವ ಆವಶ್ಯಕವಿಲ್ಲವೆಂದು ನಂಬುತ್ತೇವೆ.

ಉಪನಿಷತ್ಕಾಲದಲ್ಲೂ ಪುರಾಣಕಾಲದಲ್ಲೂ ಭಾರತರಮಣಿಯರು ಹೀಗಿದ್ದರೆಂದು ಈವರೆಗೂ ಓದಿದ್ದೆವು ಮಾತ್ರ. ಆದರೆ ಈಗ ನಿನ್ನಲ್ಲಿ ಅವರ ಪ್ರತಿರೂಪವನ್ನು ಕಂಡು ಸಂತುಷ್ಟರಾಗಿದ್ದೇವೆ. ದೇವಿ, ನೀನು ಅದ್ಭುತ ಪ್ರಜ್ಞಾನಿಧಿಯಾಗಿದ್ದರೂ ನಿನ್ನಲ್ಲಿ ಲೇಶಮಾತ್ರ ಅಹಂಕಾರದ ರೇಖೆಯಾದರೂ ಕಂಡುಬಾರದೆ, ನೀನು ಆರ್ಯಮಹಿಳಾವರ್ಗಕ್ಕೆ ಭೂಷಣವೆನಿಸುವ ನಯ ವಿನಯ ಗಾಂಭೀರ್ಯೌದಾರ್ಯಾದಿಗಳ ಮೂರ್ತಿಸ್ವರೂಪವೋ ಎಂಬಂತಿರುವೆ. ಸಹೋದರೀ, ನೀನು ಪ್ರದರ್ಶಿಸಿದ ಈ ಸದ್ಗುಣಗಳು ಈವರೆಗೂ ಸ್ತ್ರೀವರ್ಗವನ್ನೇ ಒಂದುಬಗೆಯ ವಕ್ರದೃಷ್ಟಿಯಿಂದ ನೋಡುತ್ತಿದ್ದ ನಮ್ಮವರಲ್ಲಿ ದೃಷ್ಟಿಭೇದವನ್ನುಂಟುಮಾಡಿ, ಅವರೂ ನಮ್ಮಲ್ಲಿಯ ಸ್ತ್ರೀಯರನ್ನು ಗೌರವದಿಂದ ಕಾಣುವಂತಾಗಲೆಂದು ನಂಬುತ್ತೇವೆ" ಎಂದು ಮುಂತಾಗಿ ಹೇಳಲ್ಪಟ್ಟಿದ್ದಿತು.

ತರುವಾಯ ರಮಾಬಾಯಿಸರಸ್ವತಿಯು ಬಂಗಾಳಾದಲ್ಲಿ ಅನೇಕಭಾರತ ಮಹಿಳೆಯರ ಸ್ತ್ರೀಸಭೆಗಳಲ್ಲಿ ಉಪನ್ಯಾಸಮಾಡಿದಳು. ಅವುಗಳಲ್ಲೆಲ್ಲ ಆಕೆಯು ಆರ್ಷೇಯ ಭಾರತದ ಕುಂತಿ ದ್ರೌಪದಿ ಗಾಂಧಾರಿ ರುಕ್ಮಿಣಿ ಸತ್ಯಭಾಮೆ ಸಾವಿತ್ರಿ—ಗಾರ್ಗಿ, ಮೈತ್ರೇಯಿ, ಸುಲಭಾ ದೇವಯಾನೆ ಅನಸೂಯೆ ಅರುಂಧತಿ ಮುಂತಾದ ಆರ್ಯಮಹಿಳೆಯರ ಉದಾಹರಣೆಗಳನ್ನನುಸರಿಸಿ ವಿದ್ಯಾಭ್ಯಾಸ ಮಾಡಬೇಕೆಂದೂ ಸಮಸ್ತ ಭಾಷೆಗಳಿಗೂ ಮಾತೃಸ್ವರೂಪದಲ್ಲಿರುವ ಸಂಸ್ಕೃತವನ್ನು ಸ್ತ್ರೀಯರೂ ಕಲಿತರಲ್ಲದೆ ಭಾರತವರ್ಷದ ಜೀವಜೀವಾಳದ ಸರ್ವಸ್ವವು ಅವರಿಗೆ ಲಭ್ಯವಾಗಲಾರದೆಂದೂ ಬೋಧಿಸಿದಳು. ಆಕೆಯು ಸಂಸ್ಕೃತದಲ್ಲಿ ಹೇಳುತ್ತಿದ್ದ ಭಾಷಣಗಳನ್ನು ಆಕೆಯ ಅಣ್ಣನು ಹಿಂದೀಯಲ್ಲಿ ತರ್ಜುಮೆ ಮಾಡಿ ಸಭಿಕರಿಗೆ ತಿಳಿಸುತ್ತಿದ್ದನು. ಇತ್ತ ಹೀಗಿರಲು, ಮಹಾರಾಷ್ಟ್ರದ ಹೆಣ್ಣುಮಗಳೊಬ್ಬಳು ದೂರದೇಶವಾದ ಬಂಗಾಳಾದಲ್ಲಿ ತನ್ನ ವಿದ್ವದ್ವೈಭವಗಳಿಂದ ಬಿರುದುಬಹುಮಾನಗಳನ್ನು ಸಂಪಾದಿಸಿ ಉಪನ್ಯಾಸಾದಿಗಳಿಂದ ಲೋಕಜಾಗೃತಿಯನ್ನು ಉಂಟುಮಾಡುತ್ತಿದ್ದಾಳೆಂಬ ವರ್ತಮಾನವು ಅತ್ತ ಮಹಾರಾಷ್ಟ್ರಕ್ಕೂ ವ್ಯಾಪಿಸಿತು. ಆಕೆಯನ್ನು ಕರೆಸಿ ಸ್ವಸ್ಥಳದಲ್ಲೂ ಗೌರವಿಸಬೇಕೆಂಬ ವಿಚಾರದಲ್ಲಿ ಅಲ್ಲೂ ಚಳವಳವೆದ್ದಿತು. ಕೆಲವರು ಪ್ರಮುಖ ಜನರು ಮಹಾರಾಷ್ಟ್ರದಿಂದ ಹೊರಟು ಆಕೆಯ

ಬಳಿಗೆ ಪ್ರಯಾಣಬೆಳೆಸಿ, ಸ್ವದೇಶಕ್ಕೆ ಹೊರಟುಬಂದು ಅತ್ತೊಂದು ಬಾಲಿಕಾ ಪಾಠಶಾಲೆಯ ಮುಖ್ಯಾಧ್ಯಾಪಿಕೆಯು ಸ್ಥಾನವನ್ನು ಸ್ವೀಕರಿಸಬೇಕೆಂದು ಸಹ ಪ್ರಾರ್ಥಿಸಿದರು. ಆ ಸಲಹೆಗೆ ಆಕೆಯೂ ಸಮ್ಮತಿಸಿದ್ದಳು. ಆದರೆ ಅಷ್ಟ ರಲ್ಲಿ ವಿಧಿಯ ವಿಚಿತ್ರಗತಿಯು ಬೇರೊಂದು ದಿಕ್ಕಿಗೆ ತಿರುಗಿತು.

ಈ ಮಧ್ಯೆ ಒಂದೆರಡು ವೇಳೆ ಪಂಡಿತಾ ರಮಾಬಾಯಿಯು ತನ್ನ ಅಣ್ಣನೊಂದಿಗೆ ಅಸ್ಸಾಂ ದೇಶದ ಶಿಲ್ಹಟ್ ಪ್ರಾಂತಕ್ಕೆ ಹೋಗಿದ್ದಳು. ಆ ಸಂದರ್ಭದಲ್ಲಿ, ಅಲ್ಲಿದ್ದ ಬಾಬು ಬಿಪಿನ್ ವಿಹಾರಿದಾಸ್ ಮೇಧಾವಿ ಎಂಬೊಬ್ಬ ಸುಪ್ರಸಿದ್ಧ ನ್ಯಾಯವಾದಿಯೊಂದಿಗೆ ಆಕೆಯ ಅಣ್ಣನಿಗೆ ಅತಿಶಯ ಸ್ನೇಹ ವೇರ್ಪಟ್ಟಿತು. ಅವರು ಕೆಲಕಾಲ ಅಲ್ಲೇ ವಾಸಿಸುತ್ತಿರಲು ಬಿಪಿನ್ ಬಾಬುವು ಆಗಾಗ್ಯೆ ಮನೆಗೆ ಬಂದು ಹೋಗುತ್ತಾ, ತರುಣ ವಯಸ್ಸಿನ ಸ್ಫುರದ್ರೂಪಿಯಾದ ರಮಾಬಾಯಿಯೊಂದಿಗೂ ಸ್ನೇಹಿಸಿ, ತನ್ನನ್ನು ಪರಿಣಯದಿಂದ ಕೂಡಿ ತನ್ನ ಗೃಹಲಕ್ಷ್ಮಿಯಾಗೆಂದು ಯಾಚಿಸಿದ್ದನು. ರಮಾಬಾಯಿಯು ಎಂ.ಎ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಗೌರವನೀಯವಾದ ಸ್ವತಂತ್ರೋದ್ಯೋಗದಲ್ಲಿದ್ದ ಆ ತರುಣ ನ್ಯಾಯವಾದಿಯನ್ನು ವರಿಸಲು ಅಭ್ಯಂತರವಿರಲಿಲ್ಲವಾದರೂ, ಆತನನ್ನು ಕುರಿತು—"ನಾನು ಇನ್ನೂ ವಿವಾಹಿತಳಾಗುವ ಯೋಚನೆ ಮಾಡಿಲ್ಲ. ಆ ವಿಷಯದಲ್ಲಿ ನಾನು ನನ್ನ ಅಗ್ರಜನ ಇಷ್ಟವನ್ನನುಸರಿಸುವುದು ಯುಕ್ತವಾಗಿದೆ. ಹಾಗೆ ವಿವಾಹಿತಳಾಗುವ ಯೋಚನೆ ಬಂದಾಗ್ಗೆ ತಪ್ಪದೆ ನಿನ್ನನ್ನೇ ವರಿಸುತ್ತೇನೆ" ಎಂದು ವಾಗ್ದಾನಮಾಡಿದ್ದಳು. ತರುವಾಯ ಶಿಲ್ಹಟ್ಟಿನಿಂದ ಹೊರಟು ಅಣ್ಣತಂಗಿಯರಿಬ್ಬರೂ ಕಲ್ಕತ್ತಾಕ್ಕೆ ಬಂದರು. ಮುಂದೆ ಕೆಲವು ದಿನಗಳಲ್ಲೇ ಆಕೆಯ ಅಣ್ಣನೂ ಮೃತ್ಯುವಶನಾದನು. ರಮಾಬಾಯಿಯು ಕೇವಲ ಪರದೇಶಿಯೂ ಏಕಾಂಗಿಯೂ ಆಗಿ ನಿಂತಳು.

ಆ ಸಂದರ್ಭದಲ್ಲಿ ಆಕೆಗೆ ಬೇರೆ ದಿಕ್ಕು ತೋರದಂತಾಯಿತು. ಆ ದೂರದೇಶದಲ್ಲಿ, ಅಪರಿಚಿತ ಜನರ ಮಧ್ಯದಲ್ಲಿ ಏಕಾಂಗಿಯಾಗಿ ನಿಂತ ತರುಣ ವಯಸ್ಸಿನ ತಾನು ಏನು ಮಾಡಬೇಕೆಂದು ಮಹದ್ಯೋಚನೆಯಿಂದ ಇರುವಲ್ಲಿ ಬಾಬು ಬಿಪಿನ್ ಮೇಧಾವಿಯು ಆಕೆಯಲ್ಲಿಗೆ ಬಂದು, ತನ್ನ ಮಿತ್ರನ ಮರಣವಾರ್ತೆಯನ್ನು ಕೇಳಿ ವ್ಯಸನಪಟ್ಟು, ಮುಂದೆ ಏಕಾಂಗಿಯಾಗಿದ್ದು ತೊಂದರೆಗೆ ಸಿಕ್ಕುವುದಕ್ಕಿಂತಲೂ ಹಿಂದೆ ವಾಗ್ದಾನಮಾಡಿದ್ದಂತೆ ತನ್ನ

ಪ್ರಾರ್ಥನೆಯನ್ನು ಸಲ್ಲಿಸಬಹುದೆಂದು ಕೋರಿದನು. ರಮಾಬಾಯಿಯೂ ಸಮ್ಮತಿಸಿದಳು. ಬಿಪಿನ್ ಬಾಬುವು ಜಾತಿಯಲ್ಲಿ ಬಂಗಾಳಿ ಶೂದ್ರಕುಲ ಸಂಭೂತನು. ಆದರೂ ರಮಾಬಾಯಿಯು ಆತನನ್ನು ವರಿಸಿ ವಿವಾಹವಾಗಲು ಹಿಂಜರಿಯಲಿಲ್ಲ. ಅವರ ವಿವಾಹವು ಹಿಂದೂ ಪದ್ಧತಿಯಂತಾಗಲೀ ಕ್ರೈಸ್ತಪದ್ಧತಿಯಂತಾಗಲೀ ಅಲ್ಲದೆ-'ಶಿವಿಲ್ ಮ್ಯಾರಿಯೇಜ್ (ವಿವಾಹ) ನಿಬಂಧನೆ'ಗಳಿಗೆ ಅನುಸಾರವಾಗಿ ಕಲ್ಕತ್ತಾ ನಗರಕ್ಕೆ ಸಮೀಪದಲ್ಲಿರುವ ಬಾಂಕೀಪುರವೆಂಬಲ್ಲಿ ನಡೆಯಿತು.

ಚಿತ್ಪಾವನ್ ಬ್ರಾಹ್ಮಣಕುಲದಲ್ಲಿ ಜನ್ಮಿಸಿದ ರಮಾಬಾಯಿಯು, ತನ್ನ ಜಾತಿಮತ ನೀತಿ ಧರ್ಮಗಳೊಂದನ್ನೂ ಲೆಕ್ಕಿಸದೆ ಒಬ್ಬ ಶೂದ್ರಕುಲಜನನ್ನು ವರಿಸಿದ ವೃತ್ತಾಂತವು ಒಡನೆ ಆ ಪ್ರಾಂತದಲ್ಲೆಲ್ಲ ವ್ಯಾಪಿಸಿ ಅವಳಮೇಲೆ ದೂರು ಅಪನಿಂದೆಗಳ ಮಳೆಯೇ ಸುರಿಯತೊಡಗಿತು. ಹಿಂದುಗಳಿಗೆ ಪರಮಪ್ರೀತ್ಯಾಸ್ಪದವಾದ ವರ್ಣಾಶ್ರಮಧರ್ಮವನ್ನು ಮೀರಿ ನಡೆದ ಧರ್ಮ ಬಾಹಿರಳೆಂಬ ದೂರು, ಆಕೆಗೆ ಆಗ ಮಾತ್ರವಲ್ಲ, ಮುಂದೆ ಮರಣಪರ್ಯಂತವೂ ಶಾಶ್ವತವಾಗಿ ನಿಂತುಹೋಯಿತು. ಆಕೆಯು ಅಪೇಕ್ಷಿಸಿದ್ದರೆ, ವಿದ್ಯಾವಂತರಾದ ಉತ್ತಮಸ್ಥಿತಿಯ ಬ್ರಾಹ್ಮಣವರರಿಗೆ ಕೊರತೆಯಿರಲಿಲ್ಲ. ಅಲ್ಲದೆ ಆಕೆಯು ಆಗ ಇದ್ದ ನಿಸ್ಸಹಾಯಸ್ಥಿತಿಯಾದರೂ, ಬೇರೊಂದು ಕುಲದ ವರನೊಬ್ಬನನ್ನು ವರಿಸಲು ಒತ್ತಾಯಪಡಿಸುವಂತಿರಲಿಲ್ಲ. ಈ ಪ್ರಶ್ನೆಯು ಬಂದಾಗ್ಗೆ ಮುಂದೊಂದುವೇಳೆ ಆಕೆಯು-'ಇಲ್ಲ-ನನಗೆ ಯಾವ ತೊಂದರೆಯಾಗಲೀ ಯಾರ ನಿರ್ಬಂಧವಾಗಲೀ ಪ್ರಾಪ್ತವಾಗಿ ನಾನು ಬಿಪಿನ್ ಬಾಬುವನ್ನು ವರಿಸಿದವಳಲ್ಲ. ಆತನ ಪಾಣಿಗ್ರಹಣ ಮಾಡಿದ್ದಕ್ಕೆ ನನ್ನ ಆತ್ಮಸಂತೋಷವೇ ಮುಖ್ಯಕಾರಣವು ನಾನು ಮನಃಪೂರ್ವಕ ಆತನನ್ನು ಮೆಚ್ಚಿ ಗೌರವಿಸುತ್ತಿದ್ದುದರಿಂದ ವರಿಸಿದೆನಲ್ಲಗೆ ಅನ್ಯಥಾ ಇಲ್ಲ, ನನ್ನ ಆ ಕೃತ್ಯಕ್ಕಾಗಿ ನಾನು ಎಂದೂ ವ್ಯಥೆಪಡುವುದಿಲ್ಲ' ಎಂದಿದ್ದಾಳೆ.

ಮುಂದೆ ಆ ಗಂಡ ಹೆಂಡಂದಿರು ಅಸ್ಸಾಮಿನ ಶಿಲ್ಚರ್ ಎಂಬೊಂದು ಪಟ್ಟಣದಲ್ಲಿ ಕೆಲದಿನಗಳು ಅನ್ಯೋನ್ಯವಾಗಿ ಸುಖವಾಗಿದ್ದರು. ಪಂಡಿತಾರಮಾಬಾಯಿಯು ಗೃಹಕಾರ್ಯ ಪತಿಸೇವೆ ಮುಂತಾದುವುಗಳಲ್ಲಿ ಮಗ್ನಳಾಗಿ, ತನ್ನ ಜನನ ಕಾಲದಿಂದ ಪ್ರಾಪ್ತವಾಗಿದ್ದ ಸಕಲ ಕಷ್ಟಗಳನ್ನೂ ಮರೆತು ಕೆಲವು

ದಿನಗಳು ಆನಂದಾಂಬುಧಿಯಲ್ಲಿ ಮುಳುಗಿದ್ದಳು. ಅಷ್ಟೆ! ಪುನಃ ಕಷ್ಟದ ತೆರೆಗಳು ಒಂದರಮೇಲೊಂದರಂತೆ ಬರತೊಡಗಿದುವು. ಮದುವೆಯಾಗಿ ಹತ್ತೊಂಬತ್ತು ತಿಂಗಳು ಆಯಿತೆಂಬ ವೇಳೆಗೆ ಸರಿಯಾಗಿ ನಿಪೀಬಾಬುವು ಕಾಲರಾ ಉಪದ್ರವಕ್ಕೆ ತುತ್ತಾಗಿ ತೀರಿಕೊಂಡನು. ರಮಾಬಾಯಿಯು ಮತ್ತೊಂದು ವೇಳೆ ನಿಸ್ಸಹಾಯಳೂ ಅನಾಥಳೂ ಆಗಿ ನಿಂತಳು. ಆದರ ಈಬಾರಿ ಏಕಾಂಗಿಯಲ್ಲ. ಕೈಯಲ್ಲಿ ನಾಲ್ಕೆಂಟು ತಿಂಗಳಿನ ಚಿಕ್ಕದೊಂದು ಮಗು ಬೇರೆ! ಆಕೆಗೆ ಪ್ರಾಪ್ತವಾದ ಆ ಕಷ್ಟದ ಪರಮಾವಧಿಯನ್ನು ವರ್ಣಿಸುವುದು ಅಸದಳ. ಜೀವಿತದಲ್ಲಿ ವಿವಾಹ, ವೈಧವ್ಯಗಳ ಎರಡು ಅನುಭವಗಳನ್ನೂ ಕಂಡು ಆಯಿತಾದುದರಿಂದ ಮುಂದೆ, ತನ್ನವರೆಂಬ ಯಾರೊಬ್ಬರೂ ಇಲ್ಲದಿದ್ದ ದೂರದೇಶವಾದ ಆ ಸ್ಥಳದಲ್ಲಿದ್ದು ಮಾಡಬೇಕಾದ ಕೆಲಸವೇನೆಂದು ತಿಳಿಯದೆ ತನ್ನ ಸ್ವದೇಶವಾದ ಮಹಾರಾಷ್ಟ್ರಕ್ಕೇ ಹೋಗಬೇಕೆಂದು ಆಕೆಗೆ ಮನಸ್ಸಾಯಿತು. ಅಷ್ಟರಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಮಾಡಬೇಕೆಂದು ಮನಸ್ಸಾಗಲು ನೇರವಾಗಿ ಹೊರಟು ಮದ್ರಾಸು ಪಟ್ಟಣವನ್ನು ಸೇರಿದಳು. ಆದರೆ ಅಲ್ಲಿಯ ಸ್ಥಿತಿಗತಿಗಳು ಆಕೆಗೆ ಸರಿಬೀಳದಿದ್ದುದರಿಂದ ೧೮೮೩ನೆಯ ಇಸ್ವಿಯಲ್ಲಿ ಮದ್ರಾಸಿನಿಂದ ಹೊರಟು ಮಹಾರಾಷ್ಟ್ರದ ಕೇಂದ್ರಸ್ಥಳವಾದ ಪೂನಾಪಟ್ಟಣವನ್ನು ಸೇರಿದಳು.



## ಅಧ್ಯಾಯ ೫ "ಮತಾಂತರಪ್ರವೇಶ–ಖಂಡಾಂತರಪ್ರವಾಸ"

ನಮ್ಮಲ್ಲಿ ಸಾರ್ವಜನಿಕ ಸೇವೆಗೆ ತೊಡಗತಕ್ಕವರಿಗೆ, ಪ್ರಾಪ್ತವಾಗುವ ಅಡಚಣೆಗಳ ವಿಚಾರವನ್ನು ಕುರಿತು ಮುನ್ನುಡಿಯಲ್ಲಿ ಸೂಚಿಸಿದ್ದೇವೆ.— ತಮ್ಮ ಸುತ್ತಮುತ್ತಲಿರುವ ಪರಿಸ್ಥಿತಿಯನ್ನು ಕಂಡು ಎದೆಕರಗಿ ತಮ್ಮ ಪಂಚಪ್ರಾಣಗಳನ್ನು ಅರ್ಪಿಸಿಯಾದರೂ ದುಃಖಿಗಳ ಸಂಕಟವನ್ನು ನಿವಾರಣೆ ಮಾಡಬೇಕೆಂಬ ಹೃದಯವೇದನೆಯಿಂದ ತಪಿಸುತ್ತಿರುವ ಕರ್ಮಯೋಗಿಗಳು, ಇಂತಹ ಅಡಚಣೆಗಳೆಷ್ಟು ಬಂದರೂ ಲಕ್ಷ್ಯಮಾಡದೆ, ಜಾತಿ ಕುಲ

ಸಂಗಡಗಳ ಕಟ್ಟು-ನಿಬಂಧನೆಗಳನ್ನು ದಾಟಿಯಾದರೂ ಹೊರಗಿದ್ದು, ತಮ್ಮ ಪರೋಪಕಾರಸಾಧಕವಾದ ಸಾರ್ವಜನಿಕಸೇವೆಗಳಲ್ಲಿ ತೊಡಗುವರು. 'ಅವರು ಅಂತಹ ಕೆಲಸಗಳನ್ನೇ ಜಾತ್ಯಂತರ-ಮತಾಂತರ ಹೊಂದದೆಯೇ ಏಕೆ ಸಾಧಿಸಬಾರದು?' ಎಂಬ ಪ್ರಶ್ನೆಯು ಒಡನೆ ಮನಸ್ಸಿಗೆ ತೋರುವುದು. ಅದಕ್ಕೆ ಒಂದು ಪ್ರತ್ಯುತ್ತರವಿದೆ. ಆ ರೀತಿಮಾಡಲು ಅಭ್ಯಂತರವಿಲ್ಲವಾದರೂ, ನಮ್ಮಲ್ಲಿ ಸಾವಿರಾರು ವರ್ಷಗಳಿಂದ ನಡೆದುಬಂದು, ಜನಮನದಲ್ಲಿ ಆಳಕ್ಕೆ ಬೇರುಬಿಟ್ಟುಕೊಂಡಿರುವ ಕೆಲಕೆಲವು ಅಭಿಪ್ರಾಯಗಳು, ಈ ಬಗೆಯ ನವೀನವಿಚಾರಗಳ ಅಭಿವೃದ್ಧಿಗೆ ಆಸ್ಪದಕೊಡುವುದಿಲ್ಲ. ಅಲ್ಲ, ಅವು ಮುಂದೆ ಹೋಗುವವರನ್ನು ಅನುಸರಿಸುವುದಕ್ಕೆ ಬೇರೆಯವರಿಗೆ ಅವಕಾಶ ಕೊಡದಿರುವುದಂತಿರಲಿ! ಮುಂದೆ ಹೋಗುವವರ ಕಾಲುಗಳಿಗೂ ಸಂಕಲೆಗಳಾಗಿ ಅವರೂ ಮುಂದರಿಸದಂತೆ ಮಾಡಿಡುವುವು. ಅಂತಹ ಸಂದರ್ಭಗಳಲ್ಲಿ ಧೀರವೃತ್ತಿಯ ಕೆಲಜನರು-ವ್ಯಕ್ತಿಸ್ವಾತಂತ್ರ್ಯಕ್ಕೇ ಪ್ರಾಧಾನ್ಯವನ್ನು ಕೊಟ್ಟು, ಅಂತಹ ಕಟ್ಟುನಿಬಂಧನೆಗಳನ್ನೆಲ್ಲಾ ಕತ್ತರಿಸಿ, ಮುಂದೆ ನುಗ್ಗಿ ನಡೆದು ಅದರಿಂದ ಪ್ರಾಪ್ತವಾಗುವ ಅಪದೂರು ಅಪಮಾನ ಅವಹೇಳನ ಮುಂತಾದುವುಗಳನ್ನೆಲ್ಲ ಸಹಿಸಿ ತಮ್ಮ ಉದ್ದೇಶವನ್ನು ಸಾಧಿಸುವರು. ಜಳ್ಳೆದೆಯ ಬೇರೆ ಕೆಲವರು, ಮೇಲ್ಕಂಡ ಅವಹೇಳನಾದಿಗಳಿಗೆ ಹೆದರಿ, ಯಾವ ಲೋಕವೆಲ್ಲಾದರೂ ಹಾಳಾಗಲೆಂದು ಎಲ್ಲವನ್ನೂ ಕೈಬಿಟ್ಟು ತಮ್ಮ ಸ್ಥಿತಿಯಲ್ಲೇ ಉಳಿಯುವರು. 'ಅದು ಸಮಂಜಸವೇ? ಏನೋ ಒಂದು ಸಾರ್ವಜನಿಕ ಸೇವಾಕಾರ್ಯ ಮಾಡುತ್ತೇನೆಂದು ವಂಶಪಾರಂಪರ್ಯವಾಗಿ ನಡೆದು ಬಂದ ಸನಾತನಧರ್ಮ ಪರಿತ್ಯಾಗಮಾಡಬಹುದೇ? ಅದು ನ್ಯಾಯವೇ?' ಎಂದರೆ, ಅದಕ್ಕೆ ನಾವು ಒಂದೇಒಂದು ಪ್ರತ್ಯುತ್ತರಕೊಡಲು ಸಾಧ್ಯ! ಅದು ವ್ಯಕ್ತಿಪ್ರಶ್ನೆಯು. ಅದರಿಂದ ಅವನು ಧರ್ಮದ್ರೋಹ ಮಾಡಿದಂತೆ ಆಯಿತೋ, ಧರ್ಮೋದ್ಧಾರ ಮಾಡಿದಂತೆಯೇ ಆಯಿತೊ, ಅದರಿಂದ ಕರ್ತೃವಿಗೆ ಪ್ರಾಪ್ತವಾದುದು ಸದ್ಗತಿಯೋ ದುರ್ಗತಿಯೋ ಈ ಎಲ್ಲಕ್ಕೂ ಆ ವ್ಯಕ್ತಿಯೇ ಜವಾಬುದಾರನಲ್ಲದೆ ಬೇರಲ್ಲ! ತನ್ನ ಸ್ಥಿತಿಯಲ್ಲಿ ಆ ವ್ಯಕ್ತಿಯಾದರೋ-'ನಾನೇ ಬಾವಿಯಿಂದ ಹೊರಕ್ಕೆ ಬಂದು ಮೇಲೆ ನಿಲ್ಲದೆ, ಮಿಕ್ಕವರನ್ನು ಉದ್ಧರಿಸುವುದು ಹೇಗೆ? ನನ್ನ ಮನಸ್ಸಾದರೋ

ಎಲ್ಲರೊಂದಿಗೆ ಮುಳುಗಿ ಸಾಯುವುದಕ್ಕಿಂತಲೂ ಎದ್ದು ಹೊರಕ್ಕೆ ಬಂದು, ಅವರ ರಕ್ಷಣೆಯನ್ನೂ ಮಾಡತಕ್ಕದು ಯುಕ್ತವೆಂದು ಹೇಳುತ್ತದೆ. ನನ್ನ ಮನಸ್ಸಾಕ್ಷಿಗೆ ಅನುಸಾರವಾಗಿ ನಡೆದಿದ್ದೇನೆ'' ಎಂದು ಹೇಳುತ್ತಾನೆ. ಈ ಸಂದರ್ಭದಲ್ಲಿ ನಾವು ಇಷ್ಟು ಮಾತ್ರ ಯೋಚಿಸಬಹುದಾಗಿದೆ. 'ತ್ಯಜೇದೇಕಂ ಕುಲಸ್ಯಾರ್ಥೇ' ಎಂಬ ನೀತಿವಾಕ್ಯಾನುಸಾರವಾಗಿ ಕುಲದ ಒಂದು ಬಗೆಯ ಅಭಿವೃದ್ಧಿಗಾಗಿ ಅಥವ ಒಂದು ಮಹತ್ಕಾರ್ಯದ ಸಾಧನೆಗಾಗಿ ಒಬ್ಬ ವ್ಯಕ್ತಿಯು ನಮ್ಮ ಕುಲದಿಂದ ನಷ್ಟವಾದರೂ, ಆ ಒಂದು ವ್ಯಕ್ತಿಯಿಂದ ಪ್ರಪಂಚಕ್ಕಾದ ಪ್ರಯೋಜನವನ್ನು ಕುರಿತು ಉದಾರಭಾವದಿಂದ, ಮಿಕ್ಕ ವಿಚಾರಗಳನ್ನೆಲ್ಲ ಮಾನಸಿಕ ಮಾಡುವುದು ಹೆಚ್ಚು ದೋಷವೆನಿಸಲಾರದು.

ಪೂರ್ವಾಧ್ಯಾಯದ ಅಂತ್ಯಭಾಗದಲ್ಲಿ ಹೇಳಿದ್ದಂತೆ ನಮ್ಮ ಕಥಾನಾಯಿಕೆಯು ಪೂನಾಪಟ್ಟಣದಲ್ಲಿ ಬಂದಿಳಿದಳಷ್ಟೆ! ಆ ವರಗೇ ಸಾರ್ವಜನಿಕ ಸೇವಾ ಕಾರ್ಯಗಳಲ್ಲಿ ತೊಡಗಿದ್ದ ಕೆಲಮಂದಿ ಆ ಪಟ್ಟಣದಲ್ಲಿದ್ದರು. ಅವರಲ್ಲಿ ಲೋ. ಬಾಲಗಂಗಾಧರ ತಿಲಕರೂ ಕೈ. ಮಹಾದೇವಗೋವಿಂದ ರಾನಡೇಯವರೂ ಪ್ರಮುಖರು. ಅವರಿಬ್ಬರೂ, ಚಿತ್ಪಾವನ ಬ್ರಾಹ್ಮಣಕುಲ ಸಂಭೂತರೇ! ಬಾಲಗಂಗಾಧರತಿಲಕರು ಪೂರ್ವಾಚಾರ ಪಕ್ಷಪಾತಿಗಳು. ಅವರಿಗೆ ಸುಧಾರಣಾವಿಚಾರವು ಸರಿಬೀಳುತ್ತಿರಲಿಲ್ಲ. ಆದರೆ ರಾನಡೇಯವರು ಕಾಲಾನುಸಾರವಾಗಿ ನಾವು ಸಾಮಾಜಿಕವಿಚಾರಗಳಲ್ಲಿ ಬದಲಾವಣೆಮಾಡಿಕೊಳ್ಳತಕ್ಕದು ಆವಶ್ಯಕವೆಂದು ಅಭಿಪ್ರಾಯಪಡುತ್ತಿದ್ದರು. ಹೀಗಿರುವಲ್ಲಿ ಸ್ತ್ರೀ ಪಂಗಡದ ಸುಧಾರಣಾವಿಷಯದಲ್ಲಿ ದೀಕ್ಷಾಧರಳಾಗಿದ್ದ ಪಂಡಿತಾ ರಮಾಬಾಯಿಯು ಅಲ್ಲಿಗೆ ಬಂದಿಳಿದಳಷ್ಟೆ! ಆಕೆಯನ್ನು ಮೇಲ್ಕಂಡ ರಾನಡೇಯವರ ದ್ವಿತೀಯ ಪತ್ನಿ ಸೌ. ರಮಾಬಾಯಿ ರಾನಡೇಯವರು ಅತಿಶಯ ಮರ್ಯಾದೆಯಿಂದ ಕಂಡು ಆದರಿಸಿದರು. ಅಲ್ಲದೆ ಆಗಾಗ್ಗೆ ಅವರ ಮನೆಯಲ್ಲೇ ಪಂಡಿತಾ ರಮಾಬಾಯಿಯು ಪುರಾಣ ಹೇಳುವುದಕ್ಕೆ ಸಹ ಅನುಕೂಲಪಡಿಸಲ್ಪಟ್ಟಿತು. ಅಂತಹ ಪುರಾಣಗಳಿಗೆ ಸಬ್ ಜಡ್ಜ್ ಉದ್ಯೋಗದಲ್ಲಿದ್ದ ಮಹಾದೇವ ಗೋವಿಂದ ರಾನಡೇ ಪ್ರಮುಖ ದೊಡ್ಡಮನುಷ್ಯರನೇಕರು ಬರುತ್ತಿದ್ದರು. ರಮಾಬಾಯಿಯ ವಿಚಾರವು ಆ ಪಟ್ಟಣದಲ್ಲೆಲ್ಲ ವ್ಯಾಪಿಸಿತು. ಆಕೆಯ ವಿದ್ವತ್ತು, ವಾಗ್ಝರಿ, ವಿಷಯ ವಿವರಣೆ ಮುಂತಾ

ದುವುಗಳನ್ನು ಕುರಿತು ಅನೇಕರು ಪ್ರಶಂಸೆಮಾಡುತ್ತಿದ್ದರು. ಆದರೆ ಮರಾಟಾ ಬ್ರಾಹ್ಮಣ ಕುಲದಲ್ಲಿ ಹುಟ್ಟಿ, ಬಂಗಾಳಿ ಬಾಬುವನ್ನು ಮದುವೆಯಾದ ಆಕೆಯನ್ನು ಕುಲಭ್ರಷ್ಟಳೆಂದು ದೂಷಿಸುತ್ತ ಆಕೆಯ ವಿಚಾರದ ವಿವಿಧ ಮಾತುಕಥೆಗಳಲ್ಲೇ ಕಾಲ ಕಳೆಯುತ್ತಿದ್ದವರ ಸಂಗಡವೂ ಒಂದಿದ್ದಿತು. ಆದರೆ ರಮಾಬಾಯಿಯಾದರೋ ಆ ದೂಷಣೆ ಭೂಷಣೆಗಳಿಗೆ ಎಷ್ಟು ಮಾತ್ರವೂ ಗಮನ ಕೊಡದೆ ತನ್ನ ಕೆಲಸದಲ್ಲಿ ತಾನಿರುತ್ತಿದ್ದಳು.

ಸೌ. ರಮಾಬಾಯಿ ರಾನಡೆಯ ಸಹಾಯದಿಂದ ಪಂ. ರಮಾಬಾಯಿಯು 'ಆರ್ಯಮಹಿಳಾ ಸಮಾಜ'ವೆಂಬ ಒಂದು ಸ್ತ್ರೀಯರ ಸಂಘವನ್ನು ಸ್ಥಾಪಿಸಿದಳು. ಅದರ ಮುಖ್ಯ ಉದ್ದೇಶವು ಭಾರತ ಮಹಿಳೆಯರ ಸದ್ಯದ ದುಸ್ಥಿತಿಯಿಂದ ಅವರನ್ನು ಉದ್ಧರಿಸುವುದಕ್ಕಾಗಿ ಪ್ರಯತ್ನಿಸುವುದೇ ಆಗಿದ್ದು ಅದಕ್ಕಾಗಿ ಆ ಇಬ್ಬರೂ ಅವಿಶ್ರಾಂತ ಶ್ರಮಪಟ್ಟರು. ಭಗಿನೀವರ್ಗದ ಉದ್ಧಾರಕ್ಕಾಗಿ ತಾನೇನುಮಾಡಬಹುದೆಂಬುದನ್ನು ಕುರಿತು ಪಂ. ರಮಾಬಾಯಿಯು ಹಗಲಿರುಳೂ ಯೋಚಿಸುತ್ತಾ ನೂತನ ಸೇವಾ ವಿಧಾನಗಳನ್ನು ಕಂಡುಹಿಡಿಯುತ್ತಿರುವಳು. ಅಷ್ಟರಲ್ಲಿ ೧೮೮೩ನೆಯ ಸಂ|| ದಲ್ಲಿ ರಾಜಪ್ರತಿನಿಧಿ ಲಾರ್ಡ್ ರಿಪ್ಪನ್ ಪ್ರಭುವು ಆಗ ದೇಶದಲ್ಲಿದ್ದ ಪ್ರಾರಂಭ ವಿದ್ಯಾಭ್ಯಾಸ-ಸ್ತ್ರೀ ವಿದ್ಯಾಭ್ಯಾಸಗಳ ಸ್ಥಿತಿಗತಿಗಳನ್ನು ಕುರಿತು ವಿಚಾರಿಸಲು ಒಂದು ಕಮಿಷನ್ನನ್ನು ಏರ್ಪಡಿಸಿದನು. ಆ ಕಮಿಷನಿನವರ ಎದುರಿನಲ್ಲಿ ಭಾರತ ದೇಶದ ಸ್ತ್ರೀವರ್ಗದ ನಿರಕ್ಷರಾವಸ್ಥೆ-ಅಜ್ಞಾನಾವಸ್ಥೆಗಳನ್ನುಕುರಿತು ಸಾಕ್ಷ್ಯ ಕೊಡಬೇಕಾದ ಭಾರವು ಪಂ. ರಮಾಬಾಯಿಯ ಪಾಲಿಗೇ ಬಂದಿತು. ಆ ಸಂದರ್ಭದಲ್ಲಿ ರಮಾಬಾಯಿಯು –"ಭಾರತ ದೇಶದ ಒಂಬತ್ತುಕೋಟಿ ತೊಂಬತ್ತೇಳು ಲಕ್ಷ ಸ್ತ್ರೀ ಜನಸಂಖ್ಯೆಯಲ್ಲಿ ಒಂಬತ್ತುಕೋಟಿ ತೊಂಬತ್ತೈದು ಲಕ್ಷ ಮಂದಿ ಕೇವಲ ನಿರಕ್ಷರ ಕುಕ್ಷಿಗಳಾಗಿ ನಿಂತು, ಮಿಕ್ಕ ಎರಡು ಲಕ್ಷ ಮಂದಿ ಮಾತ್ರವೇ ಎರಡು ಕುರುಡು ಅಕ್ಷರಗಳನ್ನು ಕಲಿತವರಾಗಿದ್ದಾರೆ. ಸ್ತ್ರೀಯರು ಹೀಗೆ ಅನಕ್ಷರಸ್ಥರೂ ತನ್ಮೂಲಕ ಅಜ್ಞಾನಿಗಳೂ, ತನ್ಮೂಲಕ ಸ್ವದೇಶಾಭಿಮಾನ ವಿಹೀನರೂ, ತನ್ಮೂಲಕ ಸ್ವಾರ್ಥಿಗಳೂ, ಅದೂರದರ್ಶಿಗಳೂ, ಕ್ಷುದ್ರ ಹೃದಯರೂ ಆಗುವುದರಿಂದ ಸಂಸಾರದಲ್ಲಿ ಅವರ ನಿಕಟ ಸಂಬಂಧದಲ್ಲಿರುವ ತಮ್ಮ ಪತಿಪುತ್ರಬಾಂಧವರನ್ನೂ ತಾವಿ

ರುವ ಅಜ್ಞಾನಕೂಪಕ್ಕೇ ಎಳೆಯುದಿರುವರೇ ! ಹೀಗಾದರೆ ಹೇಗೆ--ಎಂದಿಗೆ ದೇಶೋದ್ಧಾರವಾದೀತು" ಎಂದು ಮುಂತಾಗಿ ವಾದಿಸಿದಳು. ಅಲ್ಲದೆ—'ಸ್ವಾಭಾವಿಕವಾಗಿ ಬಹು ಸಂಕೋಚ ಗಾಂಭೀರ್ಯ ಸ್ವಭಾವಗಳ ನಮ್ಮ ದೇಶೀಯ ಸ್ತ್ರೀಯರು ತಮ್ಮ ಅಂತರ್ಯ ರೋಗರುಜಿನೆಗಳ ವಿಚಾರಗಳನ್ನು ಪುರುಷರಾದ ಡಾಕ್ಟರು ಜನಕ್ಕೆ ತಿಳಿಸಲು ನಾಚಿ ಅನೇಕ ರೋಗಗಳಿಗೆ ತುತ್ತಾಗುತ್ತಿದ್ದಾರೆ. ಅದಕ್ಕೆ ಬದಲಾಗಿ ನಮ್ಮ ಸ್ತ್ರೀಯರೇ ವೈದ್ಯವಿದ್ಯೆಯನ್ನು ಅಭ್ಯಾಸಮಾಡುವಂತಾದರೆ, ಎಷ್ಟೋ ಅಮೌಲ್ಯ ಜೀವಿತಗಳು ಉಳಿಯಬಹುದಲ್ಲವೆ?' ಎಂದು ಮುಂತಾಗಿ ವಾದಿಸಿದಳು. ಈಕೆಯ ಈ ಬಗೆಯ ಸಾಕ್ಷ್ಯವು ಆ ಕಮಿಷನಿನಲ್ಲಿದ್ದ ಆಂಗ್ಲೀಯ ಸಭಾಸದರ ಮನಸ್ಸಿನ ಮೇಲೆ ಉತ್ತಮ ಪರಿಣಾಮವನ್ನುಂಟುಮಾಡಿತು.

ಮೇಲ್ಕಂಡ ಕಮಿಷನ್ ಎದುರಿಗೆ ಸಾಕ್ಷ್ಯ ಕೊಟ್ಟಾಗ ಆಕೆಯು ಮರಾಟಿ ಭಾಷೆಯಲ್ಲಿ ಹೇಳಿದ್ದನ್ನು ಬೇರೆಯವರು ಇಂಗ್ಲೀಷಿನಲ್ಲಿ ತರ್ಜುಮೆ ಮಾಡಿ ಹೇಳಿದ್ದರು. ತನ್ನ ಮನಸ್ಸಿನಲ್ಲಿದ್ದ ವಿಚಾರಗಳನ್ನು ರಾಜ್ಯಾಂಗದ ವರಿಗೆ ಸ್ಪಷ್ಟವಾಗಿ ತಿಳಿಸಲು ತನ್ನಲ್ಲಿದ್ದ ಈ ಲೋಪವನ್ನು ಪರಿಹರಿಸಿಕೊಳ್ಳ ಬೇಕೆಂದು ಎಣಿಸಿ, ಆಕೆಯು ಇಂಗ್ಲಿಷ್ ಭಾಷಾಭ್ಯಾಸಕ್ಕೆ ಪ್ರಾರಂಭಿಸಿದಳು. ಈ ಮಧ್ಯೆ-ಈ ಬಗೆಯ ಅಭಿವೃದ್ಧಿಕಾರ್ಯಕ್ಕೆ ನಮ್ಮವರಿಂದ ಕೇವಲ ಪ್ರೋತ್ಸಾಹದ ವಾಕ್ಸಹಾಯವೂ ದೊರೆಯದಿರುವಲ್ಲಿ ಇನ್ನು ದ್ರವ್ಯ ಸಹಾಯ ದೊರೆಯುವುದು ದುರ್ಲಭವೆಂಬ ವಿಚಾರವನ್ನಾದರೂ ಆಕೆಯು ಯೋಚಿಸದಿರಲಿಲ್ಲ. ಈ ಕಾರಣಗಳಿಂದ ಇಂಗ್ಲಿಷ್ ಭಾಷೆಯಲ್ಲಿ ಪ್ರೌಢ ವಿದ್ಯಾಭ್ಯಾಸಮಾಡುವುದರೊಂದಿಗೆ, ಅಲ್ಲಿಯ ಸ್ತ್ರೀಯರ ಸ್ಥಿತಿಗತಿಗಳನ್ನು ತಿಳಿದು ಅವರಿಗೆ ನಮ್ಮವರ ವಿಷಯವನ್ನು ತಿಳಿಸಿ ಸಾಧ್ಯವಿದ್ದರೆ ಸಹಾಯ ಹೊಂದಬಹುದೆಂದು ಬಗೆದು ಇಂಗ್ಲೆಂಡಿಗೆ ಹೋಗಬೇಕೆಂದು ನಿಶ್ಚಯಿಸಿದಳು. ಈ ಮೊದಲೇ ಆಕೆಯು 'ಸ್ತ್ರೀಧರ್ಮನೀತಿ' ಎಂಬೊಂದು ಪುಸ್ತಕವನ್ನು ಮಹಾರಾಷ್ಟ್ರಭಾಷೆಯಲ್ಲಿ ಬರೆದಿದ್ದಳು. ಅದು ಬಹುಮಂದಿ ವಿದ್ಯಾರ್ಥಿಗಳಿಂದ ಉತ್ತಮಾಭಿಪ್ರಾಯಗಳನ್ನು ಪಡೆದು, ಇತರ ಹಲವು ಭಾಷೆಗಳಿಗೆ ತರ್ಜುಮೆಯಾಯಿತು. ಆ ಮೂಲಕ ಆಕೆಗೆ ಇಂಗ್ಲೆಂಡಿನ ಪ್ರಯಾಣದ ವೆಚ್ಚಕ್ಕೆ ತಕ್ಕಷ್ಟು ದ್ರವ್ಯವು ದೊರೆಯಲು, ಆ ಧೀರ ರಮಣಿ

ಯು ತನ್ನ ಸುರಕ್ಷಿತ ಪ್ರಯಾಣದ ಭಾರವನ್ನು ಪರಮಾತ್ಮನ ಪಾಲಿಗೊಪ್ಪಿಸಿ ಹೊರಟು ೧೮೮೩ನೆಯ ಸಂ|| ದಲ್ಲಿ ಇಂಗ್ಲೆಂಡು ದೇಶದಲ್ಲಿ ಕಾಲಿಟ್ಟಳು.

ಅಲ್ಲಿ ಲಂಡನ್ ಮಿಷನ್ ಕನ್ಯಾಸ್ತ್ರೀ ಜನರು ಆಕೆಯನ್ನು ಪ್ರೀತಿ ಪೂರ್ವಕ ಕಂಡು ಉಪಚರಿಸಿ, ಆಕೆಗೆ ಬೇಕಾದ ಅನುಕೂಲಗಳನ್ನೆಲ್ಲ ಒದಗಿಸಿದರು. ಅಲ್ಲಿ ರಮಾಬಾಯಿಯು ಕ್ರೈಸ್ತಮತದ ಸಿದ್ಧಾಂತಗಳ ನಿಶ್ಚಯ ಸ್ವರೂಪವನ್ನು ತಿಳಿಯಲು ಹೆಚ್ಚು ಸಹಾಯ ದೊರೆಯಿತು. ಸುಪ್ರಸಿದ್ಧ ಕ್ರೈಸ್ತಬೋಧಕರ ಉಪನ್ಯಾಸಾದಿಗಳನ್ನು ಕೇಳಿಯೂ ಅತ್ಯಂತ ವಿಚಕ್ಷಣೆಯಿಂದ ರಚಿಸಲ್ಪಟ್ಟಿದ್ದ ಆ ಧರ್ಮದ ಮತಗ್ರಂಥಗಳನ್ನು ಓದಿಯೂ ಆಕೆಯ ಮನಸ್ಸು ಕ್ರೈಸ್ತಧರ್ಮವನ್ನು ಒಪ್ಪಿಕೊಂಡಿತು. ಮುಂದೆ ಒಂದು ದಿನ (೨೯-೯-೧೮೮೩) ಆಕೆಯು ಜ್ಞಾನಸ್ನಾನವನ್ನು ಹೊಂದಿ ಆ ಧರ್ಮವನ್ನು ಸ್ವೀಕರಿಸಿದಳು. ಮತ್ತು ಚೆಲ್ಟನ್‌ಹ್ಯಾಂ ಎಂಬಲ್ಲಿ 'ವಿಮೆನ್ಸ್ ಕಾಲೇಜ್' ಎಂಬ ವಿದ್ಯಾನಿಲಯಕ್ಕೆ ಸೇರಿ ಗಣಿತಶಾಸ್ತ್ರ, ವಿಜ್ಞಾನಶಾಸ್ತ್ರ, ಆಂಗ್ಲೇಯಸಾಹಿತ್ಯ ಮುಂತಾದುವುಗಳನ್ನು ಕಲಿಯತೊಡಗಿದಳಲ್ಲದೆ ಅಲ್ಲಿನವರಿಗೆ ತಾನೂ ಸಂಸ್ಕೃತಭಾಷೆಯನ್ನು ಕಲಿಸಲಾರಂಭಿಸಿದಳು. ಹೀಗೆ ಎರಡುವರ್ಷಕಾಲ ಅಲ್ಲಿದ್ದು ತರುವಾಯ ೧೮೮೬ ರಲ್ಲಿ ಅಮೆರಿಕಾಖಂಡಕ್ಕೆ ಪ್ರಯಾಣಮಾಡಿ, ಫಿಲೆಡೆಲ್‌ಫಿಯಾ ನಗರದಲ್ಲಿ ಇಳಿದಳು. ಆ ವರೆಗೇ ಆ ಪಟ್ಟಣದಲ್ಲಿದ್ದು ವೈದ್ಯಶಾಸ್ತ್ರದಲ್ಲಿ ಪ್ರೌಢವಿದ್ಯಾಭ್ಯಾಸ ಮಾಡುತ್ತಿದ್ದ ಡಾ. ಆನಂದೀಬಾಯಿ ಜೋಷಿ ಎಂಬ ಸಾಧ್ವಿಯು ಪಂಡಿತಾ ರಮಾಬಾಯಿಯನ್ನು ಕಂಡು ಪರಮಸಂತೋಷದಿಂದ ಗೌರವಿಸಿ, ಅಲ್ಲಿದ್ದ ತನ್ನ ಸಂಗಾತಿಯರನೇಕರಿಗೆ ಪರಿಚಯ ಮಾಡಿಸಿದಳು. ರಮಾಬಾಯಿಯು ಅಲ್ಲೂ ಎರಡು ವರ್ಷಕಾಲ ವಾಸಿಸಿ, ಫ್ರೋಬೆಲ್ ಎಂಬ ವಿದ್ಯಾನಿಧಿಯ ಕಿಂಡರ್‌ಗಾರ್ಟನ್ ವಿಧಾನದಲ್ಲೂ ಇತರ ಅನೇಕ ಬಗೆಯ ಶಿಕ್ಷಣವಿಚಾರಗಳಲ್ಲೂ ಅನುಭವ ಹೊಂದಿದುದಲ್ಲದೆ, ಅಮೆರಿಕದ ಸಂಯುಕ್ತಸಂಸ್ಥಾನಗಳು, ಕೆನಡಾ ಮುಂತಾದ ಪ್ರಾಂತಗಳಲ್ಲಿ ಸಹಸ್ರಾರು ಮೈಲು ಸಂಚರಿಸಿ ಅನೇಕ ಪಟ್ಟಣಗಳಲ್ಲಿ ಹಿಂದೂದೇಶದ ಸ್ತ್ರೀಯರ ಪೂರ್ವದ ಉನ್ನತೋನ್ನತ ಸ್ಥಿತಿಯನ್ನೂ ಸಧ್ಯದ ದುಸ್ಥಿತಿಯನ್ನೂ ಕುರಿತು ಉಪನ್ಯಸಿಸಿದಳು. ಅಲ್ಲದೆ 'ಹೈ ಕ್ಯಾಸ್ಟ್ ಹಿಂಡೂ ಉಮನ್' ಎಂದರೆ 'ಉಚ್ಚ ವರ್ಗದ ಹಿಂದೂಮಹಿಳೆ'

-ಎಂಬೊಂದು ಗ್ರಂಥವನ್ನು ಬರೆದು ಪ್ರಕಟಿಸಿದಳು. ಆದರಲ್ಲಿ ಭಾರತ ಸ್ತ್ರೀಯರಲ್ಲಿ ನೆಲೆಸಿರುವ ಕುಂದುಕೊರತೆಗಳೂ, ಅವರ ಅಭಿವೃದ್ಧಿಮಾರ್ಗ ದಲ್ಲಿರುವ ಅಡಚಣೆಗಳೂ ವಿಶದವಾಗಿ ಚರ್ಚಿಸಲ್ಪಟ್ಟಿರುವುದಲ್ಲದೆ, ಅವರ ಅಭಿವೃದ್ಧಿಗಾಗಿ ವಿದ್ಯಾವತಿಯರಾದ ಸ್ತ್ರೀಜನರು ಜಾತಿಕುಲ-ದೇಶವಿದೇಶ ಗಳೆಂಬ ಭೇದವನ್ನುತ್ಯಜಿಸಿ ಸರ್ವವಿಧದಿಂದಲೂ ಸಹಾಯಮಾಡಬೇಕೆಂದೂ ಕೋರಲ್ಪಟ್ಟಿದ್ದಿತು. ಅಲ್ಲದೆ, ಆಕೆಯ ಉಪನ್ಯಾಸಗಳೂ, ಭಾರತಸ್ತ್ರೀಯರ ವಿಚಾರದಲ್ಲಿ ಅಮೆರಿಕದ ಅನೇಕ ಸಜ್ಜನರ ಮನಸ್ಸಿನಲ್ಲಿ ದಯೆ ಕನಿಕರಗಳನ್ನು ಹುಟ್ಟಿಸಿದುವು. ಹಿಂದೂ ದೇಶದಲ್ಲಿ ಬಾಲ್ಯವಯಸ್ಸಿನ ವಿಧವೆಯರಿಗೆ ವಿದ್ಯಾ ಭ್ಯಾಸ ಮಾಡಿಸುವುದಕ್ಕಾಗಿ ಸಹಾಯಮಾಡಲು,—**"ಪಂಡಿತಾ ರಮಾ ಬಾಯಿ ಅಸೋಸಿಯೇಷನ್"** ಎಂಬೊಂದು ಸಂಘವು ೧೮೮೭ ನೆಯ ಡಿಶಂಬರ್ ೧೩ರಲ್ಲಿ ಬಾಸ್ಟನ್ ನಗರದಲ್ಲಿ ಸ್ಥಾಪಿತವಾಯಿತು. ಹೀಗೆ ತನ್ನ ಅಂತರಾತ್ಮನಲ್ಲಿ ಪ್ರೇರಿತವಾದ ಲೋಕಸೇವಾಕಾರ್ಯಕ್ಕಾಗಿ 'ಆತ್ಮಾ ರ್ಥಂ ಪೃಥಿವೀಂತ್ಯಜೇತ್' ಎಂಬ ಆರ್ಯೋಕ್ತಿಯನ್ನನುಸರಿಸಿ ಜಾತಿ ಮತಗಳ ಹದ್ದನ್ನು ದಾಟಿ ಮತಾಂತರ ಪ್ರವೇಶಮಾಡಿ-ಖಂಡಾಂತರಗಳಲ್ಲಿ ಪ್ರವಾಸಮಾಡಿ ಕೊನೆಗೂ ತನ್ನ ಉದ್ದೇಶವನ್ನು ಸಾಧನೆ ಮಾಡಿಕೊಂಡು, ರಮಾಬಾಯಿಯು, ಅಲ್ಲೂ ಎರಡು ವರ್ಷಕಾಲ ವಾಸಿಸಿದ್ದು ಹಿಂದಿರುಗಿ ಮಾತೃದೇಶವನ್ನು ಕುರಿತು ಹೊರಟು ೧೮೮೯ನೆಯ ಇಸ್ವಿ ಫೆಬ್ರವರಿ ತಿಂಗ ಳಲ್ಲಿ ಕಲ್ಕತ್ತಾ ನಗರದಲ್ಲಿ ಹಡಗನ್ನಿಳಿದಳು!



## ಅಧ್ಯಾಯ ೬ "ಶಾರದಾಸದನ-ಮುಕ್ತಿಸದನಗಳು"

ಅಮೆರಿಕಾದಲ್ಲಿದ್ದಾಗ್ಗೆ ಪಂಡಿತಾ ರಮಾಬಾಯಿಯು ರಚಿಸಿದ್ದ 'ಹೈಕ್ಯಾಸ್ಟ್ ಹಿಂಡೂ ಉಮನ್' ಎಂಬ ಪುಸ್ತಕದಲ್ಲಿ - ಆಕೆಯು ಭಾರತ ದೇಶದ ವಿಧವಾಸ್ತ್ರೀಯರ ದುಸ್ಥಿತಿಯನ್ನೂ ಅವರ ಪುನರುದ್ಧಾರದ ಮಾರ್ಗ ವನ್ನೂ ಕುರಿತು ವರ್ಣಿಸಿದ್ದಳೆಂದಲ್ಲವೆ ಹಿಂದೆ ಹೇಳಿದೆ! ಆ ವಿಷಯದಲ್ಲಿ

ಆ ದೇಶದ ಸ್ತ್ರೀಯರು ತೋರ್ಪಡಿಸಿದ ಸಹಾನುಭೂತಿ-ಪ್ರೋತ್ಸಾಹಗಳು ಮಾತೃದೇಶಕ್ಕೆ ಬಂದೊಡನೆಯೇ ಆ ಸಂಬಂಧ ಒಂದು ಗೊತ್ತಾದ ಕಾರ್ಯ ಪ್ರಾರಂಭಮಾಡಬೇಕೆಂಬ ವಿಷಯದಲ್ಲಿ ಆಕೆಯನ್ನು ಪ್ರೇರಿಸಿದುವು. ಅದಕ್ಕನುಸಾರವಾಗಿ, ಸೌ. ರಮಾಬಾಯಿ ರಾನಡೇಯು ಬೆಂಬಲಳಾಗಿರಲು ಪಂಡಿತಾ ರಮಾಬಾಯಿಯು ೧೮೮೯ನೆಯ ಇಸ್ವಿ ಮಾರ್ಚ ೧ನೇ ತಾರೀಖಿನ ದಿನ, ಬೊಂಬಾಯಿನಗರದ ಚೌಪಾತಿ ಎಂಬಲ್ಲಿ '**ಶಾರದಾಸದನ**'ವೆಂಬ ಹೆಸರಿನ ಅನಾಥ ವಿಧವೆಯರ ವಸತಿಗೃಹದ ಪ್ರಾರಂಭ ಮಹೋತ್ಸವವನ್ನು ನಡೆಯಿಸಿದಳು. ಪಂಡಿತೆಯ ಉದ್ದೇಶದ ಸಾರ್ಥಕತೆಯೋ ಎಂಬಂತೆ ಅದನ್ನು ಪ್ರಾರಂಭಿಸಿದಾಗ ಮೊದಲನೆಯ ಸಾರಿ ಅದಕ್ಕೆ ಬಂದು ಸೇರಿದ ಬಾಲಿಕೆಯ ಹೆಸರು ಶಾರದಾ ಎಂದಿತ್ತು. ಆಕೆಯು ವಿಧವೆಯೇ ಅಲ್ಲದಿದ್ದರೂ ಅನಾಥಳಾಗಿದ್ದಳು. ಕೆಲವು ದಿನಗಳಲ್ಲೇ ಒಬ್ಬ ಬಾಲ ವಿಧವೆಯು ಬಂದು ಸೇರಿದಳು. ಈ ಸಂಖ್ಯೆಯು ನಿಧಾನವಾಗಿ ಹೆಚ್ಚುತ್ತಾ ಒಂದು ಆರು ತಿಂಗಳೆಂಬವೇಳೆಗೆ ಸದನದಲ್ಲಿ ಕಾಯಂ ಆಗಿ ವಾಸಿಸುವ ಐದು ಮಂದಿ ಅನಾಥ ವಿಧವೆಯರೂ, ಮೂರು ಮಂದಿ ಹಗಲು ವಿದ್ಯಾರ್ಥಿನಿಯರೂ ಇದ್ದರು —ಹೊರಗಿನವರೂ ಸೇರಿ ಆ ಸದನದಲ್ಲಿ ಒಟ್ಟು ಇಪ್ಪತ್ತೈದು ಮಂದಿ ಶಿಕ್ಷಣ ಹೊಂದುವವರಿದ್ದರು

ಪಂಡಿತಾ ರಮಾಬಾಯಿಯು ತಾನು ಕ್ರೈಸ್ತಮತವನ್ನು ಅವಲಂಬಿಸಿದ್ದ ವರ್ತಮಾನವನ್ನು ಮುಚ್ಚಿಡಲು ಯತ್ನಿಸಲಿಲ್ಲ. ಅಂತೆಯೇ ತನ್ನ ಶಾರದಾ ಸದನದಲ್ಲಿ ಅಭ್ಯಸಿಸುತ್ತಿದ್ದ ವಿದ್ಯಾರ್ಥಿನಿಯರನ್ನು ಕ್ರೈಸ್ತರಾಗುವಂತೆ ಎಂದೂ ಪ್ರೇರಿಸಲೂ ಇಲ್ಲ. ಆದರೂ ಮುಂದೆ ಸ್ವಲ್ಪ ದಿನಗಳಲ್ಲೇ. 'ರಮಾಬಾಯಿಯು ತನ್ನ ಸದನದಲ್ಲಿನ ಬಾಲಿಕೆಯರನ್ನು ಕ್ರೈಸ್ತಮತಕ್ಕೆ ಸೇರುವ ವಿಷಯದಲ್ಲಿ ಪ್ರೋತ್ಸಾಹಿಸುತ್ತಿದ್ದಾಳೆ'ಂಬ ಒಂದು ವಾರ್ತೆಯು ಹೇಗೋ ಹುಟ್ಟಿ ಹಬ್ಬಿತು ಆ ಸಂಗತಿಯು ತಿಳಿದೊಡನೆಯೆ ರಮಾಬಾಯಿಯು ಒಂದಾನೊಂದು ಸುಪ್ರಸಿದ್ಧ ವಾರ್ತಾ ಪತ್ರಿಕೆಯಲ್ಲಿ 'ಸದನದಲ್ಲಿನ ವಿದ್ಯಾರ್ಥಿನಿಯರ ಮತ ವಿಚಾರದಲ್ಲಿ ಯಾರೂ ಎಷ್ಟು ಮಾತ್ರವೂ ಪ್ರವೇಶಿಸುತ್ತಿಲ್ಲ'ವೆಂಬ ವಿಚಾರವನ್ನು ಬರೆದು ಪ್ರಕಟಿಸಿದಳು. ಹೀಗೆ ಕೆಲವು ದಿನಗಳು ಸಾಗಿದುವು.

ರಮಾಬಾಯಿಯು ಸ್ವಾಭಾವಿಕವಾಗಿಯೇ ಶಾಂತಳೂ ಶಾಂತಿಭೂರ್ತಳೂ ಗಂಭೀರ ಪ್ರಕೃತಿಯವಳೂ ತೇಜಸ್ವಿನಿಯೂ ಆಗಿದ್ದು ಸಾಲದುದಕ್ಕೆ ಅ

ಪ್ರತಿಮ ದೇಹ ಸೌಂದರ್ಯವನ್ನೂ ಗಳಿಸಿದ್ದಳು. ಆದುದರಿಂದ ಆಕೆಯನ್ನು ನೋಡಿದವರೆಲ್ಲರೂ, ಆಕೆಯ ಮೋಹಕಸ್ವರೂಪ ಮೃದುಭಾಷಣ ಮಂದ ಹಾಸ ಮುಂತಾದುವುಗಳಿಂದ ಆಕರ್ಷಿತರಾಗದಿರಲು ಸಾಧ್ಯವಿರಲಿಲ್ಲ. ಹೀ ಗಿರುವಲ್ಲಿ ಅಹರ್ನಿಶಿಯೂ ಆಕೆಯ ಬಳಿಯಲ್ಲೇ ಇರುತ್ತಿದ್ದ ತಿಳಿಮನಸ್ಸಿನ ಬಾಲಿಕೆಯರನ್ನು ಕೇಳುವುದೇನು! ಮುಂದೆ ಕೆಲವು ದಿನಗಳಲ್ಲೇ ಸದನದ ಕಾಯಂ ನಿವಾಸಗಳಲ್ಲಿಬ್ಬರು ಬಾಲ ವಿಧವೆಯರು ಕ್ರೈಸ್ತಧರ್ಮವನ್ನು ಅವ ಲಂಬಿಸಿದರೆಂಬ ವಾರ್ತೆಯು ಎಲ್ಲೆಲ್ಲೂ ಹಬ್ಬಿತು. ಈ ಸಂಬಂಧದಲ್ಲಿ ವಾಸ್ತ ವವಾಗಿ ರಮಾಬಾಯಿಯು ಎಂದೂ ಯಾರಿಗೂ ಏನೂ ಹೇಳಿರಲಿಲ್ಲವೆಂಬುದು ನಿಶ್ಚಯ. ಆದರೆ ಪಂಡಿತಾ ರಮಾಬಾಯಿಯ ಪ್ರಾರ್ಥನಾಗೃಹಕ್ಕೆ ಪ್ರಾರ್ಥನೆಯ ವೇಳೆಯಲ್ಲಿ ಅನೇಕಮಂದಿ ಬಾಲಿಕೆಯರು ಬಂದು ಕುಳಿತು, ಶಾಂತಮುದ್ರೆಯಿಂದ ಧ್ಯಾನಮಗ್ನಳಾಗಿ ಕುಳಿತಿರುತ್ತಿದ್ದ ರಮಾಬಾಯಿ ಯನ್ನು ಕಂಡು, ಆಕೆಯು ಕೈಮುಗಿದರೆ ತಾವೂ ಮುಗಿಯುತ್ತಾ, ಆಕೆಯು ಮೊಣಕಾಲೂರಿ ನಮಿಸಿದರೆ ತಾವೂ ನಮಿಸುತ್ತ ಭಕ್ತಿರಸ ಪ್ರವಾಹದಲ್ಲ ತೇಲಿಹೋಗುವಂತಿರುವರು. ಪ್ರಾರ್ಥನೆಯು ಮುಗಿದ ತರುವಾಯ ರಮಾ ಬಾಯಿಯು ಅಲ್ಲಿ ನೆರೆದಿದ್ದ ಬಾಲಿಕೆಯರನ್ನೆಲ್ಲ ಒಬ್ಬೊಬ್ಬರನ್ನಾಗಿ ಕರೆದು ಮುತ್ತಿಕ್ಕಿ ಆಶೀರ್ವದಿಸಿ ಕಳುಹಿಸುವಳು. ಹೀಗೆ ದಿನವೂ ನಡೆಯುತ್ತಿದ್ದಿತು.

ಮಹಾದೇವ ಗೋವಿಂದರಾನಡೇಯು ಪ್ರಾರಂಭದಿಂದ ರಮಾಬಾ ಯಿಯು ಮಾಡುತ್ತಿದ್ದ ಕಾರ್ಯಗಳಲ್ಲೆಲ್ಲ - ಮುಖ್ಯವಾಗಿ ಸ್ತ್ರೀ ವಿದ್ಯಾ ಭ್ಯಾಸ ಮತ್ತು ಅನಾಥ ವಿಧವಾ ರಕ್ಷಣೆಯ ಮುಖ್ಯೋದ್ದೇಶಗಳನ್ನುಳ್ಳು ದಾಗಿದ್ದ ಶಾರದಾಸದನದ ವಿಚಾರದಲ್ಲಿ ಅತ್ಯುತ್ತಮ ಮನೋಭಾವದಿಂದಿದ್ದು ತನ್ನಿಂದ ಸಾಧ್ಯವಿದ್ದ ಸಹಾಯಗಳನ್ನೆಲ್ಲ ಮಾಡುತ್ತಿದ್ದನು. ಸದನವು ಸ್ವ ಮಾರು ಎಂಟು ತಿಂಗಳಕಾಲ ಬೊಂಬಾಯಿ ನಗರದಲ್ಲಿದ್ದು, ಅಲ್ಲಿ ಜೀವನದ ವೆಚ್ಚಗಳು ಹೆಚ್ಚಾದುದರಿಂದ ಅದೇ ವರ್ಷದ ನವಂಬರು ತಿಂಗಳಲ್ಲಿ ಪೂನಾ ನಗರಕ್ಕೆ ವರ್ಗಾಯಿಸಲ್ಪಟ್ಟಿತು. ಆಗ ಆಶ್ರಮದಲ್ಲಿ ಹದಿನೆಂಟು ಮಂದಿ ವಿಧವೆಯರಿದ್ದರು. ಅದು ದಿನದಿನಕ್ಕೆ ಎಲ್ಲಾ ಭಾಗದಲ್ಲೂ ಅಭಿವೃದ್ಧಿಯಾಗು ತ್ತಾ ೧೮೯೧ನೆಯ ಸಂ||ದ ವೇಳೆಗೆ ಐವತ್ಮೂರು ಮಂದಿ ವಿದ್ಯಾರ್ಥಿನಿಯರು ಆಶ್ರಮದಲ್ಲಿ ವಾಸಿಸುತ್ತಿದ್ದರು. ಆದರೆ ಇದಾದ ಕೆಲವು ದಿನಗಳೊಳಗಾಗಿ

ಮೊಳ್ಕೊಂಡ ರಾನಡೇ, ಭಂಡಾರ್ಕರ್ ಮುಂತಾದ ಕೆಲವುಮಂದಿ ಪ್ರಮುಖ ಪುರುಷರು, ಬಾಸ್ಟನಿನಲ್ಲಿದ್ದ-ಶಾರದಾಸದನದ ಕಾರ್ಯಕಾರಿ ಸಭೆಯ ಸಭಾಸದತ್ವಕ್ಕೆ ರಾಜೀನಾಮೆ ಕೊಟ್ಟರು. 'ಸದನದ ವಿದ್ಯಾರ್ಥಿನೀ ವರ್ಗಕ್ಕೆ, ಕ್ರೈಸ್ತಮತಕ್ಕೆ ಸೇರುವಂತೆ ಬೋಧಿಸುತ್ತ-ಹೀಗೆ ಪ್ರಾರಂಭದ ಉದ್ದೇಶಕ್ಕೆ ವಿರೋಧವಾಗಿ ನಡೆಯುತ್ತಿದ್ದ ರಮಾಬಾಯಿಯ ಚರ್ಯೆಯೇ ರಾಜೀನಾಮೆಗಳಿಗೆ ಕಾರಣ'ವೆಂದು ಹೇಳಲ್ಪಟ್ಟಿತು. ಏನಾದರೂ ಪಂ. ರಮಾಬಾಯಿಯು ತಾನು ನಂಬಿ ಕೈಕೊಂಡ ಮಾರ್ಗದಿಂದ ಲೇಶಮಾತ್ರವೂ ಚಲಿಸದೆ, ಅನಾಥ ವಿಧವೆಯರು ಎಲ್ಲಿ ಕಷ್ಟಪಡುತ್ತಿದ್ದಾರೆಂದು ವರ್ತಮಾನ ತಿಳಿದೊಡನೆಯೇ ಅಲ್ಲಿಗೆ ಹೋಗಿ ಅವರನ್ನು ಕರತಂದು ಆಶ್ರಮದಲ್ಲಿಟ್ಟು, ಅನ್ನವಸ್ತ್ರಗಳನ್ನಿತ್ತು ಕಾಪಾಡಿ ವಿದ್ಯಾಭ್ಯಾಸ ಮಾಡಿಸುತ್ತಾ, ಅದೇ ತಾನು ಮಾಡುವ ಈಶಸೇವೆಯೆಂದು ಮನಃಪೂರ್ವಕ ಭಾವಿಸಿದ್ದಳು.

ಇತ್ತ ಶಾರದಾಸದನದ ಸೇವಾಕಾರ್ಯವು ಎಂದಿನಂತೆ ನಡೆಯುತ್ತಿರಲು ಅತ್ತ ಮತ್ತೊಂದು ಕಾರ್ಯವು ಆಕೆಯ ಗಮನವನ್ನು ಎಳೆಯಿತು. ೧೮೯೬ರಲ್ಲಿ ಮಧ್ಯಹಿಂದೂಸ್ಥಾನ ಪ್ರಾಂತದಲ್ಲಿ ಬಹು ಪ್ರಬಲವಾದ ಕ್ಷಾಮವು ಪ್ರಾಪ್ತವಾಗಿ ಸಹಸ್ರಾರು ಮಂದಿ ಮೃತ್ಯುವಿಗೆ ತುತ್ತಾಗಸಾಗಿದರು. ಜನಗಳಿಗೆ ಮೂರು ನಾಲ್ಕು ದಿನಗಳಿಗೆ ಒಂದು ತುತ್ತು ಗಟ್ಟಿಕೂಳು ಸಿಕ್ಕುವುದು ಕಷ್ಟವೆನಿಸಿತು. ಕುಡಿಯುವುದಕ್ಕೆ ನೀರೂ ತಕ್ಕಷ್ಟು ದೊರೆಯುತ್ತಿರಲಿಲ್ಲ. ಊರಿನ ಬೀದಿಗಳಲ್ಲೂ ಬಯಲುಗಳಲ್ಲೂ ಕೆರೆ ಬಾವಿಗಳ ಸಮೀಪದಲ್ಲೂ ಅನಾಥರ ಶವಗಳು ದೃಷ್ಟಿಗೋಚರವಾಗುತ್ತಿದ್ದುವು. ಈ ವಾರ್ತೆಯನ್ನು ರಮಾಬಾಯಿಯು ಕೇಳಿದೊಡನೆಯೇ, ಆಕೆಯ ದಯಾಮಯ ಹೃದಯವು ದುಃಖದಿಂದ ಎರಡು ಭಾಗವಾಗಿ ಬಿರಿದುಹೋದಂತೆ ಆಯಿತು. ಚಿಕ್ಕ ವಯಸ್ಸಿನಲ್ಲಿ ತನ್ನ ತಾಯಿಯು ಮರಣೋನ್ಮುಖಳಾಗಿದ್ದಾಗಲೂ, ತಂದೆಯು ಮೃತನಾಗಿದ್ದಾಗಲೂ, ಒಪ್ಪೊತ್ತಿನ ಜೀವನಕ್ಕಾಗಿ ಮನೆ ಮನೆ ಅಲೆದು ಕಷ್ಟಾನುಭವ ಮಾಡಿದ್ದಳಾದುದರಿಂದ ಬಡತನದ ಕಷ್ಟಸಂಕಟಗಳೆಂದರೇನೆಂಬುದನ್ನು ತಿಳಿದು ರಮಾಬಾಯಿಯು, ಶಾರದಾಸದನವನ್ನು ಸುಂದರೀಬಾಯಿ ಪವಾರ್ ಎಂಬೊಬ್ಬ ಮಹಿಳೆಯ ಆಧಿಪತ್ಯಕ್ಕೆ ವಹಿಸಿ, ತಾನು ಕ್ಷಾಮಪೀಡಿತ ಪ್ರದೇಶಕ್ಕೆ ಹೋಗಿ ಆ ದುರ್ದೈವಿಗಳಿಗೆ ಸಹಾಯಕ

ಳಾಗಲು ಅಪೇಕ್ಷಿಸಿದಳು. ಸರ್ಕಾರದವರೂ ಅವರೆಗೇ ಕ್ಷಾಮನಿವಾರಕ 'ರಿಲೀಫ್' ಕಾಂಗಾರಿಗಳನ್ನು ಆರಂಭಿಸಿದ್ದರಾದರೂ ರಮಾಬಾಯಿಯ ಪಾಲಿಗೂ ಸಾವಿರಾರು ಮಂದಿ ಸಿಕ್ಕರು. ಅವರನ್ನೆಲ್ಲರನ್ನೂ ರಮಾಬಾಯಿಯು ಪೂನಾಪಟ್ಟಣದಿಂದ ಮೂವತ್ತು ಮೈಲುಗಳ ದೂರವಿರುವ ಕೆಡ್ಗಾಂವ್ ಎಂಬ ರೈಲ್ವೆಸ್ಟೇಷನ್ ಸಮೀಪಕ್ಕೆ ಕರೆತಂದಳು. ಮತ್ತು ಅವರ ವಾಸಕ್ಕಾಗಿ ಅಲ್ಲೊಂದು ಆಶ್ರಮವನ್ನು ಸ್ಥಾಪಿಸಿ, ಅದನ್ನು '**ಮುಕ್ತಿಸದನ**' ವೆಂಬ ಹೆಸರಿನಿಂದ ಕರೆದಳು. ಅಲ್ಲಿ ಕ್ಷಾಮಪೀಡಿತರಾದ ಈ ಜನಗಳಿಗೆ ಕೇವಲ ಜೀವನಕ್ಕೆ ಕೊಡುತ್ತಿದ್ದುದು ಮಾತ್ರವಲ್ಲ, ಅವರಿಗೆ ವ್ಯವಸಾಯ ಪಶುಪಾಲನ ನೂಲುವಿಕೆ ಬಟ್ಟೆನೇಯುವಿಕೆ ಮರಗೆಲಸಗಳನ್ನು ಕಲಿಯುವುದಕ್ಕೂ ಅವರ ಬಾಲಕ ಬಾಲಕೆಯರಿಗೆ ವಿದ್ಯಾಭ್ಯಾಸಕ್ಕೂ ತಕ್ಕಏರ್ಪಾಡುಗಳಿದ್ದುವು. ರಮಾಬಾಯಿಯಿಂದ ಈ ದೇಶದಲ್ಲಿ ನಡೆಯುತ್ತಿದ್ದ ಈ ಕೆಲಸಗಳಿಗಾಗಿ, ಅಮೆರಿಕಾದ 'ಪಂಡಿತಾ ರಮಾಬಾಯಿ ಅಸೋಸಿಯೇಷನ್'ನವರು ವರ್ಷವೊಂದಕ್ಕೆ ಐದು ಸಾವಿರ ಡಾಲರ್‌ಗಳನ್ನು ಕೊಡುವುದಾಗಿ ಒಪ್ಪಿದ್ದರಾದರೂ ಪ್ರತಿ ವರ್ಷವೂ, ಆರು ಸಾವಿರಕ್ಕೆ ಕಡಮೆಯಿಲ್ಲದೆ ಕೊಡುತ್ತಾಬಂದಿದ್ದರು. ರಮಾಬಾಯಿಯು ಈ ಎಂಟು ವರ್ಷಗಳ ಕಾಲ ಅವುಗಳ ರಕ್ಷಕಳಾಗಿದ್ದು ಮಾಡಿದ್ದ ತನ್ನ ಕಾರ್ಯಗಳ ವರದಿಯನ್ನು ಅಲ್ಲಿನ ಕಾರ್ಯಕಾರಿ ಮಂಡಲಕ್ಕೆ ಒಪ್ಪಿಸುವುದಕ್ಕಾಗಿ ೧೮೯೮ನೆ ಸಂ||ದಲ್ಲಿ ಸ್ವತಃ ಮತ್ತೊಂದುಸಾರಿ ಅಮೆರಿಕಾ ಖಂಡಕ್ಕೆ ಪ್ರಯಾಣಮಾಡಿದಳು. ಅಲ್ಲಿಯ ಆಕೆಯ ಮಿತ್ರವೃಂದವೆಲ್ಲ, ಆಕೆಯ ಶಕ್ತಿ ಸಾಮರ್ಥ್ಯ-ಸ್ವಾರ್ಥತ್ಯಾಗಗಳ ಪ್ರತಿಫಲಸ್ವರೂಪಗಳಾದ ಶಾರದಾಸದನ-ಮುಕ್ತಿಸದನಗಳ ವೃತಾಂತಗಳನ್ನು ಕೇಳಿ ಪರಮಾನಂದಪಟ್ಟರು.



# ಉಪಸಂಹಾರ

ಅಮೆರಿಕಾದಿಂದ ಸ್ವದೇಶಕ್ಕೆ ಹಿಂದಿರುಗಿ ಪಂಡಿತಾ ರಮಾಬಾಯಿಯು ತನ್ನ ಧೈರ್ಯೋತ್ಸಾಹಗಳನ್ನು ದ್ವಿಗುಣಿತ ಪಡಿಸಿಕೊಂಡು, ಶಾರದಾಸದನವನ್ನು ಪೂನಾದಿಂದ ಮುಕ್ತಿಸದನಕ್ಕೆ ಬದಲಾಯಿಸಿಕೊಂಡಳು. ಅಲ್ಲದೆ ಅನಾ

ಧರು ಅಂಗಹೀನರು ಪಾಪಿ ಪರದೇಶಿಗಳು ಇವರ ಪೋಷಣೆಗೆಂದು '**ಕೃಪಾ ಸದನ**'ವೆಂಬ ಮತ್ತೊಂದು ಭಾಗವನ್ನೂ ಅಲ್ಲೇ ಏರ್ಪಡಿಸಿದಳು. ಅದರಲ್ಲೂ ಅನೇಕ ಮಂದಿ ಅನಾಥರು ಅನ್ನವಸ್ತ್ರಗಳನ್ನು ಪಡೆದು ಪೋಷಿಸಲ್ಪಟ್ಟರು.

ಪಂಡಿತಾ ರಮಾಬಾಯಿ ಸರಸ್ವತಿಯ ಈ ಅನೇಕಾನೇಕ ಸೇವಾಕಾರ್ಯಗಳನ್ನು ಗಮನಿಸಿ ರಾಜ್ಯಾಂಗದವರೂ ಆಕೆಗೆ ೧೯೧೯ನೆಯ ಸಂ||ದಲ್ಲಿ ಕೈಸರ್-ಇ-ಹಿಂದ್ ಎಂಬ ಘನತರವಾದ ಬಿರುದನ್ನಿತ್ತು ಗೌರವಿಸಿದರು.

ಮುಂದೆ ೧೯೨೧ನೆಯ ಜೂಲೈ ೨೪ನೆಯ ದಿನ ಆಕೆಯ ಏಕಮಾತ್ರ ಪುತ್ರಿಯಾದ ಕುಮಾರಿ ಮನೋರಮಾಬಾಯಿಯು ಸ್ವರ್ಗಸ್ಥಳಾದಳು. ಚಿಕ್ಕಂದಿನಿಂದಲೂ ಅನೇಕ ಬಗೆಯ ಕಷ್ಟಕಾರ್ಪಣ್ಯಗಳಿಗೀಡಾಗಿ ಬಳಲಿದ್ದ ರಮಾಬಾಯಿಯ ಶರೀರವು ಆ ಮಗಳ ಅಗಲಿಕೆಯಿಂದ ಈಗ ಮತ್ತಷ್ಟು ಬಳಲಿಕೆಗೀಡಾಯಿತು. ೧೯೨೨ನೆಯ ಏಪ್ರಿಲ್ ಐದನೆಯ ತಾರೀಖಿನ ದಿನ ದೀನಜನ ಶರಣ್ಯಳಾಗಿದ್ದ ಸಾಧ್ವಿ ರಮಾಬಾಯಿಯೂ ಮಲಗಿದ್ದಂತೆಯೇ ಅನಾಯಾಸ ಮರಣವನ್ನು ಹೊಂದಿ ಲೋಕಪಿತನ ಸಾನ್ನಿಧ್ಯವನ್ನು ಸೇರಿದಳು

ಮಹಾ ಸಾಧ್ವಿ ರಮಾಬಾಯಿಯು ತಾನು ಕೇವಲ ಬಡತನದಲ್ಲೇ ಹುಟ್ಟಿ ಬೆಳೆದರೂ, ತಾನು ಗಳಿಸಿದ್ದ ವಿದ್ಯಾವೈಭವಾದಿಗಳನ್ನೂ ಬುದ್ಧಿ ಸಂಪತ್ತನ್ನೂ ಭಗವದ್ದತ್ತವಾದ ಶಕ್ತಿಸಾಮರ್ಥ್ಯಗಳನ್ನೂ ಎರಡು ಕುರುಡುಕಾಸುಗಳಿಗೆ ಮಾರಿಕೊಳ್ಳದ, ತಾನು ಚಿಕ್ಕಂದಿನಲ್ಲಿ ಅನುಭವಿಸಿದ ಕಷ್ಟಕಾರ್ಪಣ್ಯಗಳ ಚಿತ್ರವನ್ನು ಸದಾ ಕಣ್ಣೆದುರಿನಲ್ಲಿಟ್ಟುಕೊಂಡು, ಯಾವ ತನ್ನ ದೇಶೀಯ ಸಹೋದರಿಯರಲ್ಲಿ ನೆಲೆಸಿದ್ದ ಆ ಬಗೆಯ ದುರ್ಗತಿದುಸ್ಥಿತಿಗಳನ್ನು ನಿವಾರಿಸುವುದಕ್ಕಾಗಿಯೇ ತನ್ನ ಜೀವಿತವನ್ನು ತೇಯ್ದು ಶ್ರಮಿಸಿದ್ದಳೋ ಅಂತಹ ಸೇವಾಭಾವವು ನಮ್ಮವರನ್ನೂ ಪ್ರೇರಿಸಿ ಅವರಲ್ಲೂ-ಸ್ವಜನರ ಶ್ರೇಯೋಭಿವೃದ್ಧಿಗಾಗಿಯೂ-ಪಾಪಿ ಪರದೇಶಿಗಳ ಕ್ಷೇಮಕ್ಕಾಗಿಯೂ ಸ್ವಾರ್ಥತ್ಯಾಗ ಮಾಡಿ ಶ್ರಮಿಸುವಂತಹ ಚಿತ್ತವೃತ್ತಿಯನ್ನು ಉಂಟುಮಾಡಲ

**ತಥಾಸ್ತು.**



ಸುಬೋಧ ಪ್ರಕಟನಾಲಯದಿಂದ ಪ್ರಕಟವಾಗುವ

ಸಚಿತ್ರ ] **ಸುಬೋಧ** [ ಮಾಸ ಪತ್ರಿಕೆ

**ಮೂರನೆಯ ಸಂಪುಟವು** ೧೯೨೭ ನೇ ಅಕ್ಟೋಬರ್ ತಿಂಗಳಿಂದ ಪ್ರಾರಂಭ

ಇದರಲ್ಲಿ ಧಾರ್ಮಿಕ, ನೈತಿಕ, ಸಾಮಾಜಿಕ, ವಿದ್ಯಾವಿಷಯಕ, ಮತ್ತು ಇತರ ಬೋಧಪರ ಲೇಖಗಳು, ಸುಲಭವೂ ಮನೋಹರವೂ ಆದ ತಿಳಿಗನ್ನಡದಲ್ಲಿ ಕರ್ಣಾಟಕದ ಸುಪ್ರಸಿದ್ಧ ಲೇಖಕರಿಂದ ಬರಯಲ್ಪಟ್ಟು ಪ್ರಕಟವಾಗುವುವು. ಅಲ್ಲದೆ ಆರ್ಷೇಯ ಕರ್ಣಾಟಕ ರಾಜ್ಯವಾದ ಹಳೇಬೀಡು ದ್ವಾರಸಮುದ್ರಗಳ ಚರಿತ್ರಾಂಶಗಳನ್ನು ವರ್ಣಿಸುವ 'ಶಾಂತಳಾ' ಎಂಬೊಂದು ಸುಮನೋಹರ ಕರ್ಣಾಟಕ ನಾಟಕವೂ ಕ್ರಮಶಃ ಪ್ರಕಟವಾಗುತ್ತಿದೆ.

ವಾರ್ಷಿಕ ಚಂದಾ ರೂ ೧-೮-೦ (ಅಂಚೇವೆಚ್ಚ ಉಚಿತ)

ಶ್ರೀ

ಕರ್ಣಾಟಕ

# ಹರಿದಾಸ ಕೀರ್ತನ ತರಂಗಿಣಿ

**ಪ್ರಭವ ಸಂವತ್ಸರ ಚೈತ್ರ ಮಾಸದಿಂದ ಪ್ರಥಮ ಸಂಪುಟವು ಪ್ರಾರಂಭವಾಗಿದೆ**

ಶ್ರೀ ಪುರಂದರದಾಸರು, ಕನಕದಾಸರೇ ಮೊದಲಾದ ಸುಪ್ರಸಿದ್ಧ ಕರ್ಣಾಟಕ ಹರಿದಾಸರುಗಳು ಲೋಕೋಪಕಾರಾರ್ಥವಾಗಿ ರಚಿಸಿದ ಕೀರ್ತನೆ-ಸುಳಾದಿ-ಉಗಾಭೋಗಗಳು ಬಹಳ ಶುದ್ಧರೀತಿಯಿಂದ ಮಾಸಪುಸ್ತಕರೂಪದಲ್ಲಿ ಪ್ರಕಟವಾಗುವುವು. ಪ್ರತಿ ಶುದ್ಧ ಪೌರ್ಣಿಮೆಯ ದಿನ ಪ್ರಕಟವಾಗುವುದು.

| | ವಾರ್ಷಿಕ ಚಂದಾ | ಬಿಡಿ ಪ್ರತಿ |
|---|---|---|
| ಉತ್ತಮ ಪ್ರತಿ | ೨—೪—೦ | ೦—೩—೦ |
| ಸಾಮಾನ್ಯ ಪ್ರತಿ | ೧—೮—೦ | ೦—೨—೦ |

ವಿಳಾಸ:—ಮ್ಯಾನೇಜರ್, **ಸುಬೋಧ ಪ್ರಕಟನಾಲಯ,**
ನ್ಯೂ ಮಾರ್ಕೆಟ್, ಬೆಂಗಳೂರು ಸಿಟಿ.




ಬ್ರಂಹಸಮಾಜ ಸ್ಥಾಪಕನಾದ

**ರಾಜಾ ರಾಮಮೋಹನ ರಾಯ್.**

— ಶ್ರೀರಾಮಸಹಾಯಂ —

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## ( ಸಚಿತ್ರ ಮಾಸ ಪುಸ್ತಕಾವಳಿ )

**ಮುನ್ನುಡಿ : —**

ರಾಜಾ ರಾಮಮೋಹನರಾಯನು ಭಾರತದೇಶಾಭಿಮಾನಿಗಳಲ್ಲಿ ಅಗ್ರಗಣ್ಯರ ತರಗತಿಗೆ ಸೇರಲರ್ಹನು. ಬ್ರಿಟಿಷರು ಈ ದೇಶದ ರಾಜಕಾರಣಸೂತ್ರಗಳನ್ನು ವಹಿಸಿದಾಗಿನಿಂದ, ದೇಶೋದ್ಧಾರಕ್ಕಾಗಿ ವಿವಿಧ ಕಾರ್ಯಕಲಾಪಗಳನ್ನು ಕೈಕೊಂಡವರಲ್ಲಿ ಈತನೇ ಮೊದಲನೆಯಾತನು. ಭಾರತೀಯರ ಆರ್ಷೇಯ ಹಿಂದೂ ಮತವನ್ನು ಸಂಸ್ಕರಿಸುವ ಮಹಾಸಾಹಸದ ಕಾರ್ಯವನ್ನಾದರೂ ಈತನೇ ಪ್ರಾರಂಭಿಸಿದವನು. ತಾನೇ ಬುದ್ಧಿಪೂರ್ವಕವಾಗಿ ಕೈಕೊಂಡ ಆ ಕಾರ್ಯಗಳಿಂದ ಪ್ರಾಪ್ತವಾದ ಅನೇಕ ಕಷ್ಟಗಳನ್ನೂ ನಷ್ಟಗಳನ್ನೂ ತಾಳ್ಮೆಯಿಂದ ಸಹಿಸಿದನು. ಅಹರ್ನಿಶಿ ಶ್ರಮಿಸಿದನು. ತನ್ನ ಮನಸ್ಸಾಕ್ಷಿಯಿಂದ ಪ್ರೇರಿತವಾದ ಆ ಕಾರ್ಯಗಳನ್ನೇ ಕೊನೆಯವರೆಗೂ ಅನುಸರಿಸಿ ನಡೆದು ಧನ್ಯತೆಯನ್ನು ಹೊಂದಿದನು.

ಲೋಕದಲ್ಲ ವೈದಿಕ ವಿಚಾರವಾಗಲಿ ಲೌಕಿಕವಿಚಾರವಾಗಲಿ ಕಾಲದೇಶವರ್ತಮಾನಗಳನ್ನು ಅನುಸರಿಸಿ ಸ್ವಾಭಾವಿಕವಾಗಿ ವಿವಿಧ ರೂಪಗಳನ್ನು ಹೊಂದುತ್ತಾ ಸಾಗುವುದೆಂಬುದು ನಮ್ಮ ಮತ. ಮತ್ತು ಆಯಾ ಕಾಲಕ್ಕೆ ತಕ್ಕಂತೆ ಆಯಾ ವಿಚಾರಗಳನ್ನು ತಿದ್ದಿ ರೂಪಿಸುವುದಕ್ಕಾಗಿ ಅಲೌಕಿಕಬುದ್ಧಿ ವೈಭವಗಳನ್ನು ಗಳಿಸಿದ ಮಹಾಪುರುಷನೊಬ್ಬನು ಹುಟ್ಟುವನು. ಆತನು ತನ್ನ ಜನಾಂಗದ ಭವಿಷ್ಯಸ್ಥಿತಿಯನ್ನು ಉತ್ತಮಗೊಳಿಸುವ ಮಹದುದ್ದೇಶದಿಂದ ಪ್ರೇರಿತನಾಗಿ, ಭೂತಕಾಲದ ಚರಿತ್ರೆಯಿಂದ ಅನುಭವಹೊಂದಿ, ವರ್ತಮಾನಕಾಲದ ಜನಮನವನ್ನು ಧಾರ್ಮಿಕ ನೈತಿಕ ಸಾಮಾಜಿಕ ರಾಜಕೀಯ ವಿಚಾರಗಳಲ್ಲಿ ತಿದ್ದುವನು. ಜನಾಂಗದಲ್ಲಿ ಕೆಲವರು ಆತನ ನವೀನ ವಿಚಾರಗಳನ್ನು ಒಪ್ಪಿ ಆತನನ್ನು ಹಿಂಬಾಲಿಸುವರು—ಆತನ ಕಾರ್ಯಗಳೊಂದಿಗೆ ಸಹಾನುಭೂತಿಯನ್ನು ತೋರಿಸುವರು,- ಪ್ರೋತ್ಸಾಹಿಸುವರು. ಬೇರೆ ಕೆಲವರು, ಆತನ ನವೀನ ವಿಚಾರಗಳು ಪ್ರಳಯಕಾರಿಗಳೆಂದು ಆಕ್ಷೇಪಿಸುವರು, ದೂಷಿಸುವರು, ದ್ವೇಷಿಸುವರು. ಅಷ್ಟು ಮಾತ್ರವಲ್ಲ! ಆತನು ಕೈಕೊಳ್ಳುವ ಕೆಲಸಗಳನ್ನು ಧ್ವಂಸಗೊಳಿಸಲು ಪರಿಪರಿಯ ವಿಘ್ನಗಳನ್ನು ತಂದೊಡ್ಡುವರು. ಆದರೂ ಆ ಮಹನೀಯರು ಕಾಲಪ್ರೇರಿತರೋ ಎಂಬಂತೆ ಆ ದೂಷಣೆ ಭೂಷಣೆ ತಿರಸ್ಕಾರಗಳಿಂದ ಎಷ್ಟುಮಾತ್ರವೂ ನಿರುತ್ಸಾಹಿತರಾಗದೆ, ಅಂತರ್ಮುಖರಂತೆ ತಮ್ಮ ಕಾರ್ಯದಲ್ಲಿ ಮುಂದರಿಸುತ್ತಿರುವರು. ಅಂತಹ ಜಿತಮನಸ್ಕರಿಂದಲೇ ಪ್ರಪಂಚದಲ್ಲಿ ಒಂದೊಂದು ಪ್ರತ್ಯೇಕ ಮಹತ್ಕಾರ್ಯಗಳು ರೂಪುಗೊಂಡು ಪ್ರಕಾಶಿಸತೊಡಗುವುವು.

ಅವುಗಳ ಆಶ್ರಯದಲ್ಲಿ ಅನೇಕರು ಉಪಜೀವಿಸುವರು. ಅವರು ತೋರಿಸುವ ಬೆಳಕಿನಲ್ಲೇ ಅನೇಕರು ತಮ್ಮ ಜೀವಿತಯಾತ್ರೆಗಳನ್ನು ಸಾಗಿಸುವರು. ಅವರ ಆದರ್ಶಗಳನ್ನನುಸರಿಸಿಯೇ ನಡೆದು ಅನೇಕರು ಧನ್ಯರಾದೆವೆಂದು ಕೊಳ್ಳುವರು.

ಇಂತಹ ಮಹಾನ್ ವ್ಯಕ್ತಿಗಳಲ್ಲಿ ನಮ್ಮ ಪ್ರಕೃತ ಕಥಾನಾಯಕನೂ ಒಬ್ಬಾತನು. ಈತನು ಜನನವಾದ ೧೯ನೆಯ ಶತಮಾನದ ಕೊನೆಯ ಭಾಗವು ಭಾರತದೇಶದ ಧಾರ್ಮಿಕ ನೈತಿಕ ಸಾಮಾಜಿಕ ರಾಜಕೀಯ ವಿಚಾರಗಳಲ್ಲಿ ಒಂದು ಸಂಧಿಕಾಲವನ್ನು ಸೂಚಿಸುತ್ತಿದ್ದಿತು. ಆಗಲೇ ಮಹಮ್ಮದೀಯರ ಪ್ರಭುತ್ವವು ಅಂತ್ಯವಾಗಿ ಆಂಗ್ಲೇಯರ ಪ್ರಭುತ್ವವು ಮೆಲ್ಲಮೆಲ್ಲನೆ ಸ್ಥಿರಗೊಳ್ಳುತ್ತಿದ್ದಿತು. ಈ ರಾಜಕೀಯ ಸ್ಥಿತಿಯ ವ್ಯತ್ಯಾಸದೊಂದಿಗೇ-ಮಹಮ್ಮದೀಯ ಪ್ರಭುತ್ವದಲ್ಲಿ ದೇಶದಲ್ಲೇ ನಿಲ್ಲುತ್ತಿದ್ದ ದೇಶೀಯ ಐಶ್ವರ್ಯವು ಪರದೇಶೀಯ ಪ್ರಭುತ್ವದವರ ವಶವಾಗಿ ದೇಶಾಂತರಕ್ಕೆ ಸಾಗುತ್ತಿದ್ದಿತು. ಒಂದಿಗೇ ಸಾಮಾಜಿಕ ಜೀವಿತದಲ್ಲೂ ಎಷ್ಟೋ ಹೆಚ್ಚುಕಡಿಮೆಗಳಾದುವು. ಹಿಂದೂಗಳ ಧಾರ್ಮಿಕಜೀವನವಂತೂ ಮಹಮ್ಮದೀಯರ ಮತ್ತು ಕ್ರೈಸ್ತ ಪಾದ್ರಿಗಳ ಬಗೆಬಗೆಯ ಸನ್ನಾಹ-ಸಂಧಾನಗಳಿಗೊಳಪಟ್ಟು ಬಹು ಶೋಚನೀಯಾವಸ್ಥೆಯಲ್ಲಿದ್ದಿತು. ಅಂತಹ ಸಂಧಿಕಾಲದಲ್ಲಿ ಈ ಧೀರಪುರುಷನು ಕೈಕೊಂಡು ನಡೆಯಿಸಿದ ಕಾರ್ಯಗಳಿಂದ ದೇಶದ ಜೀವಿತವೇ ವ್ಯತ್ಯಸ್ತ ರೂಪವನ್ನು ಹೊಂದಿತು. ಆತನ ವಿವಿಧ ಪ್ರಯತ್ನಗಳ ಫಲಸ್ವರೂಪವಾಗಿ ಬಹುಕಾಲಗಳಿಂದ ಏಕಮುಖವಾಗಿದ್ದು-ಕೆರೆಯಲ್ಲಿ ಶಾಂತವಾಗಿ ಸ್ತಬ್ಧವಾಗಿ ನಿಂತ ನೀರಿನಂತಿದ್ದ ಭಾರತೀಯ ಜನಮನವು ಚಲನಹೊಂದಿತು. ಇಂತು ಎಚ್ಚರಗೊಂಡ ಅವರು—'ತಾವಾರು, ತಮ್ಮ ಮತಧರ್ಮಗಳೇನು, ತಮ್ಮ ಆರ್ಥಿಕ ಸಾಮಾಜಿಕ ಸಮಸ್ಯೆಗಳು ಯಾವ ಸ್ಥಿತಿಯಲ್ಲಿವೆ, ನಿತ್ಯವೂ ಅಭಿವೃದ್ಧಿಮಾರ್ಗವನ್ನು ಹಿಡಿದು ನಡೆಯುತ್ತಿರುವ ಪ್ರಪಂಚದಲ್ಲಿ ತಾವಿರುವ ಸ್ಥಾನವಾವುದು' ಎಂದು ನೋಡಿಕೊಳ್ಳತೊಡಗಿದರು. ಹೀಗೆ ಈ ಮಹಾಪುರುಷನು ಆ ಸಂಧಿಕಾಲದಲ್ಲಿ ಉದಯಿಸಿ, ತನ್ನ ಸಮಕಾಲೀನರಲ್ಲೊಂದು ನವಚೈತನ್ಯವನ್ನುಂಟುಮಾಡಿ, ಆಚಂದ್ರಾರ್ಕಕೀರ್ತಿಪ್ರತಿಷ್ಠೆಗಳಿಗೆ ಪಾತ್ರನಾದನು.

ಈತನ ಜೀವಿತವನ್ನೂ-ಕಾರ್ಯಕಲಾಪಗಳನ್ನೂ ಕುರಿತು ಈ ಚಿಕ್ಕ ಪುಸ್ತಕದಲ್ಲಿ ವಿವರಿಸತೊಡಗುವೆವು. ಇದನ್ನೂ ಕರ್ಣಾಟಕ ಬಾಲಕಬಾಲಿಕೆಯರು ಪಠಿಸಿ,ಗ್ರಂಥಮಾಲೆಯನ್ನು ಪ್ರೋತ್ಸಾಹಿಸಬೇಕೆಂದುಕೋರುತ್ತೇವೆ.

ಬೆಂಗಳೂರು ನಗರ,
ತಾ|| ೧೫—೧೧—೧೯೩೭.

ಇತಿ ಸುಜನ ವಿಧೇಯ,
**ಯಂ. ರಾಮರಾವ್.**

ಶ್ರೀರಾಮಸಹಾಯಂ

# ಬ್ರಹ್ಮಸಮಾಜ ಸ್ಥಾಪಕನಾದ ಶ್ರೀ ರಾಜಾ ರಾಮಮೋಹನ ರಾಯ್



## ಅಧ್ಯಾಯ ೧ "ಜನನ-ಬಾಲ್ಯ-ವಿದ್ಯಾಭ್ಯಾಸ"

ನಮ್ಮ ಮಾತೃಭೂಮಿಯಾದ ಈ ಭಾರತದೇಶವನ್ನು ದೇಶಪುತ್ರರ ನೇಕರು ವಿವಿಧ ರೀತಿಗಳಿಂದ ಸೇವಿಸಿದ್ದಾರೆ-ಸೇವಿಸುತ್ತಿದ್ದಾರೆ. ಕೆಲವರು ಧಾರ್ಮಿಕ ರೀತಿಯಿಂದ, ಕೆಲವರು ನೈತಿಕ (ನೀತಿ ಸಂಬಂಧವಾದ) ಮಾರ್ಗದಿಂದ, ಕೆಲವರು ಸಾಮಾಜಿಕ ಸುಧಾರಣೆಗಳಿಂದ, ಬೇರೆ ಕೆಲವರು ರಾಜಕೀಯ ಪಥವನ್ನವಲಂಬಿಸಿ! ಆದರೆ ನಮ್ಮ ಕಥಾನಾಯಕನು ಈ ನಾಲ್ಕು ಮಾರ್ಗಗಳಿಂದಲೂ ದೇಶಸೇವೆಮಾಡಿ, ದೇಶಭಕ್ತರಲ್ಲಿ ಅಗ್ರಗಣ್ಯನಾದನು. ಅಲ್ಲದೆ ಈತನು ಮಾಡಿದ ಮತ್ತೊಂದು ಮಹತ್ಕಾರ್ಯವೂ ಉಂಟು. 'ತಮ್ಮ ಹೊಟ್ಟೆಬಟ್ಟೆಗಳಿಗೆ ಸಂಪಾದಿಸಿಕೊಂಡು ಮಾನದಿಂದ ಬದುಕಿದರೆ ತಮ್ಮ ಕರ್ತವ್ಯವಾಯಿತು' ಎಂದು ತಿಳಿದುಕೊಂಡಿದ್ದ ದೇಶೀಯರ ಮನಸ್ಸಿನಲ್ಲಿ -'ಅಷ್ಟುಮಾತ್ರವಲ್ಲ-ದೇಶಪುತ್ರರೆಲ್ಲರೂ ದೇಶವಿಚಾರವನ್ನು ತಮ್ಮ ಸ್ವಂತ ವಿಚಾರವೋ ಎಂಬಂತೆ ಗಮನಿಸಿ ನಿಷ್ಕಾಮಭಾವನೆಯಿಂದ ಸೇವೆಮಾಡಬೇಕು' ಎಂಬುದನ್ನು ಮೂಡಿಸಿದರು. ಈತನ ಕಾಲದಿಂದಲೇ, ಆಧುನಿಕ ಭಾರತೀಯರಲ್ಲಿ ಯಾವ ಬಗೆಯ ಚಳುವಳಿಯಾದರೂ ಹುಟ್ಟಿ ಹಬ್ಬಲು ಆರಂಭಿಸಿದುದು. ಹೀಗಾದುದಕ್ಕೆ ಕಾರಣವೂ ಉಂಟು.

ಹಿಂದಿನ ಪುರಾಣಕಾಲದಲ್ಲಿ ಆದ್ಯಂತಭಾರತದೇಶವೂ ಆರ್ಯಕ್ಷತ್ರಿಯ ರಾಜರ ಆಳ್ವಿಕೆಗೆ ಒಳಪಟ್ಟು ಧರ್ಮದಿಂದ ಪಾಲಿಸಲ್ಪಟ್ಟಿದ್ದಿತಷ್ಟೆ! ಪುರಾಣ

ಕಾಲದಿಂದ ಈಚೆಗೂ ಸೂರ್ಯವಂಶ ಚಂದ್ರವಂಶಗಳ ಪರಂಪರೆಯಲ್ಲಿ ಜನಿಸಿದ ಅನೇಕಮಂದಿ ಕ್ಷತ್ರಿಯೋತ್ತಮರು ಧರ್ಮದಿಂದ ಆಳುತ್ತಾ ಬಂದರು. ಬುದ್ಧನ ಕಾಲದಿಂದೀಚೆಗೆ ಬಹು ದಿನಗಳವರೆಗೆ ಆಳಿದ ರಾಜ ಪುತ್ರ ಸಂತತಿಯ ರಾಜರೂ ಸ್ವದೇಶೀಯರೇ ಆಗಿದ್ದು ಅವರ ಉನ್ನತಿ-ಅವ ನತಿ, ಸುಖ-ದುಃಖಗಳೆಲ್ಲವೂ ದೇಶದ ಉನ್ನತಿ ಅವನತಿಗಳೊಂದಿಗೆ ಸಂಬಂಧಿ ಸಿದ್ದುದರಿಂದ ಅವರೆಲ್ಲರೂ ದೇಶದ ಕ್ಷೇಮಚಿಂತನೆಯನ್ನು ಉತ್ತಮ ರೀತಿಯಿಂದಲೇ ಗಮನಿಸುತ್ತಾ ಬಂದರು. ಆದರೆ ಭಾರತದೇಶಕ್ಕೆ ಮಹ ಮ್ಮದೀಯರ ಪ್ರವೇಶವಾದಂದಿನಿಂದ ಈ ದೇಶೀಯ ರಾಜರಲ್ಲಿ ಒಬ್ಬರಾದ ಮೇಲೆ ಒಬ್ಬರಂತೆ ಸ್ಥಾನಭ್ರಷ್ಟತ್ವವನ್ನು ಹೊಂದುತ್ತಾ ಬಂದು, ದೇಶವೆ ಲ್ಲವೂ ಕ್ರಮ ಕ್ರಮವಾಗಿ ಪರಾಕ್ರಾಂತವಾಗಸಾಗಿತು. ಹಾಗೂ ಮೂರು ನಾಲ್ಕು ಶತಮಾನಕಾಲ ಸಾಗಿತು. ಈಚಗಂತೂ ಖಂಡಾಂತರಗಳವರ ಕಾಲ್ತುಳಿತಕ್ಕೆ ದೇಶವು ಸಿಕ್ಕಿದಾಗಿನಿಂದ ದೇಶೀಯರ ಎಲ್ಲಾ ಬಗೆಯ ಸ್ಥಿತಿಗತಿಗಳೂ ದಿಕ್ಕು ಕೆಟ್ಟು ಅವರ ಕೈವಶವಾಗಿ ಭಾರತೀಯರು ರಾಜಕಾ ರಣವೊಂದೇ ಅಲ್ಲ-ಎಲ್ಲಾ ವಿಷಯಗಳಲ್ಲೂ ಪರಾಧೀನರಾದರು.

ಆ ಪರಕೀಯ ರಾಜರಾದರೋ ದೇಶವೆಲ್ಲಾದರೂ ಹೋಗಲಿ-ದೇಶೀ ಯರೆತ್ತಾದರೂ ನಾಶವಾಗಲಿ, ತಮ್ಮ ಸ್ವಾರ್ಥತೆಯು ಸಿದ್ಧಿಯಾದರೆ ಆಯಿ ತೆಂದು ತಮ್ಮ ಬೊಕ್ಕಸವನ್ನು ತುಂಬಿಕೊಳ್ಳತೊಡಗಿದರು. ದೇಶೀಯ ರಲ್ಲೇ ಸ್ವಾರ್ಥಿಗಳಾದವರನೇಕರು ಆ ಪರದೇಶೀಯ ಪ್ರಭುಗಳನ್ನು ಆಶ್ರ ಯಿಸಿ ಸ್ವದೇಶೀಯರ ಗಂಟಲನ್ನೊತ್ತಿ ತಮ್ಮ ಬೊಜ್ಜನ್ನು ಬೆಳೆಸಿಕೊಳ್ಳಸಾಗಿ ದರು. ಅವರನ್ನು ದಂಡಿಸಿ ಅಂಕೆಯಲ್ಲಿಡಲು ಅಭಿಮಾನಶಾಲಿಗಳಾದ ಬಲಿಷ್ಟರು ದೇಶೀಯರುಗಳಲ್ಲಿ ಇಲ್ಲದಿದ್ದ ಕಾರಣದಿಂದ ಬಡವರು ಬಲ್ಲಿದರ ಕಾಲ್ತುಳಿತಕ್ಕೆ ಸಿಕ್ಕಿ ಬಹುವಿಧಗಳಿಂದ ಬಳಲಿದರು. ದೇಶವು ಯಜಮಾನ ನಿಲ್ಲದ ಮನೆಯಂತೆಯೂ ಗುರುವಿಲ್ಲದ ಮಠದಂತೆಯೂ ಆಯಿತು.

ಪೂರ್ವದ ವರ್ಣಾಶ್ರಮಧರ್ಮ ಪದ್ಧತಿಯಂತೆ ದೇಶವಿಚಾರಗಳನ್ನು ನೋಡಿಕೊಂಡು ಪ್ರಜಾಕ್ಷೇಮವನ್ನು ಗಮನಿಸುತ್ತಿದ್ದ ಕ್ಷತ್ರಿಯವರ್ಣವು ವಸ್ತುತಃ ಲುಪ್ತವಾಗಿ-ರಾಜ್ಯಾಂಗವು ಪರಕೀಯರ ಹಸ್ತಗತವಾದುದರಿಂದ ಪ್ರಜಾವರ್ಗದಲ್ಲಿನ ಮಿಕ್ಕ ಯಾರೂ ನಿಶ್ಚಿಂತೆಯಿಂದಲೂ ನಿರ್ಭಯದಿಂದಲೂ

ತಮ್ಮ ವಿಚಾರಗಳನ್ನು ಮಾತ್ರ ಗಮನಿಸಿಕೊಳ್ಳಲು ಅವಕಾಶ ಕಡಿಮೆಯಾಯಿತು. ತಾವುಮಾತ್ರವಲ್ಲ ತಮ್ಮಪ್ರಭುಗಳೂ ಬೇರೊಬ್ಬನಿಗೆ ದಾಸರಾದುದರಿಂದ ತಾವು ಏಳುವುದಾದರ ಹತ್ತುಮಂದಿಯೊಂದಿಗೆ ಏಳಬೇಕು ಅಥವ ಹತ್ತುಮಂದಿಯೊಂದಿಗೆ ಬೀಳಬೇಕಲ್ಲದೆ, ಅನ್ಯಥಾ ಮಾರ್ಗವಿಲ್ಲವೆಂಬಂತಾಯಿತು. ತಮ್ಮ ಮೇಲ್ಮೆಗಾಗಿ ಆಗಬೇಕಾದ ಕಾರ್ಯಗಳನ್ನು ತಮ್ಮ ತಮ್ಮಲ್ಲೇ ಹತ್ತುಮಂದಿ ಒಟ್ಟಾಗಿ, ಪರಕೀಯರಾದ ಆ ಪ್ರಭುತ್ವದವರನ್ನು ಕೇಳಿ ಮಾಡಿಸಿಕೊಳ್ಳಬೇಕಾದ ಆವಶ್ಯಕವುಂಟಾಯಿತು.—ಪರದೇಶೀಯರು ಪ್ರಭುಗಳಾದಂದಿನಿಂದ ರಾಜಕೀಯ ವಿಚಾರದಲ್ಲಿ ಪ್ರಜೆಗಳಿಗೆ ಅಸ್ವಾತಂತ್ರ್ಯವುಂಟಾದುದು ಮಾತ್ರವಲ್ಲ-ಧಾರ್ಮಿಕ ವಿಚಾರದಲ್ಲೂ ಅವರ ಸ್ಥಿತಿಯು ಗಂಟು ಬಿಚ್ಚಿದ ನೆಲ್ಲಿಯಕಾಯ ಮೂಟೆಯಂತಾಯಿತು. ಪೂರ್ವದಲ್ಲಿ ಧಾರ್ಮಿಕ ಸಂಸ್ಥೆಗಳಿಗೆ ಕ್ಷತ್ರಿಯರಾಜರು ರಕ್ಷಕರಾಗಿ ನಡೆಯಿಸುತ್ತಿದ್ದುದರಿಂದ ಅವರು ತಮ್ಮ ಶಿಷ್ಯವರ್ಗದಲ್ಲಿ ಧರ್ಮಲೋಪಕ್ಕೆ ಅವಕಾಶವಿಲ್ಲದಂತೆ ಧಾರ್ಮಿಕ ಶಾಸನಾದಿಗಳನ್ನು ಏರ್ಪಡಿಸಿ ಕಾಪಾಡುತ್ತಾ ಬರುತ್ತಿದ್ದರು. ಆದರೆ ಈಚೆಗೆ ಹಾಗಾಗಲಿಲ್ಲ. ರಾಜರು ಪರಧರ್ಮೀಯರಾದುದರಿಂದ, ನಮ್ಮ ಧರ್ಮ ಗುರುಗಳ-ಅಥವ ಧಾರ್ಮಿಕ ಸಂಸ್ಥೆಗಳ-ದೇವಸ್ಥಾನ ಮಠಾದಿಗಳ ವಿಚಾರವೇ ಅವರಿಗೆ ಬೇಡವಾಯಿತು. ಆದುದರಿಂದ ಮೇಲ್ಕಂಡ ಸಂಸ್ಥೆಗಳವರೂ ಗುರುಗಳೂ-ಶಿಷ್ಯರ ಭಿಕ್ಷೆಯಿಂದಲೇ ಉಪಜೀವಿಸಬೇಕಾದ ಪರಿಸ್ಥಿತಿಯುಂಟಾಗಿ ಅದರಿಂದ ಧಾರ್ಮಿಕ ಶಿಥಿಲತೆಯೂ ಪ್ರಾಪ್ತವಾಯಿತು. ಹೀಗಾಗಿ ಧಾರ್ಮಿಕರೀತಿಯಲ್ಲೂ ಜನರು ತಮ್ಮತಮ್ಮ ಮೇಲ್ಮೆಗಾಗಿ ತಾವೇ ಗಮನಿಸಿಕೊಳ್ಳಬೇಕಾದ ಸ್ಥಿತಿಯು ಒದಗಿತು. ಅಲ್ಲದೆ, ಪರಕೀಯ ರಾಜರು, ರಾಜಕಾರಣದ ಮೂಲೋದ್ದೇಶದಿಂದ ದೇಶೀಯರನ್ನು ಕ್ರೈಸ್ತಧರ್ಮಕ್ಕೆ ಹೆಚ್ಚುಹೆಚ್ಚು ಸಂಖ್ಯೆಯಿಂದ ಸೇರಿಸಿಕೊಳ್ಳತೊಡಗಿದ್ದರು. ಇದರಿಂದಲೂ ಭಾರತೀಯರ ಆರ್ಷೇಯ ಧರ್ಮವು ಅಧಿಕರೀತಿಯಿಂದ ನಷ್ಟಗೊಳ್ಳಲಾರಂಭವಾಯಿತು. ಇದನ್ನು ತಡೆಗಟ್ಟುವುದಕ್ಕೆ ಗುರುಮನೆಗಳವರು ಅಶಕ್ತರಾಗಿದ್ದುದರಿಂದ ಆ ಕಾರ್ಯವನ್ನೂ ಪ್ರಜಾವರ್ಗವೇ ಕೈಕೊಂಡು ನಡೆಯಿಸಬೇಕಾದುದು ಆವಶ್ಯಕವೆನಿಸಿತು.

ಹಿಂದೂರಾಜರು ಭಾರತದೇಶದ ಬೇರೆ ಬೇರೆ ಭಾಗಗಳನ್ನು ಆಳುತ್ತಿದ್ದ ಹಿಂದಿನ ಕಾಲದಲ್ಲಿ ನಮ್ಮಾ ದೇಶದಲ್ಲಿ ಅಪಾರ ಐಶ್ವರ್ಯವು ನೆಲೆಸಿದ್ದಿತೆಂಬುದಕ್ಕೆ ಹೆಚ್ಚು ಪ್ರಮಾಣಗಳೇನೂ ಅವಶ್ಯಕವಿಲ್ಲ. ಈಚೆಗೆ ಮಹಮ್ಮದೀಯರು ಪ್ರಭುಗಳಾದಮೇಲೆ ಸಹ-ಅವರೂ ಈ ದೇಶದಲ್ಲೇ ಹುಟ್ಟಿಬೆಳೆದು ಇಲ್ಲೇ ಇರುತ್ತಿದ್ದವರಾದುದರಿಂದ ಆಗಲೂ ಭಾರತೀಯ ದ್ರವ್ಯವು, ಅವರಲ್ಲೇ ಉಳಿದು ಎಂತೂ ದೇಶೀಯ ಸಂಪತ್ತಿಗೆ ಕುಂದಕವುಂಟಾಗಿರಲಿಲ್ಲ ಆದರೆ ಈ ಖಂಡಾಂತರದ ಪ್ರಭುತ್ವವು ನೆಲೆಗೊಂಡಾರಭ್ಯ, ಭಾರತದ ಐಶ್ವರ್ಯವು ವಿವಿಧ ಮುಖಗಳಿಂದ ಪರದೇಶಕ್ಕೆ ಸಾಗಲಾರಂಭಿಸಿತು. ಅವರಿಗೆ ಇಲ್ಲಿ ಮನೆಯಿಲ್ಲ ಬಾಗಿಲಿಲ್ಲ ಆತ್ಮೀಯರಿಲ್ಲ. ಅವರು ಕಾಳು ದೊರೆತಲ್ಲಿಳಿದು, ಹೆಕ್ಕಿ ತಿಂದು ಹಾರಿಹೋಗುವ, ಪಕ್ಷಿಗಳಂತೆ ಎರಡು ದಿನ ಇಲ್ಲಿದ್ದು, ಬೇಕಾದಹಾಗೆ ಸುಖಪಟ್ಟು, ಆದಷ್ಟು ಸಂಗ್ರಹಿಸಿಕೊಂಡು ತಮ್ಮ ಊರಿಗೆ ಗಂಟು ಮೂಟೆ ಕಟ್ಟುವವರೇ ಆದುದರಿಂದ ಅವರು ನಮ್ಮ ಸ್ಥಿತಿಗತಿಗಳನ್ನಾಗಲೀ-ಕ್ಷೇಮವನ್ನಾಗಲೀ ಗಮನಿಸದಿರುವುದು ಸ್ವಾಭಾವಿಕವೇ ಆಗಿದೆ! ಆದುದರಿಂದ ಹೀಗೆ ಆರ್ಥಿಕ ವಿಚಾರದಲ್ಲೂ ಪ್ರಜಾವರ್ಗವೇ ತಮ್ಮ ವಿಚಾರವನ್ನು ತಾವೇ ಗಮನಿಸಿಕೊಳ್ಳಬೇಕಾದ ಅವಶ್ಯಕವುಂಟಾಯಿತು.

ನಾವು ಮೇಲೆ ಹೇಳಿಕೊಂಡುಬಂದ ಧಾರ್ಮಿಕ ಆರ್ಥಿಕ ಸಾಮಾಜಿಕ ರಾಜಕೀಯ ವಿಚಾರಗಳು ಈಗ್ಗೆ ನೂರು ನೂರಿಪ್ಪತ್ತು ವರ್ಷಗಳ ಹಿಂದೆ ಈಗಿನಷ್ಟು ಭೀಕರ ಸ್ಥಿತಿಯನ್ನು ಹೊಂದಿರಲಿಲ್ಲವೆಂಬುದು ವಾಸ್ತವ. ಆದರೆ, ಈ ಎಲ್ಲಾ ವಿಚಾರಗಳಲ್ಲೂ ಹೈಂದವರ ಪರಾಧೀನತೆಯೇನೋ ಆಗಲೇ ಪ್ರಾರಂಭವಾಗಿದ್ದಿತು. ಮತ್ತು ಅದರ ಪ್ರತಿಕ್ರಿಯೆಗಾದರೂ ಆಗಲೇ ಬೀಜಾವ್ಯಾಪನೆಯೂ ಆಯಿತು. ಈ ಎಲ್ಲಾ ಕಾರ್ಯಕಲಾಪಗಳನ್ನೂ ಆರಂಭಿಸಿದವನು ನಮ್ಮ ಕಥಾನಾಯಕನು. ದೀರ್ಘದರ್ಶಿಯಾಗಿ, ಇವುಗಳಿಂದ ಕಾಲಾನುಕಾಲದಲ್ಲಿ ತನ್ನ ಮಾತೃದೇಶಕ್ಕೆ ಪ್ರಾಪ್ತವಾಗಲಿದ್ದ ಕುಂದುಕೊರತೆಗಳನ್ನು ನಿವಾರಿಸಲೆತ್ನಿಸಿ, ಆಮರಣಾಂತವಾಗಿ ಕಷ್ಟಸಹನಮಾಡಿದ ಆತನು ಮಹಾಪುರುಷನೆನಿಸಲಾರನೇ! ಆ ಮಹಾಪುರುಷನು ಹುಟ್ಟಿಬೆಳೆದು ಮಾಡಿದ ಮಹತ್ಕಾರ್ಯಗಳ ವಿಷಯವನ್ನೇ ನಾವೀಗ ಓದುತ್ತಿರುವೆವು.

ವಂಗದೇಶದ ಮೂರ್ಷಿದಾಬಾದ್ ಮಂಡಲಕ್ಕೆ ಸೇರಿದ ಒಂದಾನೊಂದು ಗ್ರಾಮದಲ್ಲಿ ನಮ್ಮ ಕಥಾನಾಯಕನ ಪೂರ್ವಿಕರು ಬಹುಕಾಲಗಳಿಂದಲೂ ವಾಸಿಸುತ್ತಿದ್ದರು. ರಾಮಮೋಹನನ ಪ್ರಪಿತಾಮಹನಾದ ಕೃಷ್ಣಚಂದ್ರಬಾನರ್ಜಿ ಎಂಬಾತನು ತನ್ನ ವಿದ್ಯೆ ವಾಕ್ಚಾತುರ್ಯ ಕಾರ್ಯನಿರ್ವಾಹಕಸಾಮರ್ಥ್ಯ ಮುಂತಾದುವುಗಳಿಂದ ತನ್ನ ಸರಿಯವರಲ್ಲಿ ಗಣ್ಯನೆನ್ನಿಸಿಕೊಂಡಿದ್ದನು. ಆ ಕಾಲದಲ್ಲಿ ಪ್ರಭುತ್ವದಲ್ಲಿದ್ದ ರಾಜನೊಬ್ಬನಿಗೆ ಒಂದು ಅಮೌಲ್ಯಸಹಾಯಮಾಡುವ ಸಂದರ್ಭವೊದಗಿ-ಆ ಸಂದರ್ಭವನ್ನು ಕಳೆದುಕೊಳ್ಳದೆ ರಾಜಕಾರಣಕ್ಕೆ ನೆರವಾದುದರಿಂದ ಆತನಿಗೆ 'ರಾಯ್' ಎಂಬ ಘನತರವಾದ ಬಿರುದು ಆ ರಾಜನಿಂದ ಪ್ರಾಪ್ತವಾಯಿತು. 'ರಾಯ್'ಎಂಬ ಶ್ರೇಷ್ಠವಾದ ಬಿರುದು ಬಂದಾಗಿನಿಂದ, ಮುಂದೆ ಆತನಿಗೂ ಆತನ ವಂಶೀಕರಿಗೂ ಅದೇ ರೂಢನಾಮವಾಗಿ ಬಾನರ್ಜಿ ಎಂಬ ಕುಲಸೂಚಕನಾಮವು ಲುಪ್ತವಾಗಿ ಹೋಯಿತು. ಹೀಗೆ ಕೃಷ್ಣಚಂದ್ರರಾಯ್ ಮಹಾಶಯನು ಗೌರವನೀಯನಾಗಲು, ಆತನಿಗೆ ಹೂಗ್ಲೀ ಬರ್ದವಾನ್ ಜಿಲ್ಲೆಗಳ ಭೂಕಂದಾಯವನ್ನು ವಸೂಲುಮಾಡಿ ರಾಜಭಂಡಾರಕ್ಕೆ ತಲುಪಿಸುವ ಬಹುಜವಾಬ್ದಾರಿಯ ಉದ್ಯೋಗವು ಲಭ್ಯವಾಯಿತು. ಹೀಗೆ ದಿನದಿನಕ್ಕೆ ಐಶ್ವರ್ಯಾಧಿಕಾರಗಳಲ್ಲಿ ಪ್ರಸಿದ್ಧನಾಗುತ್ತಾ ಸಾಗಿದ ಕೃಷ್ಣಚಂದ್ರರಾಯನು ರಾಧಾನಗರವೆಂಬೊಂದು ಗ್ರಾಮದಲ್ಲಿ ತನ್ನ ಗೌರವ ಆಢ್ಯತೆಗಳಿಗೆ ತಕ್ಕಂತಹ ಒಂದು ಭವ್ಯಗೃಹವನ್ನು ಕಟ್ಟಿಸಿಕೊಂಡು ಅಲ್ಲಿಗೆ ಕುಟುಂಬ ಸಮೇತನಾಗಿ ಪ್ರಯಾಣಮಾಡಿದನು. ಹೀಗೆ ತನ್ನ ವಂಶವನ್ನು ಜಗದದೃಷ್ಟಿಯಲ್ಲಿ ಗೌರವನೀಯವಾದುದನ್ನಾಗಿಮಾಡಿಟ್ಟು ಕೃಷ್ಣಚಂದ್ರನು ಅಸ್ತಮಿಸಿದ ತರುವಾಯ ಆತನ ಉದರ ಸಂಭೂತರಾದ ಅಮರಚಂದ್ ಹರಿಪ್ರಸಾದ್ ವ್ರಜವಿನೋದರೆಂಬ ಮೂವರು ಮಕ್ಕಳೂ ತಂದೆಯು ಗಳಿಸಿದ್ದ ಕೀರ್ತಿ ಪ್ರತಿಷ್ಠೆಗಳಿಗೆ ತಕ್ಕಂತೆ ಸಜ್ಜನರೆನ್ನಿಸಿಕೊಂಡು ಸ್ವಗ್ರಾಮದಲ್ಲೇ ವಾಸಿಸುತ್ತಿದ್ದರು. ಅವರಲ್ಲಿ ವ್ರಜವಿನೋದನು ವಿದ್ಯಾಬುದ್ಧಿಗಳಲ್ಲಿ ತನ್ನ ಅಗ್ರಜರನ್ನು ಮೀರಿಸಿದ್ದುದರಿಂದ ಆಗಿನ ಬಂಗಾಳದ ನವಾಬನಾಗಿದ್ದ ಶಿರಾಜುದ್ದೌಲನ ಆಳ್ವಿಕೆಯಲ್ಲಿ ಆವನಿಗೆ ಒಂದು ಅಧಿಕಾರವು ಪ್ರಾಪ್ತವಾಗಿ ಸುಖವಾಗಿದ್ದನು.

ಯುಕ್ತವಯಸ್ಸಿನಲ್ಲಿ ವಿವಾಹವಾಗಿ, ಗೃಹಸ್ಥಧರ್ಮಪಾಲನೆಯಿಂದ ಸರೀಕರಲ್ಲಿ ಗಣ್ಯನಾಗಿದ್ದ ಆತನಿಗೆ ಏಳುಮಂದಿ ಗಂಡುಮಕ್ಕಳು ಉದಯಿಸಿದರು. ಅವರಲ್ಲಿ ಐದನೆಯವನಾದ ರಮಾಕಾಂತರಾಯನು ತಂದೆಗೆ ಕೇವಲ ಪ್ರೀತಿಪಾತ್ರನಾಗಿ ನೆರೆಹೊರೆಯವರಲ್ಲೂ ಉತ್ತಮನೆನ್ನಿಸಿಕೊಂಡಿದ್ದನು. ವ್ರಜವಿನೋದನು ಕೆಲವುಕಾಲ ಉದ್ಯೋಗದಲ್ಲಿದ್ದು, ದಿನಗಳು ಕಳೆದಂತೆಲ್ಲಾ ಪರಸೇವೆಯಲ್ಲಿನ ಕಷ್ಟತಾಪತ್ರಯಗಳಿಗೆ ರೋಸಿ, ಮುಂದೊಂದು ದಿನ ತನ್ನ ಉದ್ಯೋಗದಿಂದ ನಿವೃತ್ತಿಹೊಂದಿ ಶೇಷಜೀವಿತವನ್ನು ಪಾರತ್ರಿಕಸಾಧನೆಕ್ಕಾಗಿ ವ್ಯಯಗೊಳಿಸಬೇಕೆಂದು ಸಂಕಲ್ಪಿಸಿ ಗಂಗಾತೀರವನ್ನು ಸೇರಿ, ಭಗವದಾರಾಧನೆ ತತ್ವಚಿಂತನೆಗಳಿಂದ ಕಳೆಯಲಾರಂಭಿಸಿದನು. ಹೀಗಿರುವಲ್ಲಿ ಒಂದುದಿನ ಒಂದು ಅಪೂರ್ವ ಸಂದರ್ಭವೊದಗಿತು. ವ್ರಜವಿನೋದನು ಸ್ನಾನಸಂಧ್ಯಾದಿಗಳನ್ನಾಚರಿಸಿ, ತತ್ವಚಿಂತಾಪರನಾಗಿ ಕುಳಿತಿರಲು, ಶ್ಯಾಮಭಟ್ಟಾಚಾರ್ಯನೆಂಬ ಶಾಕ್ತೇಯಮತಾವಲಂಬಿ ಬ್ರಾಹ್ಮಣನೊಬ್ಬನು ಆ ಸ್ಥಳಕ್ಕೆ ಬಂದು, ವಿನಯದಿಂದ ವಂದಿಸಿ-'ಮಹಾಶಯ ತಮ್ಮನ್ನು ಒಂದು ವಿಷಯದಲ್ಲಿ ಪ್ರಾರ್ಥಿಸಬೇಕಾಗಿದೆ. ನನ್ನಾಪ್ರಾರ್ಥನೆಯನ್ನು ನೆರವೇರಿಸಿಕೊಡುವಂತೆ ತಾವು ಅಂಗೀಕಾರಸೂಚಕ ಪ್ರತ್ಯುತ್ತರವನ್ನಿತ್ತರ ವಿಜ್ಞಾಪಿಸುತ್ತೇನೆ' ಎಂದನು. ವ್ರಜವಿನೋದನು, ಆತನ ಇಷ್ಟವೇನೆಂಬುದನ್ನು ತಿಳಿದುಕೊಳ್ಳಲು ಸಹ ಕಾಯದೆ, 'ಭಟ್ಟಾಚಾರ್ಯಜೀ, ತಮ್ಮ ಇಷ್ಟವೇನೋ ಅದನ್ನು ನೆರವೇರಿಸುವ ವಿಚಾರದಲ್ಲ ಮನೋವಾಕ್ಕಾಯಗಳಿಂದ ಸಿದ್ಧನಾಗಿದ್ದೇನೆ' ಎಂದುಬಿಟ್ಟನು. ಅದನ್ನು ಕೇಳಿದ ಶ್ಯಾಮಭಟ್ಟಾಚಾರ್ಯನು, ಬಹು ಸಂತೋಷಪಟ್ಟು, ಆ ಸರಳಹೃದಯದ ವ್ರಜವಿನೋದನೆದುರಿಗೆ ತನ್ನೊಂದಿಗಿದ್ದ ತನ್ನ ಮಗಳನ್ನು ನಿಲ್ಲಿಸಿ-'ಮಹಾಶಯ, ಈ ಬಾಲಿಕೆಯು ನನ್ನ ಮಗಳು. ವಿವಾಹಯೋಗ್ಯವಯಸ್ಕಳಾಗಿದ್ದಾಳೆ. ಪ್ರೌಢಳಾಗಲಿರುವ ಈಕೆಯನ್ನು ಅಪತ್ನೀಕನಾದ ನಾನು ಸಂರಕ್ಷಿಸಲು ಅಶಕ್ತನಾಗಿದ್ದೇನೆ. ಇವಳನ್ನು ದಯೆಯಿಟ್ಟು ತಮ್ಮಮಕ್ಕಳಲ್ಲೊಬ್ಬನಿಗೆ ವಿವಾಹಮಾಡಿಕೊಂಡು ನನ್ನನ್ನು ಧನ್ಯನನ್ನಾಗಿಸಬೇಕು' ಎಂದು ಕೇಳಿಕೊಂಡನು. ವ್ರಜವಿನೋದನು ಆ ಅಪರಿಚಿತ ಬ್ರಾಹ್ಮಣನ ವಿಚಿತ್ರ ಆಶಯವನ್ನು ಕುರಿತು ಆಶ್ಚರ್ಯಮಗ್ನನಾಗಿ ವಾಗ್ದಾನ ಮಾಡಿದ್ದನಾದುದರಿಂದ ಪ್ರತಿ ಹೇಳಲು ಮಾರ್ಗವಿಲ್ಲದೆ

ತನ್ನ ಮಕ್ಕಳನ್ನು ಕರೆದು ತಾನು ಕೊಟ್ಟ ಮಾತನ್ನು ಸಾರ್ಥಕಮಾಡುವ ಉದ್ದೇಶದಿಂದ, ಶಾಕ್ತೇಯರ ಮನೆಯ ಆ ಹೆಣ್ಣನ್ನು ಮದುವೆಯಾಗಲು ಯಾರಾದರೂ ಒಪ್ಪುವಿರಾ ಎಂದು ಪ್ರಶ್ನಿಸಿದನು. ಅವರಲ್ಲಿ ಪಿತೃಭಕ್ತನಾದ ರಮಾಕಾಂತನ ಹೊರತಾಗಿ ಮತ್ತಾರೂ ಆ ವಿವಾಹ ಸಂಬಂಧವನ್ನು ಒಪ್ಪಲಿಲ್ಲ. ರಮಾಕಾಂತನ ಧೈರ್ಯವು ತಂದೆಯನ್ನು ಸಂತೋಷಪಡಿಸಿತು. ಮುಂದೊಂದು ಶುಭದಿನದಲ್ಲ ರಮಾಕಾಂತನಿಗೂ ತಾರಣೀದೇವಿಗೂ ವಿವಾಹವು ಅತ್ಯಂತ ವಿಜೃಂಭಣೆಯಿಂದ ನಡೆದುಹೋಯಿತು. ಈ ವಿಚಿತ್ರ ಪ್ರಸಂಗದಿಂದ ಅನಾದಿಕಾಲದಿಂದ ವೈಷ್ಣವ ಮತಾನುಯಾಯಿಗಳಾಗಿದ್ದ ಕೃಷ್ಣಕಾಂತನ ಕುಟುಂಬದವರಿಗೆ ಶಾಕ್ತೇಯಮತಾನುಯಾಯಿಗಳ ಸಂಬಂಧವೊದಗಿತು. ಈ ತಾರಣೀದೇವಿಯು ಗರ್ಭಸುಧಾಂಬುಧಿಯಲ್ಲಿ ರಮಾಕಾಂತ ರಾಯನಿಗೆ ಇಬ್ಬರು ಪುತ್ರರು ಉದಯಿಸಿದರು. ಅವರಲ್ಲಿ ಹಿರಿಯನ ಹೆಸರು ಜಗನ್ಮೋಹನನು, ಕಿರಿಯವನೇ ನಮ್ಮ ಕಥಾನಾಯಕನಾದ ರಾಮಮೋಹನನು. ರಾಮಮೋಹನನಿಗೆ ಸವತಿ ತಾಯಿಯ ಉದರದಲ್ಲ ಹುಟ್ಟಿದ ತಮ್ಮನೊಬ್ಬನಿದ್ದನು. ಅವನ ಹೆಸರು ರಾಮಲೋಚನನು.

ತಾರಣೀದೇವಿಗೆ ಫೂಲ್ ಠಾಕುರಾಣಿ ಎಂಬ ನಾಮಾಂತರವೂ ಇದ್ದಿತು. ಆಕೆಯ ತೌರಮನೆಯವರು ಶಕ್ತಿ ಪೂಜಕರಾಗಿದ್ದರಾದರೂ, ಮದುವೆಯಾಗಿ ಅತ್ತೆಯಮನೆಗೆ ಬಂದ ತರುವಾಯ ಆ ಬಾಲಕಿಯು, ಅಲ್ಲಿಯ ಪದ್ಧತಿಯಂತೆ ವೈಷ್ಣವ ಮತವನ್ನೇ ಅನುಸರಿಸಿದ್ದಳು. ದಿನ ದಿನಕ್ಕೆ ಮತಶ್ರದ್ಧೆಯೂ, ರಾಮಕೃಷ್ಣಾದಿ ವೈಷ್ಣವ ದೇವ-ದೇವತೆಗಳಲ್ಲಿ ಭಕ್ತಿಯೂ ಬೆಳೆಯತೊಡಗಿದವು. ಅದಕ್ಕೆ ತಕ್ಕಂತೆ ವ್ರತ ನಿಯಮಾದಿಗಳೂ ಆಚರಣೆಯಲ್ಲಿ ಬಂದು ಕಾಲಕ್ರಮದಲ್ಲಿ ಆ ಸಾಧ್ವಿಯು ಪರಮಾಸ್ತಿಕಳಾದಳು. ಮನೆಯಲ್ಲಿದ್ದ ರಾಧಾಗೋವಿಂದ ಮೂರ್ತಿಗೆ ಪೂಜೆಯಿಲ್ಲದೆ — ತುಲಸಾರ್ಚನೆಯಿಲ್ಲದೆ, ಭಾಗವತ ಕಥಾಶ್ರವಣವಿಲ್ಲದೆ ಆಕೆಯು ಒಂದು ದಿನವೂ ಆಹಾರ ಗ್ರಹಣ ಮಾಡುತ್ತಿರಲಿಲ್ಲ. ಮತಸಂಬಂಧವಾದ ಈ ಬಗೆಯ ವ್ರತನಿಷ್ಠೆಯು ಕೇವಲ ಮೌಢ್ಯಫಲವೆಂದು, ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಪಳಗಿ ಬೆಳೆದ ಆಧುನಿಕರು ಹೇಳುವುದುಂಟು. ಆದರೆ ಹಾಗಲ್ಲ. ವ್ರತನಿಷ್ಠೆಯಿಂದ ಫಲವಿಲ್ಲವೆಂದು ಭಾವಿಸುವುದು ಮೌಢ್ಯವೆಂದರೆ ಅದು ತಪ್ಪಲ್ಲ.

ಮತಸಂಬಂಧವಾದ ವ್ರತಾಚರಣೆಗಳಿಂದ ಮನುಷ್ಯನ ಜೀವನದ ಧ್ಯೇಯವು ಸ್ಥಿರರೂಪವನ್ನು ಹೊಂದಲನುವಾಗುವುದು ಮನಸ್ಸು ನಿಷ್ಕಲ್ಮಷವಾಗಿ ದೃಢಪಡುವುದು ಕಾಮಾದಿ ಷಡ್ವೈರಿಗಳು ನಾಶವಾಗಿ ಕ್ರಮಕ್ರಮವಾಗಿ ಸತ್ಯ ಶೌಚ ಶಾಂತತೆ ವಿನಯಾದಿಗಳು ಹೃದಯದಲ್ಲಿ ಬೇರೂರಲು ಅವಕಾಶವೂದಗುವುದು ಆದರೆ, ಕೇವಲ ವ್ರತನಿಷ್ಠರೆಂಬುವರಲ್ಲೂ ಅನೇಕ ದುರ್ಗುಣಗಳಿರುತ್ತವೆಯಲ್ಲಾ ಎಂದರೆ, ಅದು ವ್ರತಾದಿಗಳ ತಪ್ಪಲ್ಲ. ಪಾತ್ರೆಯೇ ಕಿಲುಬಿದ್ದಿದ್ದರೆ ಅದರಲ್ಲಿ ಹಾಕುವ ಪದಾರ್ಥವು ಎಷ್ಟು ಉತ್ಕೃಷ್ಟವಾದುದಾದರೂ ಕೆಟ್ಟುಹೋಗುವುದು ಸ್ವಾಭಾವಿಕವೇ ಅಲ್ಲವೆ! ಹಾಗೆಯೇ ಮೂಲತಃ ಅವರ ಹೃದಯವೆ ಕೆಟ್ಟಿದೆ. ಅಂಥವರು ವ್ರತಾದಿಗಳನ್ನು ಹೃದಯ ಪಾರಿಶುದ್ಧ್ಯತೆಯಿಂದ ಪಾರತ್ರಿಕ ಸಾಧನಕ್ಕಲ್ಲ-ದಾಂಭಿಕತೆಯಿಂದ ಧನಸಂಗ್ರಹಣಕ್ಕಾಗಿ ಮಾಡುತ್ತಾರೆ! ಸನ್ಮಾರ್ಗಿಗಳಾಗಬೇಕೆಂದು ಅಪೇಕ್ಷಿಸುವವರು, ಕೇವಲ ಸನ್ಮಾರ್ಗವನ್ನು ಅನುಸರಿಸುವುದು ಮಾತ್ರ ಸಾಲದು. ಪ್ರಯತ್ನಪೂರ್ವಕ ದುರ್ಮಾರ್ಗವನ್ನು ತ್ಯಜಿಸಲೂ ಪ್ರಯತ್ನ ಪಡಬೇಕು. ಹಾಗಾದರಲ್ಲದೆ, ಸನ್ಮಾರ್ಗಾನುಸರಣೆಯಿಂದ ಯೋಗ್ಯ ಪ್ರತಿಫಲವು ದೊರೆಯಲಾರದು.

ಹೀಗೆ ಕೇವಲ ಆಸ್ತಿಕರಾಗಿ, ಲೋಕಯಾತ್ರೆಯನ್ನು ಸಾಗಿಸುತ್ತಿದ್ದ ಆ ದಂಪತಿಗಳಲ್ಲಿ ಮೇಲ್ಕಂಡಂತೆ ಜಗನ್ಮೋಹನ ರಾಮಮೋಹನರೆಂಬ ಇಬ್ಬರು ಮಕ್ಕಳು ಜನಿಸಿ ದಿನದಿನಕ್ಕೆ ಅಭಿವೃದ್ಧಿಯಾಗುತ್ತಿದ್ದರು. ಮುಂದೆ ರಾಮಮೋಹನನು ಮೂರ್ತಿಪೂಜೆಗೂ ಆರ್ಷೇಯ ಸನಾತನಧರ್ಮಕ್ಕೂ ವಿರೋಧಿಯಾಗಿ ಸುಧಾರಕನಾದುದಕ್ಕೆ ಕಾರಣವೋ ಎನ್ನುವಂತ ಒಂದು ದಂತಕಥೆಯು ಹೇಳಲ್ಪಡುತ್ತದೆ. ಅದನ್ನು ಇಲ್ಲಿ ಕೊಡುತ್ತೇವೆ. ರಾಮಮೋಹನನಿಗೆ ನಾಲ್ಕು-ಐದು ವರ್ಷ ಪ್ರಾಯವು ನಡೆಯುತ್ತಿದ್ದಾಗ ಒಂದು ಸಾರಿ ತಾರಿಣೀದೇವಿಯು ತನ್ನ ತೌರುಮನೆಗೆ ಮಗನೊಂದಿಗೆ ಹೋಗಿದ್ದಳಂತೆ! ಆಗ ಅವರ ಮನೆಯ ಪದ್ಧತಿಯಂತೆ, ಕಾಳಿಕಾದೇವಿಯ ಪೂಜೆಗೆಂದು ಅಲ್ಲಿ ರಕ್ತವರ್ಣದ ಅನೇಕ ಪುಷ್ಪಗಳನ್ನು ಸಂಗ್ರಹಿಸಿ ತಂದಿಟ್ಟಿದ್ದುದನ್ನು ರಾಮಮೋಹನನು ನೋಡಿದನು. ಮತ್ತು ಒಡನೆ ಅವುಗಳನ್ನೆಲ್ಲ ಕೈಯಿಂದ ತೆಗೆದು ಹಿಸುಕಿ ಹಿಂಡಿ ನೆಲದಮೇಲೆ ಬಿಸುಟಿದನು. ಅದನ್ನು ಕಂಡು

ಪೂಜೆಗೆ ಕುಳಿತಿದ್ದ ತಾಂತ್ರಿಕನಾದ ಶ್ಯಾಮಭಟ್ಟಾಚಾರ್ಯನು ಕೇವಲ ವಿಷಾದಗೊಂಡು ತನ್ನ ಮಗಳನ್ನು ಕುರಿತು-'ಠಾಕೂರಿಣಿ ಹೀಗೆ ದೇವತಾ ತಿರಸ್ಕಾರಮಾಡಿದ ಈ ಮಗನಿಂದ ಮುಂದೆ ನಿನ್ನ ಮನಸ್ಸಿಗೆ ಸೌಖ್ಯವುಂಟಾಗಲಾರದು. ಅಲ್ಲದೆ ಈ ಬಾಲಕನು ಧರ್ಮಬಾಹ್ಯನೂ ಆಗುವನು' ಎಂದು ನುಡಿದನು. ಠಾಕೂರಿಣಿಯು ತನ್ನ ವೃದ್ಧತಂದೆಯ ಬಾಯಿಂದ ಬಂದ ಆ ಶಾಪವಚನವನ್ನು ಕೇಳಿ ಭೀತಿಗೊಂಡು, ಮಹಾ ವ್ಯಸನದಿಂದ-'ತಂದೆಯೇ ಅರಿಯದ ಬಾಲಕ, ಅವನ ಮೇಲೆ ಆಗ್ರಹಗೊಂಡು ಶಪಿಸಬಾರದು.' ಎನ್ನಲು, ಭಟ್ಟಾಚಾರ್ಯನು ಶಾಂತನಾಗಿ-'ಇಲ್ಲ ಮಗಳೇ, ನನಗೆ ಕೋಪವಿಲ್ಲ- ಇವನ ಭವಿಷ್ಯವು ಹಾಗಿರುವುದೆಂದು ಮಾತ್ರ ತಿಳಿಯಬಲ್ಲೆ. ಹಾಗೆ ಧರ್ಮಬಾಹ್ಯನಾಗುವನಾದರೂ ಇವನು ಸಾಮಾನ್ಯರಂತಲ್ಲದೆ ಚರಿತ್ರಪ್ರಸಿದ್ಧನೂ ಮಹಾಯಶಸ್ವಿಯೂ ಆಗುವನು' ಎಂದು ನುಡಿದನು. ಕೆಲವು ದಿನಗಳು ಕಳೆದಮೇಲೆ ತಾರಿಣೀದೇವಿಯು ಗಂಡನ ಮನೆಗೆ ಬಂದು ಎಂದಿನಂತೆ ಇದ್ದುಬಿಟ್ಟಳು.

ತನ್ನ ಇಬ್ಬರು ಮಕ್ಕಳಿಗೂ ರಮಾಕಾಂತರಾಯನು ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಿದನು. ಇಬ್ಬರೂ ಆಗ ಪ್ರಚಾರದಲ್ಲಿದ್ದ ಬಂಗಾಳೀಭಾಷಾ ಪ್ರಾರಂಭಪಾಠಶಾಲೆಗೆ ಸೇರಿ ಮಾತೃಭಾಷೆಯನ್ನು ಕಲಿತರು. ಆ ಇಬ್ಬರಲ್ಲಿ ರಾಮಮೋಹನನಲ್ಲಿ ಕಂಡುಬಂದ ಸೂಕ್ಷ್ಮಮತಿ ವಿಷಯಗ್ರಹಣಶಕ್ತಿ ವಿದ್ಯಾಭಿಲಾಷೆ ಮುಂತಾದುವುಗಳು ರಮಾಕಾಂತನಿಗೆ ಅತಿಶಯ ತೃಪ್ತಿಯನ್ನುಂಟುಮಾಡಿದುವು. ರಾಮಮೋಹನನು ಒಂದೆರಡು ವರ್ಷಗಳೊಳಗಾಗಿ ತನ್ನ ಮಾತೃಭಾಷೆಯಲ್ಲಿ ತಡೆಬಡೆಯಿಲ್ಲದೆ ಓದುವುದಕ್ಕೂ ಬರೆಯುವುದಕ್ಕೂ ಕಲಿತುಬಿಟ್ಟನು. ಆಗ ಪಾರ್ಶಿಯೇ ರಾಜಭಾಷೆಯಾಗಿದ್ದು ರಾಜ್ಯಾಂಗದಲ್ಲಿ ಪ್ರವೇಶಿಸಲಪೇಕ್ಷಿಸುತ್ತಿದ್ದವರು ಆ ಭಾಷೆಯನ್ನು ತಪ್ಪದೆ ಅಭ್ಯಸಿಸಬೇಕಾಗಿತ್ತು. ರಾಮಮೋಹನನ ತಂದೆಯು, ತನ್ನ ಮಗನೂ ತನ್ನಂತೆಯೇ ಪ್ರಸಿದ್ಧನಾಗಬೇಕೆಂದಪೇಕ್ಷಿಸಿ ಅವನಿಗೆ ಆ ಭಾಷೆಯನ್ನು ಕಲಿಸಬೇಕೆಂದು ಸಂಕಲ್ಪಿಸಿದನು. ಈಗ ಪಾಟ್ನಾ ಎಂದು ಪ್ರಸಿದ್ಧವಾಗಿರುವ ಪಾಟಲೀಪುತ್ರವು ಆಗ ಪಾರ್ಶೀ ಭಾಷಾಭ್ಯಾಸಕ್ಕೆ ಮಾತೃಸ್ಥಾನವಾಗಿತ್ತು. ಆ ನಗರದಲ್ಲಿ ಅನೇಕ ಮೌಲ್ವಿಗಳು ವಾಸಿಸುತ್ತಾ, ರಾಜಾಶ್ರಯದಿಂದ ವಿದ್ಯಾರ್ಥಿಗ

ಳಿಗೆ ಆ ಭಾಷೆಯನ್ನು ಕಲಿಸುತ್ತಿದ್ದರು. ರಾಮಮೋಹನನು, ತಂದೆಯ ಅನುಮತಿಯಿಂದ ಹೊರಟು ಪಾಟ್ನಾವನ್ನು ಸೇರಿ, ಅಲ್ಲಿ ಎರಡು ಮೂರು ವರ್ಷಕಾಲ ಅರಬ್ಬೀ ಪಾರ್ಶಿ ಭಾಷೆಗಳನ್ನು ಅಭ್ಯಸಿಸಿದನು ಬಹು ಚುರುಕು ಬುದ್ಧಿಯ ಆ ಬಾಲಕನು, ಅಷ್ಟು ಸ್ವಲ್ಪ ಕಾಲದಲ್ಲೇ ಆ ಭಾಷೆಗಳಲ್ಲಿ ಸುಪ್ರಸಿದ್ಧ ಕವಿಗಳೂ ತತ್ವಜ್ಞಾನಿಗಳೂ ಬರೆದ ಅನೇಕ ಗ್ರಂಥಗಳನ್ನು ಓದಿ ಮುಗಿಸಿದನು. ಹಾಫೀಜ್ ರೂಮಿ ಸಾದಿ ಮುಂತಾದ ಅನೇಕ ಪಾರ್ಶೀ ಕವೀಶ್ವರರ ಗ್ರಂಥಗಳು ಆತನಿಗೆ ಮುಖೋದ್ಗತವಾದುವು. ಅವರ ಅನೇಕ ಪದ್ಯಗಳನ್ನು ಉದಹರಿಸುತ್ತ, ಪಾರ್ಶಿ ಭಾಷೆಯಲ್ಲೇ ಪ್ರೌಢ ಭಾಷಣಗಳನ್ನು ಕೊಡುವಂತಹ ಸಾಮರ್ಥ್ಯವೂ ಆ ಬಾಲಕನಿಗುಂಟಾಯಿತು. ಆತನ ಮಾನಸಿಕ ಪ್ರವೃತ್ತಿಯು ಇತರ ವಿಚಾರಗಳಿಗಿಂತಲೂ ತಾತ್ವಿಕ ಸಂಗತಿಗಳನ್ನು ಹೆಚ್ಚು ಮೆಚ್ಚುತ್ತಿದ್ದುದರಿಂದ 'ಸೂಫಿ'ಗಳೆಂಬ ತತ್ವಜ್ಞಾನಿಗಳ ಗ್ರಂಥಗಳು ಆತನಿಗೆ ಹೆಚ್ಚು ಪ್ರಿಯವೆನ್ನಿಸಿದುವು. ಆದುದರಿಂದ ಅರಬ್ಬೀ ಪಾರ್ಶಿ ಭಾಷೆಗಳಲ್ಲಿದ್ದ ಆ ಗ್ರಂಥಗಳನ್ನೆಲ್ಲ ಓದಿದನು. ಆ ಗ್ರಂಥಪರಸೆಯಿಂದ ಅವನ ಮನಸ್ಸು ಈಗಿನಿಂದಲೇ ನಿರ್ಗುಣಾರಾಧನೆಯ ಕಡೆಗೆ ಒಲಿದಿತ್ತು. ತರುವಾಯ ಊರಿಗೆ ಬಂದು, ತನ್ನ ಸ್ವಂತ ಹಿಂದೂ ಮತದ ವಿಚಾರವನ್ನು ತಿಳಿಯಬೇಕೆಂದೆನಿಸಲು, ಈ ಮತ ಗ್ರಂಥಗಳು ಬರೆಯಲ್ಪಟ್ಟಿದ್ದ ದೇವಭಾಷೆಯಾದ ಸಂಸ್ಕೃತವನ್ನು ಕಲಿಯುವುದು ಆವಶ್ಯಕವಾಯಿತು. ಒಡನೆ ಆ ಭಾಷಾಭ್ಯಾಸಕ್ಕಾಗಿ ತಂದೆಯಿಂದ ಅಪ್ಪಣೆ ಪಡೆದು, ಆಗ ಸಂಸ್ಕೃತ ವಿದ್ಯೆಗೆ ಆದಿ ಪೀಠವೆನಿಸಿದ್ದ ಕಾಶೀ ಪಟ್ಟಣಕ್ಕೆ ಪ್ರಯಾಣಮಾಡಿ, ಪಂಡಿತರನ್ನಾಶ್ರಯಿಸಿ ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಿದನು.

ಸಂಸ್ಕೃತ ಭಾಷಾಭ್ಯಾಸಕ್ಕೆ ಪ್ರಾರಂಭಿಸಿದಾಗ ರಾಮಮೋಹನನಿಗೆ ಹದಿನಾಲ್ಕು ವರ್ಷ ವಯಸ್ಸಾಗಿತ್ತು. ಅರಬ್ಬೀ ಪಾರ್ಶೀ ಭಾಷೆಗಳ ಅಭ್ಯಾಸದಿಂದ ತೀಕ್ಷ್ಣಗೊಂಡಿದ್ದ ಆತನ ಬುದ್ಧಿಯು, ಸಂಸ್ಕೃತ ಭಾಷಾಭ್ಯಾಸದಿಂದ ಇನ್ನೂ ತೀಕ್ಷ್ಣತೆಯನ್ನು ಹೊಂದಿತು. ಅತಿಶಯ ಶ್ರದ್ಧಾ ಉತ್ಸಾಹಗಳಿಂದ ಎರಡು ಮೂರು ವರ್ಷಕಾಲ ವಿದ್ಯಾಭ್ಯಾಸ ಮಾಡುವ ವೇಳೆಗೇ, ಆ ಕುಶಾಗ್ರಮತಿಯು ಆ ದೇವಭಾಷೆಯ ಜೀವಾಳವನ್ನು ಕಂಡುಹಿಡಿದು ಮುಂದೆ ತಾನೇ ಸ್ವತಂತ್ರಿಸಿ ಯಾವ ಗ್ರಂಥವನ್ನು ಓದಿದರೂ ಅರ್ಥಮಾಡಿ,

ಕೊಳ್ಳುವಷ್ಟು ವ್ಯುತ್ಪತ್ತಿಯನ್ನು ಗಳಿಸಿಕೊಂಡು, ತನ್ನ ಹದಿನಾರನೆಯ ವಯಸ್ಸಿನಲ್ಲಿ ತಂದೆತಾಯ್ಗಳ ಸಮೀಪಕ್ಕೆ ಹಿಂದಿರುಗಿ ನಡೆದನು. ಮಹಾ ತೇಜಸ್ವಿಯಾದ ಆ ಪುತ್ರನ ಜನನದಿಂದಲೂ ಆಟಪಾಟಗಳಿಂದಲೂ ಮಾತ್ರ ಸಂತೋಷಗೊಂಡಿದ್ದ ಆತನ ಮಾತಾಪಿತೃಗಳು ಆ ತಮ್ಮ ಮಗನು ಅಷ್ಟು ಚಿಕ್ಕ ವಯಸ್ಸಿನಲ್ಲೇ ಮಾಡಿದ ವಿವಿಧ ಭಾಷಾ-ವಿದ್ಯಾಭ್ಯಾಸದಿಂದಲೂ ಅತಿಶಯ ಆನಂದಭರಿತರಾದರು.



## ಅಧ್ಯಾಯ ೨ "ಗೃಹತ್ಯಾಗ - ಸಂಚಾರ"

ರಾಮಮೋಹನನು ಅರಬ್ಬೀ ಪಾರಸೀ ಭಾಷೆಗಳ ಅಭ್ಯಾಸದಿಂದ ಮಹಮ್ಮದೀಯ ಮತಗ್ರಂಥಗಳನ್ನೂ, 'ಸೂಫೀ' ತತ್ವಜ್ಞಾನಿಗಳ ಗ್ರಂಥಗಳನ್ನೂ ಓದಿದುದೇ ಆತನಲ್ಲಿ ನಿರ್ಗುಣಾರಾಧನೆಯ ಅಭಿಲಾಷೆಯನ್ನು ಹುಟ್ಟಿಸಿದ್ದಿತು. ಅದರ ಮೇಲೆ ಸಂಸ್ಕೃತ ಭಾಷಾಭ್ಯಾಸಮಾಡಿ, ವೇದಾಂತ ಗ್ರಂಥಗಳನ್ನೂ ಉಪನಿಷತ್ತುಗಳನ್ನೂ ಓದಿದುದು ಆ ವಿಚಾರಗಳನ್ನು ಇನ್ನೂ ದೃಢಪಡಿಸಿತು. ಆತನ ಮನಸ್ಸಿಗೆ, ತನ್ನ ಮನೆಯಲ್ಲಿ ನಡೆಯುತ್ತಿದ್ದ ರಾಧಾ ಗೋವಿಂದ ಮೂರ್ತಿಯ ಪೂಜೆಯೂ, ನೆರೆಹೊರೆಯಲ್ಲೂ-ಊರಿನಲ್ಲೂ ನಡೆಯುತ್ತಿದ್ದ ವಿವಿಧ ದೇವತಾ ವಿಗ್ರಹಗಳ ಆರಾಧನೆಯೂ ಅಪ್ರಕೃತವಾದುದೆಂದೂ - ವೇದವಿರುದ್ಧವಾದುದೆಂದೂ ತೋರಸಾಗಿತು. ಸನಾತನ ಧರ್ಮ ಸಿದ್ಧಾಂತಗಳನ್ನು ತನ್ನ ಈ ನೂತನ ವಿಚಾರಗಳ ದೃಷ್ಟಿಯಿಂದ ಚರ್ಚಿಸಿ, ಬಹು ಪುರಾತನ ಕಾಲದ ಆ ಸಿದ್ಧಾಂತಗಳನ್ನು, ವೇದ-ಉಪನಿಷತ್ತುಗಳಲ್ಲಿ ಉಕ್ತವಾದ ಅಭಿಪ್ರಾಯಗಳನ್ನು ಅನುಸರಿಸಿ ಸಂಸ್ಕರಿಸುವುದು ಆವಶ್ಯಕವೆಂಬ ತನ್ನ ಅಭಿಲಾಷೆಯನ್ನು ಸಂದರ್ಭಸಿಕ್ಕಾಗಲೆಲ್ಲಾ ಪ್ರಕಟಿಸದೆ ಇರುತ್ತಿರಲಿಲ್ಲ. ಈ ವಿಷಯದಲ್ಲೇ ಅನೇಕ ಮಂದಿ ಪಂಡಿತರೊಡನೆ ಚರ್ಚೆಗಳನ್ನೂ ನಡಿಸಿದನು. ತನ್ನ ಮಗನ ಈ ಬಗೆಯ ಕಾರ್ಯಕಲಾಪಗಳು ರಮಾಕಾಂತರಾಯನ ದೃಷ್ಟಿಯಿಂದ ಮರೆಯಾಗಿರಲಿಲ್ಲ.

ಪ್ರಾರಂಭದಲ್ಲಿ ಕೆಲವು ದಿನಗಳು ಅವು ಹುಡುಗಾಟಿಕೆಯ ಹರಟೆಗಳೆಂದು ಆತನು ಉದಾಸೀನದಿಂದಿದ್ದನು. ಮುಂದೆ ಬರುತ್ತಾ ಬರುತ್ತಾ ಮಗನ ತರ್ಕಗಳು ಬಹು ತೀಕ್ಷ್ಣವಾದ ಅಭಿಪ್ರಾಯಗಳನ್ನೊಳಗೊಂಡುವೆಂದೂ, ಅವುಗಳನ್ನು ಹಾಗೆಯೇ ಬೆಳೆಯಬಿಡುವುದು ಅಪಾಯಕರವೆಂದೂ, ನೆರಹೊರೆಯವರಿಂದಲೂ ಇತರ ತನ್ನ ಸ್ನೇಹಿತರಿಂದಲೂ ತಿಳಿಯಬಂದಿತು. ಮಹಾತತ್ವಜ್ಞಾನಿಗಳಿಂದ ಏರ್ಪಟ್ಟು, ಅನಾದಿ ಕಾಲದಿಂದ ರೂಢಿಯಲ್ಲಿ ಬಂದ ವಿಗ್ರಹಾರಾಧನೆಯ ವಿಷಯದಲ್ಲಿ ವಿರೋಧಾಭಿಪ್ರಾಯವನ್ನು ಪ್ರಕಟಿಸುವದು ಶ್ರೇಯಸ್ಕರವಲ್ಲವೆಂದೂ, ಅಂತಹ ಹುಚ್ಚು ಯೋಚನೆಗಳನ್ನು ದೂರ ಮಾಡೆಂದೂ ಯುಕ್ತಿಯುಕ್ತವಾಗಿ ಒಂದೆರಡುಸಾರಿ ಹೇಳಿದನು.—ಅದು ರಾಮಮೋಹನನ ಕಿವಿಗೆ ರುಚಿಸದಿರಲು - ಮತ್ತೆ ಎಷ್ಟೋಸಾರಿ ಗದರಿಸಿಕೊಂಡು ಕಠಿನವಾಗಿಯೂ ನಿಷೇಧಿಸಿದನು ಅದರೇನು! ರಾಮಮೋಹನನು ತನ್ನ ಅಭಿಪ್ರಾಯಗಳೇ ಯುಕ್ತವಾದುವೆಂದು ಉಪನಿಷತ್ತುಗಳಿಂದ ಉದಾಹರಣೆಗಳನ್ನು ಕೊಟ್ಟು ಸ್ಥಾಪಿಸಲಾರಂಭಿಸಿದನು ವಿದ್ವಾಂಸನೂ, ತರ್ಕಶಾಸ್ತ್ರಾಧ್ಯಾಯಿಯೂ ಆಗಿದ್ದ ತನ್ನ ಆ ಮಗನೊಂದಿಗೆ, ತಂದೆಯು ಪ್ರಶ್ನೋತ್ತರಗಳನ್ನು ನಡೆಸಿ, ತನ್ನ ಮತವನ್ನು ಸ್ಥಾಪಿಸಲು ಅಶಕ್ತನಾಗಿದ್ದರೂ, ಪೂರ್ವಾಚಾರಗಳನ್ನು ಬಿಡಬಾರದೆಂದು ಮಾತ್ರ ಬಹು ಪುರಸ್ಕಾರದಿಂದ ವಾದಿಸುತ್ತಿದ್ದನು. ರಾಮಮೋಹನನಾದರೋ—'ಒಂದು ಮಾರ್ಗವು ನಮ್ಮ ಮನಸ್ಸಾಕ್ಷಿಗೆ ಅಸತ್ಯವಾದುದೆಂದೂ ಅಯೋಗ್ಯವಾದುದೆಂದೂ ತೋರಿದರೆ, ಅದನ್ನು ಬದಲಾಯಿಸಿಕೊಂಡು ಯುಕ್ತವೆಂದು ತೋರಿದುದನ್ನು ಅವಲಂಬಿಸುವುದರಲ್ಲಿ ದೋಷವೇನು?" ಎಂದು ಹೇಳುವನು. ಈ ವಿಚಾರಗಳಿಂದ, ಒಂದೇಮನೆಯಲ್ಲಿದ್ದ ತಂದೆಮಕ್ಕಳಿಗೆ ಎಷ್ಟೋದಿನಗಳವರೆಗೆ ಮಾತುಕತೆಗಳು ಸಹ ನಡೆಯುತ್ತಿರಲಿಲ್ಲ ಹೀಗಿರುವಲ್ಲಿ ಈ ಮಧ್ಯೆ ರಾಮಮೋಹನನು ಅರಬ್ಬೀ ಭಾಷೆಯ ಮುನ್ನುಡಿಯೊಂದಿಗೆ-ಪಾರ್ಶೀ ಭಾಷೆಯಲ್ಲಿ ಬರೆದ 'ಹಿಂದೂಗಳ ವಿಗ್ರಹಾರಾಧನೆ' ಎಂಬೊಂದು ಗ್ರಂಥವು ಹೊರಬಿದ್ದಿತು. ಅದರಲ್ಲಿ ಆ ಬಾಲ ಗ್ರಂಥಕರ್ತನು ಹಿಂದೂಗಳ ಅನೇಕ ಮತಗ್ರಂಥಗಳಿಂದ ಆಧಾರಗಳನ್ನು ಕೊಟ್ಟು, ವಿಗ್ರಹಾರಾಧನೆಯು ವೇದಗಳಲ್ಲಿ ಉಕ್ತವಾದುದಲ್ಲವೆಂದೂ ಸ್ಥಾಪಿಸಿದ್ದನು ಕೇವಲ ಹದಿನಾರು

ವರ್ಷದ ಬಾಲಕನಾದ ರಾಮಮೋಹನನು ಬರದಿದ್ದ ಆ ಗ್ರಂಥವು ಅನೇಕ ಪ್ರೌಢ ಪಂಡಿತರಿಗೂ ಪರಮಾಶ್ಚರ್ಯವನ್ನುಂಟುಮಾಡಿತು. ಅದನ್ನು ನೋಡಿದ ಮೇಲಂತೂ, ಅತ್ಯಧಿಕ ಮತಶ್ರದ್ಧೆಯನ್ನುಂಟಾಗಿದ್ದ ರಮಾ ಕಾಂತರಾಯನು, ತನ್ನ ಮಗನ ವಿಷಯದಲ್ಲಿ ಪ್ರಚಂಡ ರೋಷಾಕ್ರಾಂತ ನಾದನು. ತಂದೆಮಕ್ಕಳಿಗೆ ಬಹು ಘೋರವಾದ ಒಂದು ವಾಗ್ಯುದ್ಧವೂ ನಡೆಯಿತು.—"ನಿನ್ನ ಹಿರಿಯರ ಮತಾವಲಂಬನೆ ಮಾಡತಕ್ಕುದು ನಿನ್ನ ಕರ್ತವ್ಯ. ಅದನ್ನು ಕುತರ್ಕಗಳಿಂದ ತಿರಸ್ಕರಿಸುತ್ತಿರುವ ಧರ್ಮಬಾಹಿರ ನಾದ ನೀನು ನನ್ನ ಮನೆಯಲ್ಲಿರುವುದು ಯೋಗ್ಯವಲ್ಲ. ಈಗಲೂ ಈ ನಿನ್ನ ವಿಚಾರಗಳನ್ನು ಬದಲಾಯಿಸಿಕೊಂಡು ನೀನು ಪಶ್ಚಾತ್ತಾಪವನ್ನು ಪ್ರಕಟ ಮಾಡದಿದ್ದರೆ ಈ ಮನೆಯಲ್ಲಿ ನಿನಗೆ ಸ್ಥಾನವಿಲ್ಲ" ಎಂದು ನಿರ್ಧಾರವಾಗಿ ಹೇಳಿಬಿಟ್ಟನು. ಆ ಮಾತನ್ನು ಕೇಳಿದ ಆತ್ಮಗೌರವಶೀಲನಾದ ರಾಮ ಮೋಹನನು, ತನ್ನ ಮನಸ್ಸಾಕ್ಷಿಗೆ ವಿರೋಧವಾದ ವಿಚಾರಕ್ಕೆ ಒಪ್ಪಿ ಮನೆಯಲ್ಲಿರಲು ಒಡಂಬಡದೆ, ತನ್ನ ಆ ಮನೆಯಿಂದ ಹೊರಹೊರಟನು. ಹಾಗೆ ಧೈರ್ಯದಿಂದ ಹೊರಟವನು, ಭಾರತದೇಶದ ಅನೇಕ ಮುಖ್ಯ ಮುಖ್ಯ ಸ್ಥಳಗಳನ್ನೂ, ಸುಪ್ರಸಿದ್ಧಗಳೆನಿಸಿದ ತೀರ್ಥಕ್ಷೇತ್ರಗಳನ್ನೂ ಸಂದ ರ್ಶಿಸಿ ಅಲ್ಲಲ್ಲಿ ಪ್ರಚಾರದಲ್ಲಿದ್ದ ವಿವಿಧ ಮತಪದ್ಧತಿಗಳನ್ನೂ, ಜನಗಳ ಬಗೆ ಬಗೆಯ ಆಚಾರ ವ್ಯವಹಾರಗಳನ್ನೂ ತಿಳಿದುಕೊಂಡನು. ಅಲ್ಲದೆ, ನಾನಕ್, ಕಬೀರ್, ತುಕಾರಾಮ್, ಜ್ಞಾನದೇವ, ದಾವುದ್ ಮುಂತಾದ ಹಿಂದೂ ಮುಹಮ್ಮದೀಯ ಭಕ್ತಶ್ರೇಷ್ಠರ ಚರಿತ್ರೆಗಳನ್ನೂ-ಗ್ರಂಥಗಳನ್ನೂ ಸಂಪಾ ದಿಸಿ ಓದಿಕೊಳ್ಳುತ್ತಾ, ಅನೇಕ ಸ್ಥಳಗಳಲ್ಲಿ ಸಂಚರಿಸಿದನು. ಆ ಸಂಚಾರ ದಲ್ಲಿ ಆತನು ಕಾಶ್ಮೀರ ದೇಶವನ್ನು ದಾಟಿ, ಹಿಮಾಲಯಗಳ ಉತ್ತರ ಭಾಗ ದಲ್ಲಿದ್ದ ಟಿಬೆಟ್ ದೇಶಕ್ಕೂ ಹೋದನು. ಹಿಂದೆ ಸನಾತನ ಧರ್ಮದ ಪುನರುದ್ಧಾರಕ್ಕಾಗಿ ಜನ್ಮವೆತ್ತಿದ ಶ್ರೀ ಶಂಕರಾಚಾರ್ಯರು ಬೌದ್ಧಾದಿ ಮತ ಗಳನ್ನು ಖಂಡಿಸಿ, ಭಾರತದೇಶದಿಂದ ಹೊರಕ್ಕೆ ನೂಕಿದುದರ ಫಲವಾಗಿ ದಿಕ್ಕುಕೆಟ್ಟು ಓಡಿದ ಬೌದ್ಧರು ಟಿಬೆಟ್ ದೇಶವನ್ನು ಸೇರಿದ್ದರಿಂದ, ಅಂದಿ ನಿಂದಲೂ ಆ ಮತವು ಅಲ್ಲಿ ಮನೆಮಾಡಿಕೊಂಡಿದೆಯೆಂಬುದನ್ನು ತಿಳಿದ ರಾಮಮೋಹನನು, ಅದರ ಮುಖ್ಯ ಸಿದ್ಧಾಂತಗಳನ್ನು ಅದರ ಮೂಲಸ್ಥಾನ

ದಲ್ಲಿಯೇ ತಿಳಿಯಬೇಕೆಂದು ಉದ್ದೇಶಿಸಿ, ಅಲ್ಲಿಗೆ ಹೋದನೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಎಂತೂ ಟಿಬೆಟ್‌ದೇಶವನ್ನು ಸೇರಿದ ರಾಮ ಮೋಹನನು, ಅಲ್ಲಿಯ ಜನರೊಂದಿಗೆ ಸ್ನೇಹಮಾಡಿ, ಅಲ್ಲಿ ಪ್ರಚಾರವಿದ್ದ ಭಾಷೆಯನ್ನು ಅಭ್ಯಾಸಮಾಡಿ, ಬೌದ್ಧ ಮತದ ತತ್ವಗಳನ್ನು ತಿಳಿಸಲೆತ್ನಿಸಲು, ಅದು, ಹಿಂದೂ ದೇಶದಲ್ಲಿ ಆತನು ನೋಡಿದ ಸ್ಥಿತಿಗಿಂತಲೂ ಭಯಂಕರ ವೆನಿಸಿತು. ಹಿಂದೂಗಳಲ್ಲಿ ರೂಢಿಯಿದ್ದ ದೇವದೇವತಾ ವಿಗ್ರಹಗಳ ಪೂಜೆಯೇ ವೇದೋಕ್ತವಾದುದಲ್ಲವೆಂದು ತಿರಸ್ಕರಿಸಿದ್ದ ರಾಮಮೋಹನನು, ಅಲ್ಲಿಯ ಪ್ರಜೆಗಳು ಬೌದ್ಧಗುರುವಾದ 'ಲ್ಹಾಮಾ' ನನ್ನೇ ಆರಾಧಕವಸ್ತುವ ನ್ನಾಗಿ ಕೈಕೊಂಡು ಪೂಜಿಸುತ್ತಿದ್ದುದನ್ನು ಕಂಡು, ಅತ್ಯಂತ ಅಸಹ್ಯಗೊಂ ಡನು. ಅಲ್ಲದೆ ತಾನಿರುವುದು ಪರದೇಶವೆಂದಾಗಲೀ-ಅಲ್ಲಿ ತನ್ನ ಪಕ್ಷದವರಾಗಿ ರಕ್ಷಿಸುವವರು ಯಾರೂ ಇಲ್ಲವೆಂದಾಗಲೂ ಸ್ವಲ್ಪವೂ ಚಿಂತಿಸದೆ, ತನ್ನ ಮನಸ್ಸಾಕ್ಷಿಗೂ, ಧರ್ಮಸಿದ್ಧಾಂತಕ್ಕೂ ವಿರೋಧವಾದ ಆ ಪದ್ಧತಿಯನ್ನು ಖಂಡಿಸತಕ್ಕುದೇ ತನ್ನ ಕರ್ತವ್ಯವೆಂದು ನಿಶ್ಚಯಿಸಿ,—"ನೀವು ಅನುಸರಿಸು ತ್ತಿರುವ ಈ ಪದ್ಧತಿಯು ಬೌದ್ಧಧರ್ಮಕ್ಕೆ ಕೇವಲ ವಿರುದ್ಧವಾದುದು" ಎಂದು ಮುಂತಾಗಿ ಆಕ್ಷೇಪಿಸಿ, ತನ್ನ ಅಭಿಪ್ರಾಯಗಳನ್ನು ಆ ಜನಗಳಲ್ಲಿ ಪ್ರಚುರಪಡಿಸಲೂ ಆರಂಭಿಸಿದನು. ಆ ಸಂಗತಿಯು ತಿಳಿದೊಡನೆಯೇ, ಆ ಬೌದ್ಧ ಗುರುಗಳ ಪಕ್ಷದವರು, ತಮ್ಮ ಗುರುಗಳಿಗೆ ದ್ರೋಹಿಯಾದ ಅವನನ್ನು ಕೊಂದುಬಿಡಬೇಕೆಂದು ಗುಪ್ತ ಸನ್ನಾಹಗಳನ್ನು ನಡೆಯಿಸ ತೊಡಗಿದರು. ಇನ್ನು ಕೆಲವು ದಿನಗಳು ಅಲ್ಲಿದ್ದಿದ್ದರ ರಾಮಮೋಹನನು ಅವರ ಕೋಪಾಗ್ನಿಗೆ ಆಹುತಿಯಾಗತಕ್ಕವನೇ! ಆದರೆ ಅಷ್ಟರಲ್ಲಿ ಆ ಘಾತುಕರ ಗುಪ್ತ ಸಂಧಾನವು, ಹೇಗೋ ಅವರ ಸ್ತ್ರೀಯರಿಗೆ ತಿಳಿದು ಹೋಯಿತು. ಅವರು ರಾಮಮೋಹನನ ಬಾಲ್ಯವಯಸ್ಸನ್ನೂ, ಅವನ ಮುದ್ದುಮುಖವನ್ನೂ, ತೇಜಸ್ವಿ ಕಣ್ಣುಗಳನ್ನೂ ನೋಡಿ ಕನಿಕರಗೊಂಡು, ಅವನನ್ನು ಒಂದೆರಡು ದಿನಗಳವರೆಗೆ ಗುಪ್ತವಾದೊಂದು ಸ್ಥಳದಲ್ಲಿಟ್ಟು ಆಹಾರ ಕೊಟ್ಟು ಕಾಪಾಡಿ, ತಮ್ಮ ಪುರುಷರು ಕಣ್ಮರೆಯಾಗಿದ್ದ ಒಂದು ವೇಳೆಯಲ್ಲಿ—"ಅವರ ಕಣ್ಣಿಗೆ ಬೀಳದಂತೆ ಹೊರಟುಹೋಗಿ ನಿನ್ನ ದೇಶ ವನ್ನು ಸೇರಿ-ತಂದೆತಾಯಿಗಳ ಮಗನಾಗಿ ಬದುಕಿಕೋ!" ಎಂದು ಹೇಳಿ

ಕಳುಹಿಸಿಬಿಟ್ಟರು. ರಾಮಮೋಹನನು - ಕಿರಾತರಂತಿದ್ದ ಆ ಜನಗಳ ಸ್ತ್ರೀಯರಲ್ಲೂ ತೋರಿಬಂದ ಆ ದಯಾರ್ದ್ರ ಹೃದಯವನ್ನು ಕಂಡು ಪರಮಾಶ್ಚರ್ಯಪಡುತ್ತಾ—"ಆಹಾ ಸ್ತ್ರೀಯರು ನಿಜವಾಗಿ ಜಗನ್ಮಾತೃಗಳು. ಅವರ ಹೃದಯವು ಪ್ರಪಂಚವನ್ನೇ ಒಳಗೊಳ್ಳುವಷ್ಟು ವಿಶಾಲವಾದುದು. ಕೇವಲ ಪರಕೀಯನೂ - ಅಪರಿಚಿತನೂ ಆದ ನನ್ನನ್ನು ಕಾಪಾಡುವ ವಿಷಯದಲ್ಲಿ ಆ ಸಾಧ್ವಿಯರು ಎಷ್ಟು ಶ್ರಮಪಟ್ಟರಲ್ಲ! ಇನ್ನುಮುಂದೆ, ಅವರಿಂದ ರಕ್ಷಿತವಾದ ಈ ದೇಹವಿರುವ ಪರ್ಯಂತವೂ ಸ್ತ್ರೀ ಜಾತಿಗೇ ಎಂದೂ ವಿರೋಧವನ್ನೆಣಿಸದೆ, ಸಾಧ್ಯವಿದ್ದವರೆಗೂ ಅವರಿಗೆ ಇರುವ ಕಿರುಕುಳಗಳನ್ನೂ ಗಂಡಾಂತರಗಳನ್ನೂ ನಿವಾರಿಸುವುದರಲ್ಲಿ ಶಕ್ತಿಮೀರಿ ಶ್ರಮಿಸುವೆನು" ಎಂದು ಪ್ರತಿಜ್ಞೆ ಮಾಡಿಕೊಂಡು, ಅಲ್ಲಿಂದ ಹೊರಟು ಸ್ವದೇಶಾಭಿಮುಖವಾಗಿ ಪ್ರಯಾಣಮಾಡಿದನು. ಅಷ್ಟರಲ್ಲಿ ಇತ್ತ, ಕೇವಲ ಅಲ್ಪ ವಯಸ್ಕನಾದ ತನ್ನ ಮಗನು ದೇಶಾಂತರಗತನಾಗಿ ಹೋದುದಕ್ಕಾಗಿ ಹಲುಬಿ ಹಂಬಲಿಸಿ ಬಳಲಿದ್ದ ತಾರಣೀದೇವಿಯ ಮೊರೆಯನ್ನಾಲಿಸಿ, ಪುತ್ರವಾತ್ಸಲ್ಯದಿಂದ ಕರುಳು ಮರುಗಿದ್ದ ರಮಾಕಾಂತರಾಯನು, ಇಷ್ಟು ದಿನಗಳ ಮೇಲಾದರೂ ಬುದ್ಧಿ ಬಂದಿದ್ದೀತೆಂದು ನೆನೆಸಿ, ತನ್ನ ಮಗನನ್ನು ಹುಡುಕಿ ಕರೆತರಲು ನಾಲ್ಕು ಕಡೆಗೂ ಜನಗಳನ್ನು ಕಳುಹಿಸಿದ್ದನು. ಅವರಲ್ಲಿ ಕಾಶ್ಮೀರ ಪ್ರಾಂತದಲ್ಲಿ ಸಂಚರಿಸುತ್ತಿದ್ದ ಕೆಲವರು ಸ್ವದೇಶಾಭಿಮುಖವಾಗಿ ಹಿಂದಿರುಗಿ ಬರುತ್ತಿದ್ದ ಅವನನ್ನು ಕಂಡು - ಅವನ ಮಾತಾಪಿತೃಗಳ ಅಭಿಪ್ರಾಯವನ್ನು ತಿಳಿಸಿದರು. ಅವರೆಗೆ ಊರು ಬಿಟ್ಟು ನಾಲ್ಕು ವರ್ಷಗಳಾಗಿದ್ದುದರಿಂದ ಅವನಿಗೂ ಸ್ವಾಭಾವಿಕವಾಗಿ ತನ್ನ ತಂದೆತಾಯಿಗಳನ್ನು ನೋಡುವ ಅಭಿಲಾಷೆಯು ಬಾಧಿಸಲು, ಅವರೊಂದಿಗೆ ಹೊರಟುಬಂದು ತನ್ನ ಪ್ರಿಯ ಜನನೀಜನಕರ ಪಾದಗಳಿಗೆ ನಮಸ್ಕರಿಸಿದನು. ಅವರೂ, ಕೇವಲ ಮತಭೇದದ ಕಾರಣಕ್ಕಾಗಿ ಗೃಹತ್ಯಾಗಮಾಡಿ - ಮೂರು ನಾಲ್ಕು ವರ್ಷಕಾಲ ಎಲ್ಲೆಲ್ಲೋ ಸಂಚರಿಸಿ ಬಳಲಿ ಬಂದಿದ್ದ ಕುಶಾಗ್ರಮತಿಯಾದ ಆ ತಮ್ಮ ಮಗನನ್ನು ಬಹು ಪರಿಯಿಂದ ಸಮಾಧಾನಿಸಿ - ಉಪಚರಿಸಿದರು.



## ಅಧ್ಯಾಯ ೩                "ಬ್ರಹ್ಮ ಸಮಾಜ ಸ್ಥಾಪನೆ"

ರಾಮಮೋಹನನು ಊರಿಗೆ ಬಂದ ತರವಾಯು, ತಂದೆ ಮಕ್ಕಳು ಕೆಲದಿನಗಳು ಯಾವ ಬಗೆಯ ಮತಸಂಬಂಧ ಮಾತುಕತೆಗಳನ್ನೂ ಎತ್ತ ದಂತೆ ಜಾಗರೂಕರಾಗಿದ್ದರು. ರಾಮಮೋಹನನಾದರೂ, ಹಿಂದಿನಂತೆ ತನ್ನ ತಾಯಿತಂದೆಗಳ ಮನಸ್ಸಿಗೆ ಆಯಾಸವನ್ನುಂಟುಮಾಡುವ ತರ್ಕವಾದ ಗಳನ್ನು ಎತ್ತದೆ, ತನ್ನ ಮಟ್ಟಿಗೆ ತಾನು ಗ್ರಂಥವ್ಯಾಸಂಗದಿಂದ ಕಾಲ ಯಾಪನೆ ಮಾಡುತ್ತಿದ್ದನು. ರಮಾಕಾಂತನು, ಈಚೆಗೆ ಕೆಲದಿನಗಳಿಂದ ತನ್ನ ಮಗನು ಮತಸಂಬಂಧ ಚರ್ಚೆಗಳನ್ನೆತ್ತದೆ ಮೌನವೃತ್ತಿಯಿಂದಿರುವ ನಾದರೂ, ಜನ್ಮದೊಂದಿಗೇ ಬಂದಿರುವ ಅವನ ಸ್ವಭಾವವನ್ನು ಬದಲಾ ಯಿಸುವುದು ಅಸಾಧ್ಯವೆಂದೂ, ಅವನನ್ನು ಯಾವುದಾದರೊಂದು ಬಗೆ ಯಿಂದ ಪ್ರಾಪಂಚಿಕ ಬಂಧಕಕ್ಕೆ ಸಿಲುಕಿಸದಿದ್ದರೆ, ಮತ್ತೆ ಎಂದಾದ ರೊಂದುದಿನ ಮತಚರ್ಚೆಯ ಹುಚ್ಚು ಹಿಡಿದು ಹೊರಡುವನೆಂಬುದನ್ನೂ ತಿಳಿದವನಾಗಿ, ತನ್ನ ಪತ್ನಿಯೊಂದಿಗೆ ಯೋಚಿಸಿ, ರಾಮಮೋಹನನಿಗೆ - ಯೋಗ್ಯ ಕುಟುಂಬದಿಂದೊಂದು ಕನ್ಯೆಯನ್ನು ಹುಡುಕಿತಂದು ವಿವಾಹ ಮಾಡಿದನು. ಯೋಗ್ಯ ಕಾಲದಲ್ಲಿ, ಪತ್ನಿಯೂ ಪ್ರಬುದ್ಧಳಾಗಿ ಮನೆಗೆ ಬರಲು, ರಾಮಮೋಹನನು ಕೆಲದಿನಗಳು ಸುಖಸಮಾಧಾನಗಳಿಂದ ಕಾಲ ಕಳೆಯುತ್ತಿದ್ದನು. ಆದರೇನು! ವಿವಾಹದಿಂದ ಲಭ್ಯವಾಗುವ ವಿಷಯ ಸುಖಾದಿಗಳು, ಆತನ ಮನಸ್ಸಿಗೆ ಸಂಪೂರ್ಣ ತೃಪ್ತಿಯನ್ನುಂಟುಮಾಡಲರ್ಹ ವಾದ ಸಾಧನಗಳಲ್ಲವೆಂಬುದು ಸ್ವತಸ್ಸಿದ್ಧ ಸಂಗತಿಯಲ್ಲವೆ! ರಾಮಮೋಹ ನನು ಮತ್ತಾವ ವಿಚಾರವನ್ನೂ ಮನಸ್ಸಿಗಂಟಿಸಿಕೊಳ್ಳದೆ ಸದಾ ಗ್ರಂಥ ವ್ಯಾಸಂಗದಲ್ಲೇ ಆಸಕ್ತನಾಗಿರುತ್ತಿದ್ದನು. ಆತನಿಗೆ ಗ್ರಂಥಪಠನೆಯಲ್ಲಿದ್ದ ಅಭಿಲಾಷೆಯನ್ನೂ - ತನ್ಮಯತ್ವವನ್ನೂ ಕುರಿತು ಒಂದು ಸಂಗತಿಯು ಉದಾಹೃತವಾಗಿದೆ. ಒಂದಾನೊಂದುದಿನ ಆತನಿಗೆ ತಾನೆಂದೂ ನೋಡ ದಿದ್ದ ಒಂದು ಹಸ್ತ ಪ್ರತಿಯ ವಾಲ್ಮೀಕಿ ರಾಮಾಯಣವು ದೊರೆಯಿತಂತೆ! ಅದನ್ನು ಆಮೂಲಾಗ್ರವಾಗಿ ಪಠಿಸಲಾಸೆಗೊಂಡ ರಾಮಮೋಹನನು, ಒಂದು ಏಕಾಂತಸ್ಥಳದಲ್ಲ ಕುಳಿತುಕೊಂಡು ಆ ಗ್ರಂಥವನ್ನು ಓದಲಾರಂ

ಭಿಸಿದನು. ಮಧ್ಯಾಹ್ನವಾಗಿ ಊಟದ ವೇಳೆಯಾದರೂ ಅದನ್ನು ಬಿಟ್ಟು ಏಳದೆ, ಹಾಗೆಯೇ ಕುಳಿತಿದ್ದನು. ಊಟಕ್ಕೆ ಸಿದ್ಧವಾಗಿದೆಯೆಂದು ಮನೆಯಲ್ಲಿ ತಿಳಿಸಿದರಾದರೂ, ಎಲ್ಲರೂ ಊಟ ಮಾಡಬಹುದೆಂದೂ ತನಗಾಗಿ ಯಾರೂ ಕಾಯಬೇಡಿರೆಂದೂ ಹೇಳಿಬಿಟ್ಟನು. ಎಲ್ಲರೂ ಊಟಮಾಡಿದರು. ಆದರೆ ತಾರಣೀದೇವಿಯೊಬ್ಬಳು ಮಾತ್ರ ಮಗನನ್ನು ಬಿಟ್ಟು ಉಣಲಾರದೆ ಕಾದಿದ್ದಳು. ಮಧ್ಯಾಹ್ನ ಕಳೆದು ನಾಲ್ಕು ಗಂಟೆಯಾದರೂ ಅವನು ಏಳಲೇ ಇಲ್ಲ. ಕೊನೆಗೆ ಆಕೆಯು—"ರಾಮಮೋಹನಾ ಏನು ಈ ದಿನ ಆ ಪುಸ್ತಕವನ್ನು ಮುಗಿಸದೆ ಏಳುವುದಿಲ್ಲವೆಂದು ಶಪಥ ಮಾಡಿದ್ದೀಯೋ ಏನು! ನಿನಗೆ ಹಸಿವಾಗದಿದ್ದರೂ ನನಗೋಸ್ಕರವಾದರೂ ಎದ್ದು ಊಟ ಮಾಡಿ, ಪುನಃ ಓದುತ್ತಾ ಕುಳಿತುಕೊಳ್ಳಪ್ಪಾ" ಎಂದಳು. ಆ ಮಾತನ್ನು ಕೇಳಿದ ಆ ಬಾಲಕನು ಆವರೆಗೂ ತನ್ನ ತಾಯಿಯನ್ನು ಉಪವಾಸ ಏರುವಂತೆ ಮಾಡಿದುದಕ್ಕಾಗಿ ಮರುಗಿ ಮೇಲಕ್ಕೆದ್ದನಂತೆ!—

ಈ ಮಧ್ಯೆ ರಾಮಮೋಹನನಿಗೂ ರಮಾಕಾಂತರಾಯನಿಗೂ ಪುನಃ ಮಾತುಕಥೆಗಳು ನಡೆಯದಿರಲಿಲ್ಲ. ತನ್ನ ಮಗನ ಮೂರ್ಖಸ್ವಭಾವವನ್ನು ಕಂಡು ತಂದೆಯು ಅತಿಶಯ ಬೇಸರಪಟ್ಟುಕೊಳ್ಳುವನು. ತಾನು ಹೇಳುವ ವಿಚಾರವು ಮಧ್ಯಾಹ್ನದ ಬೆಳಕಿನಂತೆ ಅಷ್ಟು ಸ್ಪಷ್ಟವಾಗಿ - ಸತ್ಯವಾಗಿದ್ದರೂ ಅದನ್ನು ತನ್ನ ತಂದೆತಾಯಿಗಳೇ ಗ್ರಹಿಸದಿರುವರಲ್ಲಾ ಎಂದು ರಾಮಮೋಹನನೂ ಮರುಗುವನು. ಹೀಗಾಗಿ ಒಂದುದಿನ ರಮಾಕಾಂತರಾಯನು,— 'ರಾಮಮೋಹನಾ, ಇದು ಸರಿಯಾಗಿಲ್ಲ. ಪೂರ್ವಿಕರಿಂದ ನಡೆದುಬಂದ ಆಚಾರ ವ್ಯವಹಾರಗಳು ಸರಿಯಾದುವೋ ತಪ್ಪಾದುವೋ ಅದರ ವಿಚಾರವನ್ನು ನಾವು ಮಾಡತಕ್ಕುದಲ್ಲ! ನಾನು ಇದುವರೆಗೂ ನೋಡಿದೆನು. ನೀನು ನಿನ್ನ ಗುಣವನ್ನು ಸರಿಪಡಿಸಿಕೊಳ್ಳದಿರುವೆ ಇನ್ನು ನಿನ್ನನ್ನು ಮನೆಯಲ್ಲಿಟ್ಟುಕೊಳ್ಳುವುದು ನನಗೆ ಸಮ್ಮತಿಯಿಲ್ಲ ನೀನು ಬೇರೆ ಮನೆಯಲ್ಲಿ ವಾಸವಾಗಿರು" ಎಂದು ಹೇಳಿದನು. ಅಂದಿನಿಂದ ರಾಮಮೋಹನನೂ ಅವನ ಪತ್ನಿಯೂ ಬೇರೆಯೊಂದು ಮನೆಯಲ್ಲಿ ವಾಸಿಸತೊಡಗಿದರು. ತಂದೆಯು ಅವರ ಜೀವನಕ್ಕೆ ಸ್ವಲ್ಪ ದ್ರವ್ಯವನ್ನು ಪ್ರತಿ ತಿಂಗಳಲ್ಲೂ ಕೊಡುತ್ತಾ ಇದ್ದನು. ಮುಂದೆ ಕೆಲವು ದಿನಗಳಲ್ಲೇ ರಮಾ

ಕಾಂತರಾಯನು ಮೃತನಾಗಲು ತಾರಣೀದೇವಿಯು ಮಗನನ್ನು ಪುನಃ ಮನೆಗೆ ಸೇರಿಸಿಕೊಂಡಳಾದರೂ, ರಾಮಮೋಹನನು ಪಿತ್ರಾರ್ಜಿತ ಆಸ್ತಿಯಲ್ಲಿ ಏನನ್ನೂ ಅಪೇಕ್ಷಿಸದೆ ಪ್ರಬುದ್ಧನಾದ ತಾನು ಜೀವನಕ್ಕಾಗಿ ಅನ್ಯರ ಮೇಲೆ ಅವಲಂಬಿಸಿಕೊಂಡಿರುವುದು ಯುಕ್ತ ತೋರದೆ, ಏನಾದರೊಂದು ಉದ್ಯೋಗದಿಂದ ದ್ರವ್ಯಸಂಪಾದನೆ ಮಾಡಬೇಕೆಂದು ಯೋಚಿಸಿದನು. ಆದರೆ, ಆ ವೇಳೆಗೇ ಈ ದೇಶದಲ್ಲಿ ಇಂಗ್ಲೀಷರ ರಾಜ್ಯಭಾರವು ಸ್ಥಾಪನೆಯಾಗಿದ್ದುದರಿಂದ ಅವರ ಸರ್ಕಾರದ ಅಧೀನದಲ್ಲಿ ಉದ್ಯೋಗವು ಸಿಕ್ಕಬೇಕೆಂದರೆ ಇಂಗ್ಲೀಷ್ ಭಾಷೆಯ ಜ್ಞಾನವು ಅತ್ಯಾವಶ್ಯಕವಾಗಿದ್ದಿತು. ಅದನ್ನು ತಿಳಿದ ರಾಮಮೋಹನನು ತನ್ನ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಆ ಭಾಷೆಯ ಅಭ್ಯಾಸವನ್ನು ಪ್ರಾರಂಭಿಸಿದನು. ಪಾರ್ಶೀ ಅರಬ್ಬೀ ಮತ್ತು ಸಂಸ್ಕೃತ ಭಾಷಾ ಗ್ರಂಥಗಳ ಪಠನೆಯಲ್ಲೇ ಆತನ ಕಾಲವೆಲ್ಲ ಕಳೆದು ಹೋಗುತ್ತಿದ್ದುದರಿಂದ, ಆ ಭಾಷೆಯ ಅಭ್ಯಾಸಕ್ಕೆ ಹೆಚ್ಚು ಅವಕಾಶವೇ ಸಿಕ್ಕದೆ ಆರು ವರ್ಷಕಾಲ ಓದಿದನಂತರ ಆ ಭಾಷೆಯಲ್ಲಿ ಸ್ವಲ್ಪಮಟ್ಟಿಗೆ ಪ್ರವೇಶವುಂಟಾಯಿತು. ಹೀಗೆ ಆ ಭಾಷಾಭ್ಯಾಸದಿಂದ ಉದ್ಯೋಗ ಪ್ರವೇಶಕ್ಕೆ ತಕ್ಕ ಯೋಗ್ಯತೆಯುಂಟಾಗಲು ರಾಮಮೋಹನನು ತನ್ನ ಇಪ್ಪತ್ತೆಂಟನೆಯ ವಯಸ್ಸಿನಲ್ಲಿ ಎಂದರೆ ೧೮೦೦ ನೆಯ ಸಂವತ್ಸರದಲ್ಲಿ ರಂಗಪುರದ ಕಲೆಕ್ಟರಿನ ಕಚೇರಿಯಲ್ಲಿ ಒಂದು ಗುಮಾಸ್ತೆಯ ಕೆಲಸವನ್ನು ಕೊಡಿಸಬೇಕೆಂದು ಅರ್ಜಿ ಕೊಟ್ಟನು. ಆಗ ಅಲ್ಲಿ ಕಲೆಕ್ಟರಾಗಿದ್ದ ಮಿ|| ಡಿಗ್ಬಿ ಎಂಬಾತನು, ರಾಮಮೋಹನನ ಧೈರ್ಯವನ್ನೂ ಅಂಗಸೌಷ್ಠವವನ್ನೂ ಮುಖದಲ್ಲಿನ ತೇಜಸ್ಸನ್ನೂ ಕಂಡು ಸಂತೋಷಪಟ್ಟು ತನ್ನ ಕಚೇರಿಯಲ್ಲಿ ಒಂದು ಉದ್ಯೋಗವನ್ನು ಕೊಡುವೆನೆಂದು ಒಪ್ಪಿದನು. ಒಡನೆಯೇ ರಾಮಮೋಹನನು ಮತ್ತೊಂದು ಅರ್ಜಿಯನ್ನೂ ಕೊಟ್ಟನು. ಅದರಲ್ಲಿ, ತಾನು ಸಾಹೇಬನನ್ನು ಕಾಣಲು ಬಂದಾಗ್ಗೆ ತನ್ನನ್ನು ನಿಲ್ಲಿಸದೆ ಕುಳಿತುಕೊಳ್ಳಲು ಅವಕಾಶವೀಯಬೇಕೆಂದೂ, ಗೌರವಕರವಾದ ರೀತಿಯಲ್ಲಿ ನಡೆಯಿಸಿಕೊಳ್ಳಬೇಕೆಂದೂ, ಅದಕ್ಕೆ ಸಮ್ಮತಿಯಿದ್ದರೆ ಮಾತ್ರವೇ ತಾನು ಆ ಉದ್ಯೋಗವನ್ನು ಕೈಕೊಳ್ಳುವೆನೆಂದೂ ತಿಳಿಸಲ್ಪಟ್ಟಿದ್ದಿತು. ಅದನ್ನು ನೋಡಿದ ಮಿ|| ಡಿಗ್ಬಿ ಸಾಹೇಬನು ಆತನ ಆತ್ಮಗೌರವ ಶೀಲತೆಗಾಗಿ

ಪರಮ ಸಂತೋಷಪಟ್ಟು ಹಾಗೆಯೇ ಮಾಡುವೆನೆಂದು ಒಪ್ಪಿದುದಲ್ಲದೆ, ಆ ಅರ್ಜಿಯ ಮೇಲೆ ತನ್ನ ಹಸ್ತಾಕ್ಷರವನ್ನಿಟ್ಟೂ ಆತನಿಗೆ ನಂಬಿಕೆಗೊಳಿಸಿದನು. ಮುಂದೆ ರಾಮಮೋಹನರಾಯನು ತನ್ನ ಸ್ವಾಭಾವಿಕವಾದ ಧೈರ್ಯಸಾಹಸಗಳು, ಕರ್ತೃತ್ವಶಕ್ತಿ, ಕಾರ್ಯದಕ್ಷತೆ ಮುಂತಾದ ಪ್ರತಿಭಾವಿಶೇಷದಿಂದ ದಿನದಿನಕ್ಕೆ ಮೇಲೆಮೇಲಕ್ಕೆ ಏರುತ್ತಾ, ಕೊನೆಗೆ ಆ ಕಚೇರಿಯಲ್ಲಿ ಶಿರಸ್ತೇದಾರನ ಅಧಿಕಾರ ಪೀಠವನ್ನೂ ಏರಿದನು. ಆ ಕಾಲದಲ್ಲಿ ಆ ಸ್ಥಾನವನ್ನು 'ದಿವಾನ್' ಎಂದು ಕರೆಯುತ್ತಿದ್ದರು. ಡಿಗ್ಬಿ ಪ್ರಭುವು ಆತನನ್ನು ತನ್ನ ಕೈಕೆಳಗಿನ ಒಬ್ಬ ಗುಮಾಸ್ತನೆಂದು ಲಾಘವದಿಂದ ಕಾಣದೆ, ಆತನೊಂದಿಗೆ ಯಾವಾಗಲೂ ಗೌರವದಿಂದಲೇ ನಡೆದುಕೊಳ್ಳುತ್ತಿದ್ದನು. ಬರುತ್ತಾಬರುತ್ತಾ ರಾಮಮೋಹನರಾಯನ ವಿದ್ಯೆ ವಾಕ್ಚಾತುರ್ಯ ವಿವಿಧಭಾಷಾಜ್ಞಾನ ಮುಂತಾದುವುಗಳನ್ನು ಕಂಡು, ಆ ಆಂಗ್ಲೇಯನು ಆತನಲ್ಲಿ ಗುರು ಭಾವವನ್ನಿಟ್ಟು ನಡೆದುಕೊಳ್ಳುತ್ತಿದ್ದನು. ಆತನ ಸ್ನೇಹದಿಂದಲೂ ಉದ್ಯೋಗಸಂಬಂಧದಿಂದಲೂ ಇತರ ಅನೇಕಮಂದಿ ಐರೋಪ್ಯರ ಪರಿಚಯ ಸಂಭಾಷಣೆಗಳಿಗೆ ಅವಕಾಶ ದೊರೆತುದರಿಂದಲೂ ರಾಯನಿಗೆ ಇಂಗ್ಲೀಷ್ ಭಾಷೆಯಲ್ಲಿ ಸರ್ವತೋಮುಖವಾದ ಪ್ರತಿಭೆಯುಂಟಾಯಿತು. ಹೀಗೆ ಹದಿಮೂರು ವರ್ಷಕಾಲ ಉದ್ಯೋಗದಲ್ಲಿದ್ದು, ಬಹು ಸಮರ್ಥನಾದ ಅಧಿಕಾರಿಯೆಂದು ಮೇಲ್ಪಟ್ಟವರಿಂದಲೂ, ದಯಾಳುವೂ ದೀನ ಶರಣ್ಯನೂ ಬಹು ಸಮಾಧಾನಿಯೂ ಎಂದು ಕೈಕೆಳಗಿನ ನೌಕರರಿಂದಲೂ ಹೊಗಳಿಸಿಕೊಂಡು ೧೮೧೪ ನೆಯ ಸಂವತ್ಸರದಲ್ಲಿ ಉದ್ಯೋಗದಿಂದ ನಿವೃತ್ತನಾದನು.

ರಾಮಮೋಹನರಾಯನು ಅಷ್ಟು ಶೀಘ್ರವಾಗಿಯೇ ಉದ್ಯೋಗದಿಂದ ನಿವೃತ್ತನಾಗಬೇಕಾದ ಆವಶ್ಯಕವಿರಲಿಲ್ಲ. ಆತನು ಇಷ್ಟಪಟ್ಟಿದ್ದರೆ ಇನ್ನೂ ಅನೇಕ ವರ್ಷಗಳು ಆ ಉನ್ನತೋದ್ಯೋಗದಲ್ಲೇ ಇದ್ದು ಇನ್ನೂ ಅಧಿಕ ಧನವನ್ನೂ ಪ್ರತಿಷ್ಠೆಯನ್ನೂ ಗಳಿಸಬಹುದಾಗಿದ್ದಿತು. ಆದರೆ, ಆತನು ಹೊಟ್ಟೆಯ ಪಾಡಿಗಾಗಿಯಾಗಲೀ ಅಥವ ಧನವನ್ನು ಗಳಿಸುವುದಕ್ಕಾಗಲೀ ಪರಸೇವೆ ಮಾಡುವುದನ್ನೇ ಮುಖ್ಯವೆಂದೆಣಿಸಲಿಲ್ಲ. ತನ್ನ ಶೇಷಜೀವಿತವನ್ನು ತೊಂದರೆಯಿಲ್ಲದೆ ಸಾಗಿಸಿಕೊಳ್ಳಬಹುದೆಂಬಷ್ಟು ದ್ರವ್ಯವನ್ನು

ತನ್ನ ಆವರೆಗಿನ ಸಂಪಾದನೆಯಿಂದ ಮಿಗಿಸಿಟ್ಟುಕೊಂಡು, ಮುಂದೆ ಅನುಗಾಲವೂ ದೇಹವನ್ನು ವಿಕ್ರಯಿಸಿಕೊಂಡಿರಲಿಷ್ಟವಿಲ್ಲದೆ, ಉದ್ಯೋಗದಿಂದ ನಿವೃತ್ತಿಹೊಂದಿ ಸ್ವತಂತ್ರನಾದನು. ಹಾಗೆ ಪರಾಧೀನತೆಯ ಉದ್ಯೋಗದ ಕಿರುಕುಳಗಳಿಂದ ಬಿಡುಗಡೆಯನ್ನು ಹೊಂದಿದ ತರುವಾಯ ನಮ್ಮ ಕಥಾನಾಯಕನು ಹಿಂದೂ ಸಮಾಜದಲ್ಲಿದ್ದ ಕುಂದುಕೊರತೆಗಳನ್ನು ಉದ್ಘಾಟಿಸುತ್ತಾ ತನ್ನ ಅಭಿಪ್ರಾಯಗಳನ್ನು ನಿರಾತಂಕವಾಗಿ ಪ್ರಕಟಿಸಲು ಹೆಚ್ಚು ಅವಕಾಶ ಸಿಕ್ಕಿತು. ಉದ್ಯೋಗದಲ್ಲಿದ್ದಾಗ ಕೂಡ, ಪ್ರತಿ ಸಾಯಂಕಾಲವೂ ಮನೆಯಲ್ಲ ಸ್ನೇಹಿತರೊಂದಿಗೆ ಮತಚರ್ಚೆಯನ್ನು ನಡಿಸುತ್ತಲೂ ವಿವಿಧ ಮತಗ್ರಂಥಗಳನ್ನು ಓದುತ್ತಲೂ ಕಾಲ ಕಳೆಯುತ್ತಿದ್ದನಾದರೂ, ಸ್ವತಂತ್ರನಾದಮೇಲೆ ಪಂಡಿತರೊಂದಿಗೆ ವಾದವಿವಾದ ನಡೆಸುವುದಕ್ಕೂ ಹಸ್ತಪುಸ್ತಕಗಳನ್ನು ಬರೆದು ಪ್ರಕಟಿಸಿ ತನ್ನ ಅಭಿಪ್ರಾಯಗಳನ್ನು ಜನಮನದಲ್ಲಿ ಬೇರೂರುವಂತೆ ಮಾಡುವುದಕ್ಕೂ ಹೆಚ್ಚು ಅವಕಾಶ ಸಿಕ್ಕಿತು. ಮಗನು ಆರಂಭಿಸಿದ ಈ ಚಳುವಳಿಯಿಂದ ತಾರಣೀದೇವಿಯು ಮನೆಯಲ್ಲಿರುವುದು ಅಸಾಧ್ಯವಾಯಿತು. ಪೂರ್ವಾಚಾರ ಪರಾಯಣರಾದ ನೆರೆಹೊರೆಯವರು ಆಕೆಯ ಮಗನನ್ನೂ ಆತನನ್ನು ಮನೆಯಲ್ಲಿಟ್ಟುಕೊಂಡಿರುವ ಆಕೆಯನ್ನೂ ಅನೇಕ ಬಗೆಯಿಂದ ದೂಷಿಸತೊಡಗಿದರು. ಕೇವಲ ಪೂರ್ವಿಕಾಚಾರ ಪರಾಯಣಳೂ - ರಾಧಾಗೋವಿಂದ ಮೂರ್ತಿಯ ಪರಮ ಭಕ್ತಳೂ ಆದ ಆಕೆಯು ತನ್ನ ಮಗನು ಮೂರ್ತಿಪೂಜೆಯ ವಿಷಯದಲ್ಲಿ ಮಾಡುತ್ತಿದ್ದ ಅತಿ ತೀಕ್ಷ್ಣ ಪ್ರಕೃತಿಯ ಆಕ್ಷೇಪಣೆಗಳಿಗೆ ಸಮ್ಮತಿಸಲಾರದೆ ಆತನನ್ನು ಪತ್ನಿಯೊಂದಿಗೆ ಬೇರೆ ಮನೆಯಲ್ಲಿರಲು ಪ್ರೇರಿಸಿದಳು. ಇದನ್ನು ಕಂಡು ವಿಷಾದಪಟ್ಟ ರಾಮಮೋಹನರಾಯನು, ಕೆಲದಿನಗಳು ರಘುನಾಥಪುರವೆಂಬ ಬೇರೊಂದು ಗ್ರಾಮದಲ್ಲಿ ವಾಸಿಸಿದನಾದರೂ ಮುಂದೆ ತನ್ನ ಕಾರ್ಯಗಳಿಗೆ ಕಲ್ಕತ್ತಾಪಟ್ಟಣವೇ ಯೋಗ್ಯ ಸ್ಥಳವೆಂದು ನಿರ್ಧರಿಸಿ, ಅಲ್ಲಿಗೆ ಬಂದು ಅಪ್ಪರ್ ಸರ್ಕ್ಯುಲರ್ ರೋಡ್ ಎಂಬಲ್ಲಿ ನವೀನರೀತಿಯ ಒಂದು ದೊಡ್ಡ ಮನೆಯನ್ನು ಕಟ್ಟಿಸಿಕೊಂಡು ಅದರಲ್ಲಿ ವಾಸಮಾಡಲಾರಂಭಿಸಿದನು. ಆತನು ರಂಗಪುರದಲ್ಲ ಉದ್ಯೋಗದಲ್ಲಿದ್ದಾಗ ವರ್ಷವೊಂದಕ್ಕೆ ಹತ್ತುಸಹಸ್ರ ರೂಪಾಯಿಗಳ ಆದಾಯವನ್ನು ತರುತ್ತಿದ್ದ

ಒಂದು ಜಮೀನ್ದಾರಿಯನ್ನು ಸಂಪಾದಿಸಿದ್ದನು. ಅದರ ಉತ್ಪತ್ತಿಯಿಂದಲೂ - ಕಲ್ಕತ್ತೆಯ ಮೇಲ್ಕಂಡ ಮನೆಯಲ್ಲಿ ವಾಸಿಸುತ್ತಲೂ ಆತನು ನಿಶ್ಚಿಂತನಾಗಿ ಜೀವಿಸುತ್ತ ತನ್ನ ಉದ್ದೇಶಾನುಸಾರವಾದ ಧರ್ಮಪ್ರಚಾರ ಕಾರ್ಯದಲ್ಲಿ ನಿರತನಾಗಿದ್ದನು.—

ರಾಮಮೋಹನರಾಯನು ಎಣಿಸಿದ್ದಂತೆಯೇ ಆ ಪಟ್ಟಣದಲ್ಲಿ ಆತನ ಕಾರ್ಯಕಲಾಪಗಳ ಪ್ರಚಾರಕ್ಕೆ ಹೆಚ್ಚು ಅವಕಾಶ ದೊರೆಯಿತು. ಆತನು ಅಲ್ಲಿಗೆ ಬಂದ ಕೆಲವು ದಿನಗಳೊಳಗಾಗಿಯೇ ವೇದಾಂತ ಸೂತ್ರಗಳನ್ನು ಬಂಗಾಳಿ ಭಾಷೆಗೆ ತರ್ಜುಮೆಮಾಡಿ ಒಂದು ಗ್ರಂಥವನ್ನು ಬರೆದನು. ಮತ್ತೆ ಕೆಲದಿನಗಳೊಳಗಾಗಿಯೇ ಬಂಗಾಳಿ ಭಾಷೆಯನ್ನು ತಿಳಿಯದಿದ್ದವರ ಉಪಯೋಗಕ್ಕೆಂದು ಅದನ್ನೇ ಇಂಗ್ಲಿಷ್‌ಭಾಷೆಗೆ ತರ್ಜುಮೆ ಮಾಡಿದನು. ಇದಾದ ಕೆಲವು ದಿನಗಳೊಳಗಾಗಿಯೇ ವೇದಾಂತಸಾರವೆಂಬ ಇನ್ನೊಂದು ಗ್ರಂಥವನ್ನೂ ಪ್ರಕಟಿಸಿದನು. ಆ ಗ್ರಂಥಗಳನ್ನು ಓದಿದ ಕ್ರೈಸ್ತ ಪಾದ್ರಿಗಳು ಅವುಗಳ ಕರ್ತನ ಪ್ರತಿಭೆಗೆ ಪರಮಾಶ್ಚರ್ಯಪಡುತ್ತ ಆತನ ಪ್ರಸಿದ್ಧಿಯನ್ನು ಯೂರೋಪು ಖಂಡದವರೆಗೂ ವ್ಯಾಪನಗೊಳಿಸಿದರು. ಈ ಗ್ರಂಥಗಳೆರಡರಲ್ಲೂ ರಾಯಮಹಾಶಯನು ಬ್ರಹ್ಮೋಪಾಸನೆಯ ಮಹತ್ವವನ್ನು ಚರ್ಚಿಸುತ್ತ ಸಾಕಾರ ಸಿದ್ಧಾಂತವನ್ನು ಖಂಡಿಸಿ ಸರ್ವ ವಿಧಗಳಿಂದಲೂ ಬ್ರಹ್ಮಜ್ಞಾನಿಯೇ ಶ್ರೇಷ್ಠನೆಂದು ಸ್ಥಾಪಿಸಿದನು. ಮುಂದೆ ಒಂದೆರಡು ವರ್ಷಗಳಲ್ಲೇ ಎಂದರೆ ೧೮೧೮ ನೆಯ ಸಂವತ್ಸರದ ಸುಮಾರಿನಲ್ಲಿ ಈಶ ಕೇನ ಕಠ ಮುಂಡಕ ಮಾಂಡೂಕ್ಯ ಛಾಂದೋಗ್ಯಗಳೆಂಬ ಉಪನಿಷತ್ತುಗಳೂ ಬಂಗಾಳಿ ವ್ಯಾಖ್ಯ ಸಮೇತವಾಗಿ ಒಂದಾದ ಮೇಲೊಂದರಂತೆ ಪ್ರಕಟವಾದುವು. ಇವುಗಳನ್ನು ನೋಡಿದಮೇಲಂತೂ, ಹಿಂದೂ ಸಮಾಜದ ಪೂರ್ವಾಚಾರ ಪಂಗಡದವರಲ್ಲಿ ಉಂಟಾದ ಕಳವಳವನ್ನು ವರ್ಣಿಸಲಳವಲ್ಲ! ಅವರೂ ಸುಮ್ಮನಿರುತ್ತಿರಲಿಲ್ಲ. ಆತನ ಆಕ್ಷೇಪಣೆಗಳಿಗೆ ಪ್ರತ್ಯುತ್ತರವಾಗಿ, ಪೂರ್ವಾಚಾರ ಪದ್ಧತಿಗಳನ್ನು ಸ್ಥಾಪಿಸಿ ಪುಸ್ತಕಗಳನ್ನು ಬರೆದು ಪ್ರಕಟಿಸುವರು. ರಾಮಮೋಹನನು ಅವುಗಳಿಗೆ ಪ್ರತ್ಯುತ್ತರವಾಗಿ ಪುನಃ ಆ ವೇದೋಪನಿಷದಾದಿಗಳ ಆಧಾರಗಳನ್ನೇ ಕೊಟ್ಟು ಅವರ ಸಿದ್ಧಾಂತಗಳನ್ನು ಖಂಡಿಸುವ ಹಸ್ತಪುಸ್ತಕಗಳನ್ನು ಪ್ರಕಟಿಸುವರು.

ಆ ಕಾಲದಲ್ಲಿ ಈ ನೂತನ ಅಭಿಪ್ರಾಯಗಳನ್ನುಂಟಾಗಿದ್ದವನು ರಾಮ ಮೋಹನರಾಯನು ಒಬ್ಬಾತನೇ ಅಲ್ಲ! ಆತನ ಅಭಿಪ್ರಾಯಗಳನ್ನು ಕೇಳಿ ಒಪ್ಪಿಕೊಂಡಿದ್ದ ಬಾಬೂ ದ್ವಾರಕಾನಾಥಠಾಕೂರ, ರಾಜಾ ಕಾಳೀಶಂಕರ ಘೋಷಾಲ್, ಗೋಪೀನಾಥ ಮುಣ್ಷಿ, ಪ್ರಸನ್ನ ಕುಮಾರ ಠಾಕೂರ ಮೊದಲಾದವರೂ ಆತನಿಗೆ ಅನೇಕ ವಿಧಗಳಲ್ಲಿ ಬೆಂಬಲರಾಗಿದ್ದರು. ರಾಮ ಮೋಹನರಾಯನು ಕಲ್ಕತ್ತಾಕ್ಕೆ ಬಂದ ಕೆಲವು ದಿನಗಳೊಳಗಾಗಿಯೇ ಆ ನಗರದ ಪೂರ್ವ ಭಾಗದಲ್ಲೊಂದು ಮನೆಯನ್ನು ಕಟ್ಟಿಸಿದ್ದನಲ್ಲವೆ ಅದಕ್ಕೆ ಹೊಂದಿದಂತೆ ಒಂದು ತೋಟವೂ ಇದ್ದು - ಆಶ್ರಮದಂತೆ ಕಂಗೊಳಿಸುತ್ತಿದ್ದಿತು. ಆ ಸ್ಥಳದಲ್ಲೇ ಮೇಲ್ಕಂಡ ತನ್ನ ಮಿತ್ರರ ಸಹಾಯ ದಿಂದ ಆತನು ೧೮೧೫ನೆಯ ಸಂವತ್ಸರದಲ್ಲಿ **"ಆತ್ಮೀಯ ಸಭಾ"** ಎಂಬೊಂದು ಸಂಸ್ಥೆಯನ್ನು ಸ್ಥಾಪಿಸಿದನು. ಆ ಮಂದಿರದಲ್ಲಿ ಬಿಡುವಾದಾಗಲೆಲ್ಲ ಮಿತ್ರರು ಸೇರಿ ಮತ ವಿಚಾರಗಳನ್ನು ಚರ್ಚಿಸುತ್ತಿದ್ದರಾದರೂ ವಾರ ಕ್ಕೊಂದುದಿನ ಎಲ್ಲರೂ ಸೇರಿ ಪರಮೇಶ್ವರನನ್ನು ನಿರ್ಗುಣ - ನಿರಾಕಾರ ಸ್ವರೂಪದಿಂದ ಪ್ರಾರ್ಥಿಸುತ್ತಲೂ ಗ್ರಂಥವ್ಯಾಸಂಗ ಮಾಡುತ್ತಲೂ ಮತ ಚರ್ಚೆ ನಡಿಸುತ್ತಲೂ ಇದ್ದರು. ರಾಮಮೋಹನರಾಯನು ತಾನು ಕೈಕೊಂಡ ಆ ಧರ್ಮಪ್ರಚಾರಕಾರ್ಯವನ್ನು ಒಂದು ವಾಗ್ರೂಪವಾದ ಬೋಧನೆ, ಎರಡನೆಯದು ಪಾಠಶಾಲೆಗಳನ್ನು ಸ್ಥಾಪಿಸುವುದು, ಮೂರನೆ ಯದು ಮಾಸಪತ್ರಿಕಾ - ಪುಸ್ತಕ ಪ್ರಕಟನೆಗಳು, ನಾಲ್ಕನೆಯದು ನವಾ ಜನಿರ್ಮಾಣ ಹೀಗೆ ನಾಲ್ಕು ಮಾರ್ಗಗಳಿಂದ ಮಾಡಬಹುದೆಂದು ಯೋಚಿಸಿದನು.

ನಮ್ಮ ಕಥಾನಾಯಕನು ಹಿಂದೂ ಮಹಮ್ಮದೀಯ ಮತಗ್ರಂಥ ಗಳನ್ನು ಮಾತ್ರ ಪರಿಶೋಧಿಸುತ್ತಾ ಅಷ್ಟರಿಂದಲೇ ತೃಪ್ತನಾಗಲಿಲ್ಲ. ಹೀಬ್ರೂ ಭಾಷೆಯನ್ನು ಕಲಿತು ಕ್ರೈಸ್ತ ಧರ್ಮದ ಮೂಲಗ್ರಂಥಗಳಾದ ಓಲ್ಡ್‌ಟೆಸ್ಟಮೆಂಟ್ ಎಂಬ ಹಳೆ ಒಡಂಬಡಿಕೆಗಳನ್ನೂ, ಗ್ರೀಕ್ ಭಾಷೆ ಯನ್ನು ಕಲಿತು ನ್ಯೂಟೆಸ್ಟಮೆಂಟ್ ಎಂಬ ಹೊಸ ಒಡಂಬಡಿಕೆಗಳನ್ನೂ ಓದಿದನು. ಅವುಗಳಿಂದ ತಾನು ತಿಳಿದ ಕ್ರೈಸ್ತ ಮತಾಭಿಪ್ರಾಯಗಳನ್ನು ಸಂಗ್ರಹಿಸಿ, "ಏಸುಕ್ರಿಸ್ತನ ನೀತಿಗಳೂ-ಸೌಖ್ಯಕ್ಕೆ ಮಾರ್ಗಗಳೂ" ಎಂಬ

ಹೆಸರಿನ ಒಂದು ಪುಸ್ತಕವನ್ನು ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ರಚಿಸಿ, ೧೮೨೦ ನೆಯ ಸಂವತ್ಸರದಲ್ಲಿ ಪ್ರಕಟಿಸಿದನು. ಅದರಲ್ಲಿ ಕ್ರಿಸ್ತ ಏಸುವು ಮತಬೋಧಕನೆಂಬುದನ್ನು ಅಂಗೀಕರಿಸಿದ್ದನಲ್ಲದೆ, ಆತನು ದೇವ ಕುಮಾರನೆಂಬ ಅವರ ಸಿದ್ಧಾಂತವನ್ನು ನಿರಾಕರಿಸಿದ್ದನು. ಅದನ್ನು ಓದಿದ ಕೆಲಮಂದಿ ಕ್ರೈಸ್ತ ಮಿಷನೆರಿಗಳು, ರಾಮಮೋಹನನ ಅಭಿಪ್ರಾಯಗಳನ್ನು ಪ್ರತಿಭಟಿಸಿ ವಾದಿಸತೊಡಗಿದರು. ಅವುಗಳಿಗೆ ಪ್ರತ್ಯುತ್ತರವಾಗಿ ರಾಯ ಮಹಾಶಯನು ವಿಜ್ಞಾಪನೆ (Appeal) ಗಳೆಂಬ ಎರಡು ಹಸ್ತಕಗಳನ್ನು ಬರೆದು ಬ್ಯಾಪ್ಟಿಸ್ಟ್‌ಮಿಷನ್‌ಪ್ರೆಸ್ ಎಂಬ ಛಾಪಖಾನೆಯಲ್ಲಿ ಪ್ರಕಟಿಸಿದನು. ಆದರೆ ಮೂರನೆಯ ವಿಜ್ಞಾಪನೆಯನ್ನು ಛಾಪೆಗೆ ಕೊಟ್ಟಾಗ ರಾಮಮೋಹನನ ಸಿದ್ಧಾಂತಗಳನ್ನು ತಿಳಿದ ಆ ಕ್ರೈಸ್ತ ಮುದ್ರಣಾಧಿಪತಿಯು ಅದನ್ನು ತನ್ನ ಮುದ್ರಣಾಲಯದಲ್ಲಿ ಛಾಪಿಸುವುದಿಲ್ಲವೆಂದು ನಿರಾಕರಿಸಿದನು. ಅದನ್ನು ಕಂಡು, ಕಡುಧೈರ್ಯಶಾಲಿಯಾದ ರಾಮಮೋಹನರಾಯನು, ಒಡನೆ ತನ್ನದೇ ಒಂದು ಸ್ವಂತ ಮುದ್ರಣಾಲಯವನ್ನು ಸ್ಥಾಪಿಸಿ ಅದರಲ್ಲಿ ಆ ಹಸ್ತ ಪುಸ್ತಕವನ್ನು ಮುದ್ರಿಸಿ ಕಳುಹಿಸಿದನು. ಈ ಕೊನೆಯ ಪ್ರತ್ಯುತ್ತರದಲ್ಲಿ ರಾಯನು ಹೀಬ್ರೂ ಮತ್ತು ಗ್ರೀಕ್ ಭಾಷಾ ಮೂಲಗ್ರಂಥಗಳಿಂದ ಆಧಾರ ವಾಕ್ಯಗಳನ್ನು ಎತ್ತಿ ಬರೆದು ತನ್ನ ಅಭಿಪ್ರಾಯಕ್ಕೆ ಪುಷ್ಟಿಯನ್ನುಂಟುಮಾಡಿದ್ದನು. ರಾಮಮೋಹನರಾಯನ ಪ್ರತಿಕಕ್ಷಿಯಾದ ಡಾ. ಮಾರ್ಷ್‌ಮ್ಯಾನ್ ಎಂಬಾತನ ಹಸ್ತಕಗಳು ಇಂಗ್ಲೆಂಡಿನಲ್ಲಿ ಪುನಃ ಛಾಪೆಯಾಗಿ ಪ್ರಕಟವಾದುವು ಅದಕ್ಕೆ ಪ್ರತ್ಯುತ್ತರವಾಗಿ ರಾಮಮೋಹನರಾಯನು ಪ್ರಕಟಿಸಿದ್ದುವುಗಳು ಇಂಗ್ಲೆಂಡು ಮತ್ತು ಅಮೆರಿಕಾ ದೇಶಗಳಲ್ಲೂ ಪುನಃ ಮುದ್ರಣವಾಗಿ ಅನೇಕ ಮಂದಿ ವಿದ್ಯಾನಿಧಿಗಳ ಮತ್ತು ವಿಚಾರವಂತರ ಗಮನವನ್ನೆಳೆದುವು. ಈ ಎರಡು ಪಕ್ಷದವರ ಅಭಿಪ್ರಾಯಗಳನ್ನೂ ಓದಿದ ಡಾ|| ಕಾರ್ಪೆಂಟರೆಂಬ ಆಂಗ್ಲೇಯ ವಿದ್ವನ್ಮಣಿಯು ನಮ್ಮ ಕಥಾನಾಯಕನ ಪುಸ್ತಕದಲ್ಲಿ ಆತನು ಉದಹರಿಸಿದ ವಿಶೇಷ ಸಂಗತಿಗಳನ್ನೂ, ಆತನಿಗಿದ್ದ ಕ್ರೈಸ್ತಮತಗ್ರಂಥಗಳ ಆಂತರ್ಯ ಜ್ಞಾನವನ್ನೂ, ಆತನ ವಿಚಾರ ಸರಣಿಯ ವೈಖರಿಯನ್ನೂ, ಅಪೂರ್ವ-ಅಸ್ಖಲಿತ ಭಾಷಾಶೈಲಿಯ ಸೊಬಗನ್ನೂ - ಸಂಗತಿಗಳನ್ನು ವಾಚಕರ ಮನಸ್ಸಿಗೆ ಸುಲಲಿತವಾಗಿ

ತಿಳಿಯುವಂತೆ ಕೊಡುವ ಆತನ ವಚನರಚನಾ ಚಾತುರ್ಯವನ್ನೂ ಕುರಿತು ಬಹು ಪರಿಯಿಂದ ಶ್ಲಾಘಿಸಿದನು. ಇತ್ತ ಇತರ ಅನೇಕ ಮಂದಿ ಕ್ರೈಸ್ತ ಮಿಷನರಿಗಳೊಂದಿಗೆ ರಾಮಮೋಹನರಾಯನಿಗೆ ವಾದ ಪ್ರತಿವಾದಗಳು ನಡೆದುವು. ರಾಮಮೋಹನನಾದರೋ ಯಾವುದಕ್ಕೂ ಜಗ್ಗದೆ ಅವರಿಗೆ ಸರ್ವತೋಮುಖವಾದ ವಿಚಾರಗಳಿಂದ ಪ್ರತ್ಯುತ್ತರ ಕೊಡಲು ಸಾಧಕವಾಗಿರಲೆಂದು ಬ್ರಾಹ್ಮಿನಿಕಲ್ ಮ್ಯಾಗಜೀನ್ ಎಂಬೊಂದು ಮಾಸಪತ್ರವನ್ನು ಹೊರಡಿಸಿದನು. ಅಲ್ಲದೆ ಕ್ರೈಸ್ತ ಸಿದ್ಧಾಂತದಲ್ಲಿ ಉಕ್ತವಾಗುವಂತೆ "ಏಸುಕ್ರಿಸ್ತನು ಲೋಕದ ಪಾಪಿಗಳ ಪಾಪವನ್ನು ತಾನು ಹೊತ್ತುಕೊಂಡು ಅವರನ್ನು ಉದ್ಧರಿಸುವುದಕ್ಕಾಗಿ ಅವತರಿಸಿದನು" ಎನ್ನುವುದಾದರೆ,—"ಹಿಂದೂಗಳೂ ಭಗವಂತನ ಅವತಾರವು ಜಗದ ಪಾಪಿಗಳ ಉದ್ಧಾರಕ್ಕಾಗಿಯೇ" ಎಂದು ಹೇಳುವ ಸಿದ್ಧಾಂತಕ್ಕೆ ಅನುಸಾರವಾಗಿದೆಯಲ್ಲದೆ, ಭೇದವೇನೂ ಇಲ್ಲವೆಂಬ ವಿಚಾರವನ್ನು ವಿವರಿಸಿ ಒಂದು ಚಿಕ್ಕ ಪುಸ್ತಕವನ್ನು ಪ್ರಕಟಿಸಿದನು. ಇದನ್ನು ಕಂಡ ಡಾ|| ಟಿಟ್ಲರ್ ಎಂಬೊಬ್ಬ ಕ್ರೈಸ್ತ ಮತ ಭಕ್ತನು ತನ್ನ ಪವಿತ್ರ ಮತವನ್ನು ಪಾಷಂಡಿಗಳ ಮತಕ್ಕೆ ಹೋಲಿಸಿದನಲ್ಲಾ ಎಂದು ಕೋಪೋದ್ದೀಪಿತನಾಗಿ ರಾಮಮೋಹನರಾಯನಿಗೆ ಪ್ರತಿಭಟಿಸಿದನು. ಇಬ್ಬರಿಗೂ ಪತ್ರಮುಖಾಂತರ ಘನಘೋರ ಸಂಗ್ರಾಮಗಳು ನಡೆದುವು. ಇದರ ಫಲವಾಗಿ ಟ್ರಿನಿಟೇರಿಯನ್ ಕ್ರೈಸ್ತ ಪಾದ್ರಿಯಾಗಿದ್ದ ರೆವರೆಂಡ್ ವಿಲಿಯಂ ಆಡಂ ಎಂಬಾತನು ರಾಮಮೋಹನರಾಯನ ಯುಕ್ತಿಯುಕ್ತವಾದ ಸ್ವಮತ ವಿಚಾರಗಳನ್ನು ಓದಿ *ಯೂನಿಟೇರಿಯನ್ ಕ್ರೈಸ್ತನಾಗಿ ಮಾರ್ಪಟ್ಟನು.

ರಾಮಮೋಹನರಾಯನು ಸ್ಥಾಪಿಸಿದ್ದ ಆತ್ಮೀಯ ಸಭಾವಿಚಾರವನ್ನು ಈ ಹಿಂದೆಯೇ ತಿಳಿಸಿದ್ದೇವಲ್ಲವೆ! ತರುವಾಯ ಆತನು ವೇದಮಂದಿರವೆಂಬ

---

*ಏಸುಕ್ರಿಸ್ತನು ದೇವಕುಮಾರನೆಂದೂ ಆತನು ಮನುಷ್ಯರ ಪಾಪ ಪರಿಹಾರಕ್ಕಾಗಿ ಮೃತಿ ಹೊಂದಿದನೆಂದೂ, ಆತನಿಂದಲೇ ಕೊನೆಯಲ್ಲಿ ಪಾಪಿಗಳ ವಿಚಾರ ನಡೆದು ಮೋಕ್ಷವು ಪ್ರಾಪ್ತವಾಗುವುದೆಂದೂ ಹೇಳುವ ಮಾತುಗಳನ್ನು ನಂಬದವರು ಯೂನಿಟೇರಿಯನ್‌ಗಳೆಂದು ಕರೆಯಲ್ಪಡುವರು ದೇವಕುಮಾರ, ಪರಿಶುದ್ಧಾತ್ಮ ಪರಮಪಿತ ಈ ತ್ರಿಮೂರ್ತಿ ಸಿದ್ಧಾಂತವನ್ನು ಮೆಚ್ಚಿಕೊಳ್ಳುವವರು "ಟ್ರಿನಿಟೇರಿಯನ್" ಗಳೆಂದು ಕರೆಯಲ್ಪಡುವರು

ಮತ್ತೊಂದು ಸಂಸ್ಥೆಯನ್ನೇರ್ಪಡಿಸಿ ಅಲ್ಲಿ ವೇದಾಭ್ಯಾಸಕ್ಕೆ ತಕ್ಕ ಅವಕಾಶ ಗಳನ್ನು ಕಲ್ಪಿಸಿದನು. ಮುಂದೆ ೧೮೨೮ ನೆಯ ಸಂವತ್ಸರದಲ್ಲಿ ಆತನು ಬ್ರಹ್ಮಸಮಾಜವೆಂಬ ಹೆಸರಿನ ಸಂಸ್ಥೆಯನ್ನು ಸ್ಥಾಪಿಸಿದನು ಅದರಲ್ಲ ಶಾಶ್ವತನೂ ಪುರಾಣಪುರುಷನೂ ಅವಾಙ್ಮಾನಸಗೋಚರನೂ, ನಿತ್ಯತೃಪ್ತನೂ, ನಿರಾಕಾರನೂ, ನಿರ್ಗುಣನೂ ಆದ ಸರ್ವೇಶ್ವರನನ್ನು ಅನನ್ಯ ಭಕ್ತಿಯಿಂದ ಪೂಜಿಸಬೇಕೆಂಬುದೇ ಮುಖ್ಯ ತತ್ವವಾಗಿತ್ತು. ರಾಮಮೋಹನರಾಯನು ಹೀಗೆ ವೇದ-ಉಪನಿಷತ್ತುಗಳಲ್ಲ ಉಕ್ತವಾದ ಅಮೋಘ ತತ್ವಗಳನ್ನುಂಟಾಗಿದ್ದ ಬ್ರಹ್ಮಸಮಾಜವನ್ನು ಸ್ಥಾಪಿಸಿ ತನ್ನ ರಾಷ್ಟ್ರೀಯ ಜೀವಿತ ಇತಿಹಾಸದಲ್ಲೊಂದು ನವೀನ ಯುಗವನ್ನೇ ಆರಂಭಿಸಿಬಿಟ್ಟನು



## ಅಧ್ಯಾಯ ೪ "ಸುಧಾರಣಾದಿ ಚಳುವಳಿಗಳು"

ಭೌತಿಕ ಪ್ರಪಂಚವು ಪ್ರತಿ ನಿತ್ಯವೂ ಬದಲಾಗುವ ಸ್ವಭಾವವನ್ನುಳ್ಳದು; ಪ್ರತಿನಿತ್ಯ ಮಾತ್ರವೇ ಅಲ್ಲ - ಪ್ರತಿಘಳಿಗೆ, ಪ್ರತಿಕ್ಷಣವೂ ಬದಲಾಗುತ್ತಿರುವುದು. ನಮ್ಮ ಸ್ಥೂಲ ದೃಷ್ಟಿಗೆ ಪರ್ವತ ಅರಣ್ಯ ನದಿ ಬಯಲು ಮುಂತಾದುವು ವ್ಯತ್ಯಾಸವಾದಂತೆ ಕಾಣಲಾರವಾದರೂ ಪ್ರಪಂಚವೆಂಬುದು ಯಾವ ಪ್ರಾಣಿವರ್ಗ ವನಸ್ಪತಿವರ್ಗ ಖನಿಜವರ್ಗಾದಿಗಳಿಂದ ತುಂಬಿದೆಯೋ ಅವೆಲ್ಲವೂ ಪ್ರತಿಕ್ಷಣದಲ್ಲೂ ಬೆಳೆಯುತ್ತಿರುವುವು.— ಅರ್ಥಾತ್, ಹಿಂದಿನ ಸ್ಥಿತಿಯಿಂದ ಬದಲಾಗುತ್ತಿರುವುವೆಂದು ಪ್ರಕೃತಿಶಾಸ್ತ್ರಜ್ಞರು ಸ್ಥಾಪಿಸುತ್ತಾರೆ. ಅವುಗಳೊಂದಿಗೆ ಜನಾಂಗದ ಸ್ಥಿತಿಯು ವ್ಯತ್ಯಾಸವಾಗುವುದಾದರೂ ಸ್ವಾಭಾವಿಕವೇ! ಸಹಸ್ರಾರು ವರ್ಷಗಳಿಂದ ಸ್ವದೇಶದಲ್ಲೇ ಇದ್ದು ಹೊರಗಿನ ಸಂಪರ್ಕವನ್ನೇ ಅರಿಯದಿದ್ದ ಹಿಂದೂ ಜನಾಂಗವು, ಈಚೆಗೆ ಮುನ್ನೂರು ನಾನೂರು ವರ್ಷಗಳಿಂದಲೂ ಪರದೇಶೀಯರ ಸಂಬಂಧವನ್ನು ಹೊಂದುತ್ತಿದೆ. ದೇಶೀಯರ ಲೌಕಿಕ ಜೀವಿತವು ಪರದೇಶೀಯರ ಆಡಳಿತ ಸ್ವಾಮ್ಯಗಳಿಗೆ ಒಳಪಟ್ಟು ನಡೆಯಬೇಕಾದ ಸ್ಥಿತಿಯು ಪ್ರಾಪ್ತಿಸಿದೆ.

ಹಿಂದಿನ ಅನೇಕ ವಿಚಾರಗಳನ್ನು ಈ ಕಾಲದಲ್ಲಿ ಆಚರಣೆಯಲ್ಲಿಟ್ಟುಕೊಂಡು ನಡಿಸುವುದು ಕೆಲವರಿಗೆ ಸಾಧ್ಯವಿರಬಹುದಾದರೂ, ಇತರ ಅನೇಕಾನೇಕರಿಗೆ ಕಾಲದೇಶವರ್ತಮಾನಗಳ ಸ್ಥಿತಿಗತಿಗಳಿಂದ ಸುತರಾಂ ಸಾಧ್ಯವಿರುವುದಿಲ್ಲ! ಅದರಿಂದ ಒಂದು ಕಡೆ ಧರ್ಮಬಂಧಕಕ್ಕೂ ಮತ್ತೊಂದು ಕಡೆ ಜೀವಿತದ ಇಲಿಗತ್ತರಿಗೂ ಸಿಕ್ಕು ಸಂಕಟಪಡಲಾರದೆ ಅನೇಕರು,—"ಸತ್ತ ನಂತರ ದೊರಕುವ ಪರಲೋಕ ಸಾಧನ ವಿಚಾರವು ಎತ್ತಾದರೂ ಹೋಗಲಿ-ಸದ್ಯಃ ಬದುಕಿಕೊಂಡಿದ್ದರೆ ಸಾಕು," ಎಂದು ಧರ್ಮಬಂಧವನ್ನು ಕಿತ್ತೊಗೆದು ಪರಧರ್ಮಗಳನ್ನು ಸ್ವೀಕಾರಮಾಡಲು ಹಿಂದೆಗೆಯರು. ಇಂತಹ ಸಂದರ್ಭದಲ್ಲಿ ಪೂರ್ವಾಚಾರಪರಾಯಣರು—'ಹೋದವರು ಹೋಗಲಿ-ಅಂತಹ ಜಳ್ಳಿದೆಯ ಧರ್ಮ ಬಾಹಿರರು ಇದ್ದರಷ್ಟು ಪ್ರಯೋಜನವೋ ಹೋದರೂ ಅಷ್ಟೆ!" ಎಂದು ಅಂಥವರನ್ನು ಬಹಿಷ್ಕರಿಸಿ ತಳ್ಳಿಬಿಡಲು ಹಿಂದುಮುಂದು ನೋಡುವುದಿಲ್ಲ. ಆದರೆ, ದೇಶಾಭಿಮಾನಿಗಳು ಧರ್ಮವಿಚಾರವನ್ನು ಆ ದೃಷ್ಟಿಯಿಂದ ನೋಡುವುದಿಲ್ಲ. ಧರ್ಮಾಭಿಮಾನಿಗಳಿಗೂ ದೇಶಾಭಿಮಾನಿಗಳಿಗೂ ಒಂದು ದೊಡ್ಡ ವ್ಯತ್ಯಾಸವುಂಟು! ಧರ್ಮಾಭಿಮಾನಿಗಳಿಗೆ ಬೇಕಾದುದು ಧರ್ಮವೊಂದು ಮಾತ್ರ, ಮಿಕ್ಕ ಎಲ್ಲಾ ವಿಚಾರಗಳೂ ನಾಶವಾವಾಗುವಂತಿದ್ದರೂ ಅವರು ಗಮನಿಸುವುದಿಲ್ಲ. ಆದರೆ ದೇಶಾಭಿಮಾನಿಗಳ ವಿಚಾರ ಹಾಗಲ್ಲ. ಅವರ ದೃಷ್ಟಿಯಲ್ಲಿ ಧರ್ಮ ಮತ್ತು ದೇಶಕ್ಷೇಮ ಈ ಎರಡೂ ಇರುವುವು. ಅದುದರಿಂದ ಅವರು ಆಪತ್ಕಾಲ ಬಂದಾಗ್ಗೆ ಧರ್ಮ ವಿಚಾರದಲ್ಲಿ ಅತಿ ಮುಖ್ಯ ಭಾಗಗಳಿಗೆ ಮಾತ್ರ ಪ್ರಾಮುಖ್ಯತೆಯನ್ನು ಕೊಟ್ಟು-ಅವುಗಳನ್ನು ಲೋಪಗೊಳಿಸದಂತೆ ಚಿಲ್ಲರೆಯ ಮುಖ್ಯವಿಚಾರಗಳನ್ನು ಹೋಗಬಿಡುವರು. **"ಸರ್ವನಾಶೇ ಸಮುತ್ಪನ್ನೇ ಅರ್ಧಂತ್ಯಜತಿ ಪಂಡಿತಃ"** ಎಂಬ ಆರ್ಯವಾಕ್ಯವನ್ನು ಕಣ್ಣೆದುರಿನಲ್ಲಿಟ್ಟುಕೊಂಡು ನಮ್ಮ ಕಥಾನಾಯಕನಂತಹ ಮಹಾಪುರುಷರು, ನಮ್ಮಲ್ಲಿರುವ ಅತಿ ಕಠಿಣವಾದ ಧರ್ಮವಿಧಿಗಳನ್ನು ಕಾಲದೇಶಗಳಿಗೆ ತಕ್ಕಂತೆ ವ್ಯತ್ಯಾಸಗೊಳಿಸಿದುದು ಆ ಉದ್ದೇಶದಿಂದಲೇ! ಅದರಿಂದ ಪ್ರಯೋಜನವಿಲ್ಲವೆಂದಲ್ಲ. ಅಂತಹ ವ್ಯತ್ಯಾಸಗಳನ್ನು ಹೊಂದಿ, ಎಂದರೆ ಸುಧಾರಣೆಗೊಳಪಟ್ಟು ನಿಂತವರು, ಧರ್ಮಬಾಂಧವರೂ ಸ್ವದೇಶೀಯರೂ – ಮೂಲತಃ ಸ್ವಜನರೂ ಆಗಿರುವರಲ್ಲದೆ,

ನಮಗೆ ಕೇವಲ ಪರಕೀಯರಾಗಿ ಸಾಲದುದಕ್ಕೆ ಪ್ರತಿಕಕ್ಷಿಗಳೂ ಆಗದಂತೆ ಇರುವರು. ಸುಧಾರಣಾಪಕ್ಷವೆಂಬುದೊಂದು ಇಲ್ಲದಿದ್ದರೆ, ಪೂರ್ವದ ಕಠಿಣ ಧಾರ್ಮಿಕಬಂಧನದಿಂದ ಬಿಡುಗಡೆಹೊಂದಲಪೇಕ್ಷಿಸಿದ ಎಷ್ಟು ಸಂಖ್ಯೆಯ ಜನರು ಪರಧರ್ಮಗಳನ್ನು ಅವಲಂಬಿಸಿ, ನಮಗೆ ಸಂಪೂರ್ಣ ವಿರೋಧಿಗಳೇ ಆಗುತ್ತಿದ್ದರೆಂಬುದನ್ನಾದರೂ ನಾವು ಗಮನಿಸಬೇಕಾಗಿದೆ. ಇದನ್ನು ದೇಶಾಭಿಮಾನದೃಷ್ಟಿಯುಳ್ಳ ಪ್ರತಿ ವ್ಯಕ್ತಿಯೂ ಲಕ್ಷ್ಯದಲ್ಲಿಟ್ಟು, ಆಧುನಿಕಮಹಾಪುರುಷರ ಕಾರ್ಯಕ್ರಮಗಳ ನಿಶ್ಚಯಾಭಿಪ್ರಾಯವನ್ನು ಗಮನಿಸಬೇಕಲ್ಲದೆ, ಎಲ್ಲಾ ವಿಚಾರಗಳನ್ನೂ ತಮ್ಮ ಹತ್ತು ಸಹಸ್ರವರ್ಷಗಳ ಹಿಂದಿನ ಅಲೌಕಿಕದೃಷ್ಟಿಯಿಂದಲೇ ನೋಡತೊಡಗಲಾಗದು. ವ್ಯವಹಾರದಲ್ಲಿ ಎಣ್ಣೆತುಪ್ಪಗಳನ್ನೂ ಅಕ್ಕಿರಾಗಿಗಳನ್ನೂ, ಬಟ್ಟೆ ಬರೆ-ಚಿನ್ನ ಬೆಳ್ಳಿಗಳನ್ನೂ ಅಳೆದು ಬೆಲೆಯನ್ನು ನಿರ್ಧರಿಸುವ ಅಳತೆ ತೂಕ ಮುಂತಾದ ಸಾಧನಗಳಲ್ಲಿ ವ್ಯತ್ಯಾಸವಿಲ್ಲವೆ! ಹಾಗೆಯೇ ಪ್ರಾಪಂಚಿಕವಾದ ಎಲ್ಲಾ ವಿಚಾರಗಳನ್ನೂ ಅದದಕ್ಕೆ ಸ್ವಭಾವಿಕವಾದ ದೃಷ್ಟಿಭೇದದಿಂದ ಗಮನಿಸುವುದು ಆವಶ್ಯಕವಾಗಿದೆ.

ಬ್ರಹ್ಮಸಮಾಜವನ್ನು ಸ್ಥಾಪಿಸಿ, ಮತವಿಚಾರದಲ್ಲಿ ಸುಧಾರಣೆಯನ್ನು ಮಾಡಿದ ರಾಮಮೋಹನರಾಯನು ಅಷ್ಟಕ್ಕೇ ವಿಶ್ರಾಂತನಾಗಲಿಲ್ಲ; ಸಾಮಾಜಿಕ ವಿಚಾರದಲ್ಲೂ ಪ್ರವೇಶಿಸಿದನು. ಮತ ಮತ್ತು ಸಾಮಾಜಿಕ ವಿಚಾರಗಳೆರಡೂ ಬಹು ಸಮೀಪ ಸಂಬಂಧವುಳ್ಳ ಎರಡು ಸಂಸ್ಥೆಗಳು. ಇವೆರಡರಲ್ಲಿ ಯಾವುದರ ಗಡಿಯು ಎಲ್ಲಿಗೆ ಮುಗಿದು, ಮತ್ತಾವುದರಗಡಿಯು ಎಲ್ಲಿಂದ ಪ್ರಾರಂಭಿಸುವುದೆಂದು ಹೇಳುವುದು ಅಸಾಧ್ಯ! ಆದುದರಿಂದ ಮತವಿಚಾರದ ಸುಧಾರಣಕಾರ್ಯದಲ್ಲಿ ತೊಡಗಿದವನು, ಮತವು ಸಮಾಜದ ಯಾವಯಾವ ಕಾರ್ಯಗಳಲ್ಲಿ ಭಾಗತೆಗೆದುಕೊಳ್ಳುವುದೋ ಅದನ್ನೆಲ್ಲ ಸುಧಾರಿಸಲೇಬೇಕಾಗುವುದು. ಅದಕ್ಕನುಸಾರವಾಗಿಯೇ ರಾಮಮೋಹನರಾಯನಾದರೂ ಜನನ ಮರಣ ವಿವಾಹ ಮುಂತಾದ ವಿಶೇಷಸಂದರ್ಭಗಳಲ್ಲಿ ನಡೆಯಬೇಕಾದ ಪದ್ಧತಿಗಳನ್ನು-ಪ್ರಚಲಿತ ಹಿಂದೂ ಧರ್ಮದಿಂದ ವ್ಯತ್ಯಾಸವಾಗಿರುವಂತೆ-ಬ್ರಹ್ಮಸಮಾಜವನ್ನು ಅವಲಂಬಿಸಿದವರಿಗಾಗಿ ನಿರ್ಮಿಸಿದನು. ಅಲ್ಲದೆ ಹಿಂದೂಮತದಲ್ಲಿ, ಧರ್ಮದ ಹೆಸರಿನಲ್ಲಿ ಬಹು ದಿನಗಳಿಂದಲೂ

ನಡೆದುಬಂದಿದ್ದ ಕೆಲವು ಪದ್ಧತಿಗಳನ್ನು ತಪ್ಪಿಸಲೂ ಶ್ರಮಿಸಿದನು. ದೇಶಾಭಿಮಾನದಿಂದ ಪ್ರೇರಿತನಾಗಿ ಆತನು ನಡೆಯಿಸಿದ ಅಂತಹ ಸುಧಾರಣೆಗಳನ್ನು ಕುರಿತು ಸಂಕ್ಷೇಪವಾಗಿ ಈ ಅಧ್ಯಾಯದಲ್ಲಿ ಪ್ರಸ್ತಾಪಿಸುತ್ತೇವೆ.

**"ಸತೀ ಅಥವ ಸಹಗಮನ":—**

ಪತಿಯು ಮೃತನಾದರೆ ಆತನ ಶವದೊಂದಿಗೆ ಜೀವದೊಂದಿಗಿದ್ದ ಆತನ ಪತ್ನಿಯೂ ಚಿತೆಯನ್ನೇರಿ ಸುಟ್ಟುಹೋಗುವ ಪದ್ಧತಿಗೆ ಸಹಗಮನವೆಂದು ಹೆಸರು. ರಾಮಮೋಹನರಾಯನು ಚಿಕ್ಕವನಾಗಿದ್ದಾಗ, ಆತನ ಅಣ್ಣನಾದ ಜಗನ್ಮೋಹನನು ಮೃತನಾಗಲು, ತನ್ನ ಅತ್ತಿಗೆಯು ಪತಿಯ ಶವದೊಂದಿಗೆ ಸಹಗಮನ ಮಾಡಿದ್ದುದನ್ನು ನೋಡಿದ್ದನು. ನಿರ್ಜೀವದ ಶವದೊಂದಿಗೆ ತುಂಬುಪ್ರಾಣದ ಶರೀರವನ್ನೂ ದಹಿಸುವ ಆ ಭಯಂಕರ ಪದ್ಧತಿಯನ್ನು ನೋಡಿ ಮೃದುಹೃದಯದ ಆತನು ಮರುಗಿ ಎಷ್ಟೋ ಸಾರಿ ಕಣ್ಣೀರು ಸುರಿಸಿದ್ದನು. ಮತ್ತು ಟಿಬೆಟ್ಟನಲ್ಲಿ ತನ್ನನ್ನು ಪ್ರಾಣಾಪಾಯದಿಂದ ತಪ್ಪಿಸಿ ಕಾಪಾಡಿದ್ದ ಸ್ತ್ರೀಯರ ಉಪಕಾರದ ಸ್ಮರಣೆ ಬಂದಾಗ, ತನಗೆ ಪ್ರಾಣದಾನಮಾಡಿದ ಸ್ತ್ರೀ ಜಾತಿಗೆ ತನ್ನ ಕೃತಜ್ಞತೆಯನ್ನು ತೋರಿಸಲು, ಈ ಭಯಂಕರ ಪದ್ಧತಿಯನ್ನು ನಿರ್ಮೂಲಗೊಳಿಸುವುದೇ ಪ್ರಥಮ ಕರ್ತವ್ಯವೆಂದುಕೊಂಡಿದ್ದನು. ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಈ ಕೆಲಸಕ್ಕೆ ವೇದ-ಉಪನಿಷತ್ತುಗಳಲ್ಲಿ ಏನಾದರೂ ಆಧಾರವಿದೆಯೇ ಎಂದು ಅವುಗಳನ್ನೆಲ್ಲ ಹುಡುಕಿನೋಡಿದನು. ಎಲ್ಲೂ ಏನೂ ಆಧಾರ ದೊರಯಲಿಲ್ಲ.— ಕೊನೆಗೆ ಹಿಂದುಗಳಿಗೆ ಅತಿಮುಖ್ಯ ಧರ್ಮಸ್ಮೃತಿಯಾದ ಮನುಧರ್ಮಶಾಸ್ತ್ರದಲ್ಲೂ ಅದರ ಉಲ್ಲೇಖವು ಕಂಡು ಬರಲಿಲ್ಲ. ಆದರೆ ಅಂಗಿರಸೆಂಬ ಋಷಿಯೊಬ್ಬಾತನು ಮಾತ್ರ ನುಡಿದಿದ್ದ ಒಂದು ವಚನದ ಆಧಾರದಮೇಲೆ, ಪುರಾಣಕಾಲದ ಕೆಲಮಂದಿ ಕ್ಷತ್ರಿಯ ಸ್ತ್ರೀಯರು ತಮ್ಮ ಪತಿಗಳ ವಿಯೋಗದುಃಖವನ್ನು ಸಹಿಸಲಾರದೆ ಅವರ ಶವದೊಂದಿಗೆ ದೇಹವನ್ನೊಪ್ಪಿಸುತ್ತಿದ್ದುದೇ ಪದ್ಧತಿಯಾಗಿ, ನಡೆದುಬರುತ್ತಿದ್ದಿತೆಂಬುದನ್ನು ಕಂಡುಹಿಡಿದು, ಆತನು ಆ ದುಷ್ಟಪದ್ಧತಿಯನ್ನು ಮೂಲೋತ್ಪಾಟನಗೊಳಿಸಲು ದೀಕ್ಷಾಬದ್ಧನಾದನು. ಒಡನೆ ಆತನು ತನ್ನ ವಿಚಾರವನ್ನು ಪುಷ್ಟಿಗೊಳಿಸುವಂತಹ ಹಿಂದಿನ ಆಧಾರಗಳನ್ನೆಲ್ಲಾ ಹುಡುಕಿ ತೆಗೆದು

ಒಂದು ಹಸ್ತಪುಸ್ತಕವನ್ನು ಬರೆದು ಬಂಗಾಳೀ ಭಾಷೆಯಲ್ಲೂ-ಅದರ ತರ್ಜುಮೆಯನ್ನು ಇಂಗ್ಲೀಷ್ ಭಾಷೆಯಲ್ಲೂ ಪ್ರಕಟಿಸಿದನು. ಅದನ್ನು ಕಂಡೊಡನೆಯೇ ರಾಮಮೋಹನರಾಯನ ಮೇಲೆ ಪೂರ್ವಾಚಾರ ಪಂಗಡ, ಗಳವರಿಗೆ ಉಂಟಾದ ರೋಷವು ಅಷ್ಟಿಷ್ಟಲ್ಲ! ಅದಕ್ಕೆ ಅವರು ಮೇಲೆ ಹೇಳಿದ ಆಂಗಿರ ಋಷಿಯ ವಾಕ್ಯವನ್ನೂ ಪುರಾಣದ ಸಂಗತಿಗಳನ್ನೂ ಉದಾ ಹರಿಸಿ ಪ್ರತ್ಯುತ್ತರವನ್ನು ಪ್ರಕಟಿಸಿ, ತಮ್ಮ ಪಕ್ಷವನ್ನು ಸಾಧಿಸಿಕೊಂ ಡರು. ರಾಮಮೋಹನರಾಯನು ಅಷ್ಟಕ್ಕೇ ಬೆದರಿ ಸುಮ್ಮನಾಗದೆ,-ಪತಿಯು ಮೃತನಾದರ, ಸತಿಯು ಆಜನ್ಮವೂ ಬ್ರಹ್ಮಚಾರಿಣಿಯಾಗಿ ಕಾಲಕಳೆಯ ಬೇಕೆಂದಿರುವ ಮನುಪರಾಶರ ಪ್ರಭೃತಿ ಸ್ಮೃತಿಕರ್ತರ ವಾಕ್ಯಗಳನ್ನೂ, ಸದ್ಯಃ ಜನಾಂಗದ ಸ್ಥಿತಿಯಲ್ಲಿ ಜೀವದೊಂದಿಗೇ ಸುಟ್ಟು ಬಿಡುವಂತಹ ಭಯಂಕರ ಪದ್ಧತಿಯನ್ನು ತಪ್ಪಿಸಿ ಮೇಲ್ಕಂಡ ಸೌಮ್ಯ ಪದ್ಧತಿಯನ್ನು ಅವಲಂಬಿಸಬೇಕಾದ ಅವಶ್ಯಕತೆಯನ್ನೂ ಎದೆಕರಗುವಂತೆ ಬರೆದಿದ್ದನು. ಹೀಗೆ ಹನ್ನೆರಡು ವರ್ಷಗಳವರೆಗೆ ವಾಗ್ವಾದಗಳು ನಡೆದ ತರುವಾಯ, ಆ ಧೀರ ಪುರುಷನು ದುರ್ದೈವಿ ವಿಧವೆಯರ ವಿಷಯದಲ್ಲಿ ಇಡುತ್ತಿದ್ದ ಮೊರೆಯು ಆಗ ಗವರ್ನರ್ ಜನರಲ್ ಆಗಿದ್ದ ಲಾರ್ಡ್‌ವಿಲಿಯಂ ಬೆಂಟಂಕ್ ಪ್ರಭುವಿನ ಗಮನಕ್ಕೆ ಬಂದಿತು. ಆತನು ನಮ್ಮ ಕಥಾನಾಯಕನು ವಾದಿ ಸುತ್ತಿದ್ದ ಆ ಸಂಗತಿಯಲ್ಲಿ ಸಹಾನುಭೂತಿಯನ್ನು ವಹಿಸಿ ೧೮೨೯ ನೆಯ ಸಂ|| ದ. ಡಿಶೆಂಬರು ೪ ನೆಯದಿನ 'ಸಹಗಮನವು ನ್ಯಾಯವಿರುದ್ಧವಾದ ಆಚರಣೆಯು. ಅದರಲ್ಲಿ ಭಾಗತೆಗೆದುಕೊಳ್ಳುವ ಪ್ರಜೆಗಳು, ಕ್ರಿಮಿನಲ್ ನ್ಯಾಯಾಸ್ಥಾನಗಳಲ್ಲಿ ಶಿಕ್ಷಿಸಲ್ಪಡುವರು, ಎಂಬೊಂದು ನ್ಯಾಯನಿಬಂಧ ನೆಯನ್ನು ಪ್ರಸಿದ್ಧಿಗೊಳಿಸಿದನು. ಅದನ್ನು ತಿಳಿದು ದಯಾಳುವಾದ ರಾಮಮೋಹನರಾಯನು ಪರಮಾನಂದದಿಂದ ತನ್ನ ಪ್ರತಿಜ್ಞೆಯನ್ನು ಆ ರೂ ಪದಿಂದ ಸಾರ್ಥಕಗೊಳಿಸಿದ ಸರ್ವೇಶ್ವರನನ್ನು ಕೃತಜ್ಞತೆಯಿಂದ ವಂದಿಸಿ ದನು.

ಬಂಗಾಳದ ಕುಲೀನ ಬ್ರಾಹ್ಮಣರಲ್ಲಿ ಬಹು ಪತ್ನಿಯರನ್ನು ಮದುವೆ ಯಾಗುವ ದುರಾಚಾರವೊಂದು ಆಕಾಲದಲ್ಲಿ ಅತಿಪ್ರಬಲ್ಯವಾಗಿದ್ದಿತು. ರಾಮ ಮೋಹನರಾಯನು ಈ ದುರಾಚಾರದಿಂದ ಆಗುತ್ತಿದ್ದ ದುರಂತಕೃತ್ಯಗ

ಳನ್ನು ಕಂಡಿದ್ದನಾದುದರಿಂದ ಪುರುಷನು ಧರ್ಮಶಾಸ್ತ್ರದಿಂದ ವಿಧಿಸಲ್ಪ ಡುವ ಕಾರಣಗಳಿಗಾಗಿ ಅಲ್ಲದೆ, ಒಬ್ಬಳಿಗಿಂತ ಹೆಚ್ಚು ಮಂದಿ ಭಾರ್ಯೆ ಯರನ್ನು-ಮೊದಲನೆಯ ಹೆಂಡತಿಯ ಜೀವಿತ ಕಾಲದಲ್ಲೇ-ಮಾಡಿಕೊಳ್ಳ ಕೂಡದಾಗಿ ಆಧಾರಗಳನ್ನು ಕೊಟ್ಟು, ಲೇಖನಗಳನ್ನು ಬರೆದನು. ಸಹ ಗಮನವು ನಿಂತುದರಿಂದ ಜೀವಿಸಿ ಉಳಿಯುವ ಬಾಲ್ಯ ವಯಸ್ಸಿನ ವಿಧವೆ ಯರು ಪುನಃ ವಿವಾಹ ಮಾಡಿಕೊಳ್ಳಬಹುದೆಂದು ಕೂಡ ಆತನು ಅಭಿಪ್ರಾಯ ಪಟ್ಟಿದ್ದನಂತೆ!

ತನ್ನ ಈ ಸುಧಾರಣಾಸಂಬಂಧ ಅಭಿಪ್ರಾಯಗಳನ್ನೆಲ್ಲ, ಸ್ಪಷ್ಟ ವಾಗಿ ತಿಳಿಸುವಂತೆ ಆತನು 'ಸಂಬಂಧು ಕೌಮುದಿ' ಎಂಬೊಂದು ವಾರ ಪತ್ರಿಕೆಯನ್ನು ಬಂಗಾಳೀ ಭಾಷೆಯಲ್ಲಿ ಪ್ರಕಟಿಸಲಾರಾಂಭಿಸಿದನು. ವಜ್ರಘಾತದಂತೆ ಮೇಲೆ ಮೇಲೆ ಬೀಳುತ್ತಿದ್ದ ಈ ಸುಧಾರಣಾ ಚಳುವಳಿ ಯನ್ನು ಕಂಡು, ಇನ್ನು ಉಳಿಗಾಲವಿಲ್ಲವೆಂದುಕೊಂಡು ಪೂರ್ವಾಚಾರ ಪಕ್ಷದವರು 'ಧರ್ಮಸಭಾ' ಎಂಬ ಹೆಸರಿನ ಒಂದು ಸಂಘವನ್ನು ಸ್ಥಾಪಿಸಿ ಕೊಂಡು ಅದರ ಮುಖಾಂತರವಾಗಿ ರಾಮಮೋಹನರಾಯನ ಅಭಿಪ್ರಾಯಗ ಳನ್ನು ನಿಶಿತಖಾಂತವಾಗಿ ಖಂಡಿಸುತ್ತ-'ಚಂದ್ರಿಕಾ' ಎಂಬ ಹೆಸರಿನ ಪತ್ರಿಕೆ ಯನ್ನು ಪ್ರಕಟಿಸತೊಡಗಿದರು. ಆ ಎರಡಕ್ಕೂ ನಿತ್ಯವೂ ಘನಘೋರ ಸಂಗ್ರಾಮಗಳು ನಡೆಯುತ್ತಲೇ ಇದ್ದುವು

ರಾಜ್ಯಕ್ಕೆ ಇಂಗ್ಲಿಷರೇ ಪ್ರಭುಗಳಾಗಿ ಏರ್ಪಟ್ಟುದರಿಂದ ದೇಶೀಯರು ಅವರಲ್ಲಿ ಬಳಕೆಗೊಂಡು ಅವರ ಅಭಿಪ್ರಾಯಗಳನ್ನು ತಿಳಿದುಕೊಳ್ಳುವುದೂ, ಅವರಿಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸುವುದೂ ಅವಶ್ಯಕವೆಂಬುದು ಆತನ ಯೋಚನೆಗೆ ಬಾರದೆ ಇರಲಿಲ್ಲ. ಆತನು ಇಂಗ್ಲಿಷ್ ಭಾಷೆಯನ್ನು ಅಭ್ಯಸಿ ಸಿದ್ದನಾದುದರಿಂದ, ತನ್ನ ದೇಶೀಯರಿಗೆ ಸದ್ಯಃ ಕಾಲದ ಸ್ಥಿತಿಗತಿಗಳನ್ನು ಅನುಸರಿಸಿ, ಕೇವಲ ಸಂಸ್ಕೃತ ವ್ಯಾಕರಣ ತತ್ತ್ವಶಾಸ್ತ್ರಗಳ ಅಭ್ಯಾಸಕ್ಕಿಂತ ಲೂ ದೇಶಚರಿತ್ರೆ, ಪ್ರಕೃತಿಶಾಸ್ತ್ರ, ಗಣಿತ-ರಸಾಯನ ಶಾಸ್ತ್ರ ಮುಂತಾದು ವುಗಳ ತಿಳಿವಳಿಕೆಯೂ ಹೆಚ್ಚು ಅನುಕೂಲಿಸುವುದೆಂದು ಯೋಚಿಸಿದನು. ಆ ಸಂಬಂಧದಲ್ಲೇ ಆತನು ಆಗ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಆಂ ಹರ್ಸ್ಟ್ ಪ್ರಭುವಿಗೆ ಒಂದು ವಿಜ್ಞಾಪನಾಪತ್ರವನ್ನೂ ಬರೆದುಕೊಂಡನು.

'ಇಂಗ್ಲಿಷ್ ವಿದ್ಯಾಭ್ಯಾಸವನ್ನು ಇಂಡಿಯಾದೇಶದಲ್ಲಿ ಹರಡಬೇಕೇ' ಎಂಬ ವಿಚಾರದಲ್ಲಿ ಹತ್ತು ವರ್ಷಕಾಲ ಚಳುವಳಿ ನಡೆಯಿತು. ಕೊನೆಗೆ ಥಾಮಸ್ ಬೇಬಿಂಗ್‍ಟನ್ ಮೆಕಾಲೇ ಮುಂತಾದ ದೀರ್ಘದರ್ಶಿಗಳು ಆತನ ಯೋಚನೆಯ ಸಾರ್ಥಕತೆಯನ್ನು ಕುರಿತು ಬೆಂಬಲವಾಗಿರಲು, ಆತನು ಮೃತನಾದ ಒಂದೂವರೆ ವರ್ಷಗಳಮೇಲೆ ಎಂದರೆ ೧೮೩೫ನೆಯ ಇಸ್ವಿಯಲ್ಲಿ ಭಾರತೀಯರಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಸಾಧ್ಯವಾದಷ್ಟು ವಿಸ್ತಾರಗೊಳಿಸಬೇಕೆಂದು ಗೊತ್ತಾಯಿತು. ಈ ಮೊದಲೇ ಎಂದರೆ ೧೮೧೭ ನೆಯ ವರ್ಷದಲ್ಲೇ 'ಹಿಂದೂ ಕಾಲೇಜ್' ಎಂಬೊಂದು ಕಲಾಶಾಲೆಯೂ ಆತನ ಪರಿಶ್ರಮದಿಂದಲೇ ಸ್ಥಾಪಿತವಾಗಿದ್ದಿತು. ಅಲ್ಲದೆ ಆತನೇ ತನ್ನ ಸ್ವಂತ ಖರ್ಚಿನಿಂದ ೧೮೨೨ ರಲ್ಲಿ ಒಂದು ಇಂಗ್ಲಿಷ್ ಪಾಠಶಾಲೆಯನ್ನು ಸ್ಥಾಪಿಸಿದ್ದನು. ಬಾಲಕರ ವಿದ್ಯಾಭ್ಯಾಸ ವಿಚಾರದಲ್ಲಿ ಮಾತ್ರ ಆತನು ಶ್ರಮಪಟ್ಟನೆಂದಲ್ಲ. ನಮ್ಮ ದೇಶದಲ್ಲಿ ಸ್ತ್ರೀಯರು ಆದಿಕಾಲದಿಂದಲೂ ವಿದ್ಯಾಭ್ಯಾಸ ಮಾಡುತ್ತಿದ್ದರೆಂಬುದಕ್ಕೆ ಗಾರ್ಗಿ, ಮೈತ್ರೇಯಿ, ಲೀಲಾವತಿ, ಶಾಕುಂತಳಾ ಮೊದಲಾದವರ ಉದಾಹರಣೆಗಳನ್ನು ಕೊಟ್ಟು, ನಮ್ಮ ದೇಶೀಯ ಸ್ತ್ರೀಯರೂ ವಿದ್ಯಾಭ್ಯಾಸಕ್ಕೆ ಅರ್ಹರು ಎಂದು ವಾದಿಸಿದನು. ಆ ಪ್ರಶ್ನೆಯೂ ಆ ಕಾಲದ ಜನರ ಮನಸ್ಸನ್ನು ಆಕರ್ಷಿಸಿದ್ದಿತಾದರೂ-ಬಹು ಕಾಲ ಫಲೋನ್ಮುಖವಾಗಲಿಲ್ಲ. ಮುಂದೆ ಬೆಥ್ಯೂನ್ ಎಂಬೊಬ್ಬ ಆಂಗ್ಲೇಯ ದೊಡ್ಡ ಮನುಷ್ಯನು ಬಂದು, ನಮ್ಮ ಕಥಾನಾಯಕನು ತೆಗೆದುಕೊಂಡಿದ್ದ ಆ ಪ್ರಶ್ನೆಯ ಆವಶ್ಯಕತೆಯನ್ನು ಕುರಿತು ಕೆಲಸ ಮಾಡಿದುದರಿಂದ, ರಾಯನು ಮೃತನಾದ ಹದಿನಾಲ್ಕು ವರ್ಷಗಳಾದ ಮೇಲ ಎಂದರೆ ೧೮೪೭ ರಲ್ಲಿ ಬಾಲಿಕಾ ಪಾಠಶಾಲೆಗಳು ಅಲ್ಲಲ್ಲಿ ಸ್ಥಾಪಿಸಲ್ಪಟ್ಟುವು.—

ಧಾರ್ಮಿಕ ಸಾಂಘಿಕ ವಿದ್ಯಾವಿಷಯಕ ಸುಧಾರಣೆಗಳನ್ನು ಕೈಕೊಂಡು ಶ್ರಮಿಸುತ್ತಿದ್ದ ರಾಮಮೋಹನರಾಯನಿಗೆ ರಾಜಕೀಯ ವಿಚಾರದ ಗಮನವಿಲ್ಲದಿರಲಿಲ್ಲ. ಯಾವ ಜನಾಂಗವಾದರೂ ಸ್ವಾತಂತ್ರ್ಯವಿಲ್ಲದೆ ಯಾವ ಭಾಗದಲ್ಲೂ ಅಭಿವೃದ್ಧಿಗೆ ಬರಲಾರದೆಂದು ಆತನು ಸದಾ ಹೇಳುತ್ತಿದ್ದನು. ಆತನ ರಾಜಕೀಯ ಸ್ವಾತಂತ್ರ್ಯ ಭಾವನೆಯು ತನ್ನ ದೇಶದ ಮುಷ್ಟಿಗೆ ಮಾತ್ರ ಸಂಕುಚಿತವಾದುದಾಗಿರಲಿಲ್ಲ. ಪೃಥ್ವಿಯ ಬೇರೆ ಬೇರೆ ಜನಾಂಗ

ದವರು ತಮ್ಮತಮ್ಮ ಮಟ್ಟಿಗೆ, ಮತ್ತೊಬ್ಬರ ಅಧೀನಕ್ಕೆ ಒಳಪಡದಂತೆ ಸ್ವತಂತ್ರವಾಗಿರಬೇಕೆಂದು ಆತನು ಅಪೇಕ್ಷಿಸುತ್ತಿದ್ದನು. ಅದರಂತೆಯೇ ಆತನು ದೇಶೀಯರಿಗೆ ವೃತ್ತಪತ್ರಿಕಾ ಸ್ವಾತಂತ್ರ್ಯವಿರಬೇಕೆಂದೂ-ಬ್ರಿಟಿಷ್ ಸರ್ಕಾರದವರು ಈ ದೇಶೀಯರ ಕ್ಷೇಮಕ್ಕೆಂದು ಮಾಡುವ ಕಾಯಿದೆ ಕಾನೂನುಗಳನ್ನು ಪ್ರಜೆಗಳ ಪ್ರತಿನಿಧಿಗಳ ಸಲಹೆ-ಅನುಮತಿಗಳನ್ನು ಪಡೆಯದೆ ಮಾಡುವುದು ಸಾಧುವಾದುದಲ್ಲವೆಂದೂ ಹೇಳುತ್ತಿದ್ದನು. ಈಗ್ಗೆ ನೂರುವರ್ಷಗಳ ಕೆಳಗೆ ಈ ಮಹನೀಯನು ರಾಜಕೀಯ ವಿಚಾರದ ಯಾವ ಯಾವ ಸುಧಾರಣೆಗಳು ದೇಶೀಯರ ಅಭಿವೃದ್ಧಿಗೆ ಸಾಧಕವೆಂದು ಹೇಳುತ್ತಿದ್ದನೋ ಅವುಗಳು ಈಗೀಗ ರೂಪುಗೊಳ್ಳುತ್ತಿವೆ. ಹೀಗೆ ನಮ್ಮ ಕಥಾನಾಯಕನು ಆ ಕಾಲದಲ್ಲಿ ನಡೆದ ಎಲ್ಲಾ ಬಗೆಯ ಸುಧಾರಣೆಗಳಿಗೂ ಮುಖ್ಯ ಪ್ರೇರಕನೂ ಕಾರ್ಯಕರ್ತೃವೂ ಆಗಿದ್ದು ಆ ಸಂಧಿಕಾಲದಲ್ಲಿ ದೇಶಾಭಿವೃದ್ಧಿ ಮಾರ್ಗಗಳನ್ನು ಸೂಚಿಸಿ ಹೆಸರುಗೊಂಡನು.



## ಅಧ್ಯಾಯ ೫ "ರಾಜಾರಾಮಮೋಹನರಾಯ್"

ರಾಮಮೋಹನರಾಯನಿಗೆ ಬಹುದಿನಗಳಿಂದಲೂ ಇಂಗ್ಲೆಂಡು ದೇಶಕ್ಕೆ ಪ್ರಯಾಣಮಾಡಬೇಕೆಂಬ ಅಪೇಕ್ಷೆಯಿತ್ತು. ಇದಕ್ಕೆ ೧೮೩೦ ನೆಯ ಸಂ|| ದಲ್ಲಿ, ತಾನಾಗಿಯೇ ಒಂದು ಅನುಕೂಲಸಂದರ್ಭವು ಒದಗಿತು. ಆಗ ಡೆಲ್ಲಿಯಲ್ಲಿದ್ದ ಮೊಗಲಾಯಿ ಕೊನೆಯ ಚಕ್ರವರ್ತಿಯು ತನಗೆ ಈಸ್ಟ್ ಇಂಡಿಯಾ ಕಂಪೆನಿಯವರಿಂದ ಆದ ಅನ್ಯಾಯಗಳನ್ನು ಇಂಗ್ಲೆಂಡುದೇಶದ ರಾಜಸನ್ನಿಧಿಯಲ್ಲಿ ಮುಖತಃ ವಿಜ್ಞಾಪಿಸಲು ಯಾರನ್ನಾದರೂ ಕಳುಹಿಸಬೇಕೆಂದು ಯೋಚಿಸಿದ್ದನು. ಆ ಕೆಲಸವನ್ನು ಉತ್ತಮರೀತಿಯಿಂದ ನೆರವೇರಿಸಲು, ಆಗ ಸರ್ವವಿಧಗಳಿಂದಲೂ ರಾಮಮೋಹನರಾಯನಿಗಿಂತಲೂ ಉತ್ತಮರು ಯಾರೂ ಇರಲಿಲ್ಲ. ಆದುದರಿಂದ ಚಕ್ರವರ್ತಿಯು ಆತನಿಗೆ 'ರಾಜಾ' ಎಂಬ ಬಿರುದನ್ನಿತ್ತು, ಗೌರವಿಸಿ ಪ್ರಯಾಣಕ್ಕಾಗಿ ತಗಲುವ

ನೆಚ್ಚವನ್ನೆಲ್ಲ ತಾನೇ ವಹಿಸಿಕೊಳ್ಳಲೊಪ್ಪಿ, ತನ್ನ ಪರ ವಕೀಲನಾಗಿ ವಿಲಾಯತಿಗೆ ಪ್ರಯಾಣಮಾಡಬೇಕೆಂದು ಆತನನ್ನು ಪ್ರಾರ್ಥಿಸಿದನು. ರಾಯನಿಗೂ ಇಂಗ್ಲೆಂಡಿನಲ್ಲಿ ಆಗಬೇಕಾದ ಇನ್ನೂ ಒಂದೆರಡು ಕೆಲಸಗಳೂ ಇದ್ದುದರಿಂದ ಆತನೂ ಬಹು ಸಂತೋಷದಿಂದ ಹಾಗೆ ಮಾಡಲು ಒಪ್ಪಿದನು.

ರಾಯನು ತನ್ನ ದತ್ತು ಪುತ್ರ ರಾಜಾರಾಮ್‌ರಾಯ್ ಎಂಬಾತನನ್ನೂ ರಾಮರತನ್ ಮುಖರ್ಜಿ ಮತ್ತು ರಾಮ ಹರಿದಾಸ್ ಎಂಬಿಬ್ಬರು ಸೇವಕರನ್ನೂ ಕರೆದುಕೊಂಡು ೧೫-೧೧-೧೮೩೦ ರಲ್ಲಿ ಹಡಗು ಹತ್ತಿ ಇಂಗ್ಲೆಂಡಿಗಾಗಿ ಪ್ರಯಾಣಮಾಡಿದನು. ಆಗಿನ ವಿಲಾಯತಿ ಪ್ರಯಾಣವು ಈಗಿನಷ್ಟು ಸುರಕ್ಷಿತವಾಗಿರಲಿಲ್ಲ-ಶೀಘ್ರಕಾಲದಲ್ಲೂ ಸಾಗುತ್ತಿರಲಿಲ್ಲ. ಆದುದರಿಂದ ಪ್ರಯಾಣದಲ್ಲಿ ಬಹು ಕಷ್ಟಗಳನ್ನೂ ಅಪಾಯಗಳನ್ನೂ ಅನುಭವಿಸಿ ಕೊನೆಗೆ ಬಹು ದಿನಗಳ ಮೇಲೆ ಅವರು ಲಿವರ್‌ಪೂಲಿನಲ್ಲಿ ಇಳಿದರು. ಆತನು ಮಾಡಿದ ಅನೇಕ ಮಹತ್ಕಾರ್ಯಗಳಿಗಾಗಿ ಪ್ರಾಪ್ತವಾಗಿದ್ದ ಕೀರ್ತಿಯು ಆತನಿಗಿಂತಲೂ ಮುಂಚಿತವಾಗಿಯೇ ಅಲ್ಲಿಗೆ ಪ್ರಯಾಣಮಾಡಿದ್ದುದರಿಂದ, ಆ ಸುಪ್ರಸಿದ್ಧ ಹಿಂದೂ ದೇಶೀಯನು ತಮ್ಮ ಪಟ್ಟಣದಲ್ಲಿ ಬಂದಿಳಿದಿರುವನೆಂಬ ವಾರ್ತೆಯು ತಿಳಿದೊಡನೆಯೇ ಅನೇಕಮಂದಿ ಕವಿಗಳೂ ಲೇಖಕರೂ ಸಮಾಜ ಸೇವಕರೂ ಯೂನಿಟೇರಿಯನ್ ಕ್ರೈಸ್ತ ಧರ್ಮೀಯರೂ ಬಂದು ಆತನನ್ನು ಎದುರುಗೊಂಡು ಬಹು ಬಗೆಯಿಂದ ಆತನನ್ನು ಗೌರವಿಸಿದರು. ರಾಜನು ತರುವಾಯ ಅಲ್ಲಿಂದ ಲಂಡನ್ ನಗರಕ್ಕಾಗಿ ಪ್ರಯಾಣ ಹೊರಟು, ಮಾರ್ಗದಲ್ಲಿ ಬಹು ಸಂಖ್ಯೆಯ ಕಾರ್ಖಾನೆಗಳಿಗಾಗಿ ಪ್ರಖ್ಯಾತವಾಗಿರುವ ಮ್ಯಾಂಚೆಸ್ಟರ್ ಪಟ್ಟಣವನ್ನೂ ನೋಡಿಕೊಂಡು, ಬ್ರಿಟಿಷ್ ಚಕ್ರಾಧಿಪತ್ಯದ ರಾಜಧಾನಿಯನ್ನು ಸೇರಿದನು. ಅಲ್ಲಿ, ಈಸ್ಟ್ ಇಂಡಿಯಾ ಕಂಪೆನಿಯ ಡೈರೆಕ್ಟರುಗಳ ಸಭೆಗೆ ಅಧ್ಯಕ್ಷನಾದ ಸರ್. ಜೆ. ಸಿ. ಹಾಬ್‌ಹೌಸ್ ಎಂಬ ಶ್ರೀಮಂತನು ಆತನನ್ನು ಎದುರುಗೊಂಡು ಗೌರವಿಸಿ, ತನ್ನೊಡನೆ ಕರೆದೊಯ್ದು ಇಂಗ್ಲೆಂಡು ದೇಶದ ರಾಜನ ಭೇಟೀ ಮಾಡಿಸಿದನು. ಆ ರಾಜನು ಈ ಹಿಂದ್ ದೇವಿಯ ಅದ್ವಿತೀಯ ಪುತ್ರನಿಗೆ ಹಸ್ತಲಾಘವನ್ನಿತ್ತು ಮನ್ನಿಸಿದುದಲ್ಲದೆ, ತನ್ನ ಮಕುಟಾಭಿಷೇಕ ಮಹೋತ್ಸವದ ಕಾಲದಲ್ಲಿ ಆತನನ್ನೂ

ಆಹ್ವಾನಿಸಿ, ಐರೋಪ್ಯ ಮಕುಟಾಧಿಪತಿಗಳ ಸಾಲಿನಲ್ಲಿ ಪೀಠವಿತ್ತು ಗೌರವಿಸಿದನು. ರಾಮಮೋಹನರಾಯನು ಅಲ್ಲಿದ್ದಾಗ್ಗೆ ಹಿಂದೂದೇಶದ ರಾಜ್ಯಭಾರ ಸಂಬಂಧ 'ಜ್ಯುಡಿಷಿಯಲ್' ಮತ್ತು 'ರೆವಿನ್ಯೂ' ವಿಷಯಕ ಆಡಳಿತಗಳ ವಿಷಯಗಳಲ್ಲಿ ಸಾಕ್ಷ್ಯ ಕೊಡಬೇಕಾಗಿ ಕೋರಲ್ಪಡಲು, ರಾಜನು, ಆಬಗ್ಗೆ ಏರ್ಪಟ್ಟ ಒಂದು ಕಮಿಟಿಯ ಮುಂದೆ, ತನ್ನ ಮಾತೃದೇಶದಲ್ಲಿನ ಆಡಳಿತಗಳ ವಿಷಯದಲ್ಲಿ ನಿರ್ಭಯವಾಗಿ ತನ್ನ ಅಭಿಪ್ರಾಯಗಳನ್ನು ತಿಳಿಸಿ, ಆ ಭಾಗದಲ್ಲಿ ಉತ್ತಮ ರೀತಿಯ ಸುಧಾರಣೆಗಳಾಗಬೇಕೆಂದು ಸಲಹೆ ಕೊಟ್ಟನು. ಅದೂ ಅಲ್ಲದೆ, ಆತನಿಗೆ ಅತ್ಯಂತ ಪ್ರೀತಿಪಾತ್ರವಾದ ಸಹಗಮನ-ನಿಷೇಧಕ ಕಾನೂನು ಪೂರ್ವಾಚಾರ ಪರಾಯಣರ 'ಅಪ್ಪೀಲಿ'ನಿಂದ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಮಂಜೂರಾತಿಯನ್ನು ಪಡೆಯಲಿಕ್ಕಾಗಿ ಆ ಕಾಲದಲ್ಲೇ ಬಂದಿತ್ತು. ರಾಜನು ಆ ಸಂದರ್ಭದಲ್ಲೇ ಪಾರ್ಲಿಮೆಂಟ್ ಸಭೆ ಮನೆಯಲ್ಲಿ ಹಾಜರಿದ್ದು, ಆ ವಿಷಯದಲ್ಲೂ ತನ್ನ ಸಾಕ್ಷ್ಯವಿತ್ತು ಅದನ್ನು ಅತ್ಯಂತ ಸುಲಭ ರೀತಿಯಿಂದಲೇ ಮಂಜೂರು ಮಾಡಿಸಿದನು.

ರಾಜನು ೧೮೩೧ನೆಯ ಸಂ|| ದಲ್ಲಿ ಫ್ರಾನ್ಸ್ ದೇಶವನ್ನು ಸಂದರ್ಶಿಸಿ, ಅಲ್ಲಿಯ ರಾಜನಾಗಿದ್ದ ಲೂಯಿ ಫಿಲಿಪ್ ಎಂಬಾತನ ಭೇಟಿ ಮಾಡಿ, ಗೌರವಿಸಲ್ಪಟ್ಟುದಲ್ಲದೆ ಎರಡುಸಾರಿ ಆತನ ಸಹಪಙ್ಕ್ತಿಭೋಜನಕ್ಕೂ ಆಹ್ವಾನಿತನಾಗಿದ್ದನು. ಅಲ್ಲಿಯ 'ರಾಯಲ್ ಏಷಿಯಾಟಿಕ್ ಸೊಸೈಟಿ'ಯವರು ಆತನನ್ನು ತಮ್ಮ ಗೌರವ ಸಭ್ಯನನ್ನಾಗಿ ಆರಿಸಿಕೊಂಡರು. ರಾಯನು ಮುಂದೆ ಎರಡು ವರ್ಷಕಾಲ ಅಲ್ಲಿ ವಾಸಿಸಿ ಫ್ರೆಂಚ್ ಭಾಷೆಯನ್ನೂ ಅಭ್ಯಾಸಮಾಡಿ, ನಂತರ ೧೮೩೩ರಲ್ಲಿ ಲಂಡನ್ ನಗರಕ್ಕೆ ಹಿಂದಿರುಗಿ 'ಇಂಡಿಯಾ ಬಿಲ್' ಎಂಬ ಈಸ್ಟಿಂಡಿಯಾ ಕಂಪೆನಿಯ ಸನ್ನದು ಪಾರ್ಲಿಮೆಂಟಿನಿಂದ ಅಂಗೀಕೃತವಾಗುವ ಸಂದರ್ಭದಲ್ಲಿ ಎದುರಿಗಿದ್ದನು. ಈ ಸಾರಿ ಲಂಡನ್ ನಗರದಲ್ಲಿದ್ದಷ್ಟು ದಿನವೂ ಆತನು ಅನೇಕ ಹಿಂದೂಧರ್ಮಗ್ರಂಥಗಳನ್ನು ಇಂಗ್ಲಿಷ್ ಭಾಷೆಗೆ ತರ್ಜುಮೆಮಾಡಿ ಪ್ರಕಟಿಸುವುದರಲ್ಲೂ, ಕ್ಯಾಂಪ್‌ಬೆಲ್, ರೋಸ್ಕನ್, ರಾಸ್ಕೊ, ಬೆನ್‌ಥ್ಯಾಂ, ಡಾ|| ಕಾರ್ಪೆಂಟರ್ ಮುಂತಾದ ಆಂಗ್ಲೇಯ ವಿದ್ಯಾನಿಧಿ - ತತ್ವನಿಧಿಗಳೊಂದಿಗೆ ಮಾನವವರ್ಗದ ಉನ್ನತಿಗೆ ಸಾಧಕವಾದ ಸಂಭಾಷಣೆಗಳಲ್ಲೂ ವಿನಿಯೋಗವಾಯಿತು.

೧೮೩೩ ರಲ್ಲಿ ಪುನಃ ಡಾ|| ಕಾರ್ಪೆಂಟರ್ ಎಂಬ ಮಿತ್ರನ ಆಹ್ವಾನವನ್ನು ಮನ್ನಿಸಿ, ಆತನ ಪುತ್ರಿ, ಕುಮಾರಿ ಕಾರ್ಪೆಂಟರ್ ಎಂಬಾಕೆಯೊ ಜೊತೆಗೆ ಬರಲು, ಬ್ರಿಸ್ಟಲ್ ನಗರಕ್ಕಾಗಿ ಪ್ರಯಾಣಮಾಡಿದನು. ಅಲ್ಲಿಗೆ ಬಂದಿಳಿದ ಕೆಲವು ದಿನಗಳೊಳಗಾಗಿಯೇ ಎಂದರೆ ಸೆಪ್ಟಂಬರು ೧೦ ನೆಯ ದಿನ ಆತನಿಗೆ ಜ್ವರ ಪ್ರಾಪ್ತವಾಯಿತು. ಜೊತೆಗಿದ್ದವರೂ ಮಿತ್ರರೂ ಅತ್ಯುತ್ತಮ ವೈದ್ಯ ಸಹಾಯವನ್ನು ದೊರಕಿಸಿ ಉಪಚರಿಸಿದರಾದರೂ, ರೋಗವು ಸಾಧ್ಯವಾಗದೆ ದಿನದಿನಕ್ಕೆ ಪ್ರಕೋಪಸ್ಥಿತಿಗೆ ಏರುತ್ತಿದ್ದಿತು. ಕೊನೆಗೆ ಅದೇ ತಿಂಗಳು ೨೭ ನೆಯ ರಾತ್ರೆ ೨-೩೦ ಗಂಟೆಗೆ ಆತನ ಪವಿತ್ರಾತ್ಮವು ಭೌತಿಕ ಕಳೇಬರವನ್ನು ಬಿಟ್ಟು ಊರ್ಧ್ವ ಲೋಕಕ್ಕೆ ಹೊರಟು ಹೋಯಿತು. ಅಂತ್ಯ ಸಂಸ್ಕಾರಗಳು ಹಿಂದೂಪದ್ಧತಿಗೆ ಅನುಸಾರವಾಗಿಯೇ ಜರುಗಿದುವಾದರೂ ಆ ದೇಶದ ಆಚಾರವನ್ನು ಅನುಸರಿಸಿ ಶವದಹನಕ್ಕೆ ಅವಕಾಶವಿಲ್ಲದೆ ಹೂಳಲೇಬೇಕಾಯಿತು. ಮುಂದೆ ಹತ್ತು ವರ್ಷಗಳ ತರುವಾಯ ಫ್ರಾನ್ಸ್ ದೇಶವನ್ನು ಸಂದರ್ಶಿಸಿದ ಬಾಬು ದ್ವಾರಕಾನಾಥಠಾಕೂರನು, ಆತನ ಸಮಾಧಿಯಿದ್ದ ಸ್ಥಳದಲ್ಲಿ ಒಂದು ಭವ್ಯವಾದ ಮಂಟಪವನ್ನು ಕಟ್ಟಿಸಿ, ಅಲ್ಲೊಂದು ಶಿಲಾ ಲೇಖವನ್ನೂ ನೆಡಿಸಿದನು. ಅದರಲ್ಲಿ ಈ ಅರ್ಥವು ಬರೆಯಲ್ಪಟ್ಟಿದೆ

**“ ಈ ಶಿಲೆಯ ಕೆಳಗಡೆ, ಜಗದೀಶ್ವರನಲ್ಲಿ ಅದ್ವಿತೀಯವೂ ನಿಷ್ಕಲ್ಮಷವೂ ನಿಶ್ಚಲವೂ ಆದ ಸತ್ಯಭಾವದಿಂದ ವರ್ತಿಸಿ, ತನಗೆ ಲಭ್ಯವಾಗಿದ್ದ ಅಸಾಮಾನ್ಯ ಪ್ರಜ್ಞಾವೈಭವವನ್ನು ಮಾನವ ಕೋಟಿಯ ಸೇವೆಗಾಗಿ ಅರ್ಪಿಸುತ್ತಾ, ಅಹರ್ನಿಶಿ ಶ್ರಮಿಸಿ, ಸ್ವದೇಶೀಯರ ಧಾರ್ಮಿಕ, ಸಾಮಾಜಿಕ, ನೈತಿಕ, ರಾಜಕೀಯ ಸುಧಾರಣೆಗಳಲ್ಲಿ ಅಗ್ರಗಾಮಿಯಾಗಿ ಅನಾಥಸ್ತ್ರೀಯರ ಪ್ರಾಣಾಂತ್ಯಕಾರಿಯಾಗಿದ್ದ ಸಹಗಮನ ಪದ್ಧತಿಯನ್ನು ನಿರ್ಮೂಲಗೊಳಿಸಿ, ಸಾಕಾರ ಪೂಜೆಯನ್ನು ನಿಷೇಧಿಸಿ-ನಿರಾಕಾರ ಭಾವದಿಂದ ಲೋಕಪಿತನನ್ನು ಭಜಿಸಬೇಕೆಂಬ ಸಿದ್ಧಾಂತವನ್ನು ಸ್ಥಾಪಿಸಿ, ಯಾವ ಮಹಾತ್ಮನು ತನ್ನ ಆದ್ಯಂತ ಜೀವಿತವನ್ನೂ ಭಗವದ್ವೈಭವವನ್ನೂ ಮಾನವನ ಕ್ಷೇಮವನ್ನು ಉನ್ನತಿಗೊಳಿಸಲಿಕ್ಕಾಗಿಯೇ ವ್ಯಯ ಮಾಡಿದನೋ ಆ ಶ್ರೀ ರಾಜಾರಾಮಮೋಹನರಾಯನ ಭೌತಿಕ ಕಳೇಬರವು ಸಮಾಧಿ ಮಾಡಲ್ಪಟ್ಟಿದೆ ”**

# ಉ ಪ ಸ ಂ ಹಾ ರ

ರಾಜಾರಾಮಮೋಹನರಾಯನು ಯಾವುದೊಂದು ಮತನಿರ್ಬಂಧಕ್ಕೆ ಒಳಪಟ್ಟವನಲ್ಲವಾದರೂ ನಾಸ್ತಿಕನಲ್ಲ. ಉಪನಿಷತ್ತು ಮುಂತಾದ ಆರ್ಷೇಯ ಗ್ರಂಥಗಳಿಂದ ಪ್ರತಿಪಾದ್ಯನಾಗುವ ಜಗದೀಶ್ವರನೊಬ್ಬನನ್ನೇ ನಿಷ್ಕಲ್ಮಷ ಮನೋಭಾವದಿಂದ ಧ್ಯಾನಿಸಿರೆಂದನಲ್ಲದೆ, ಸಾಕಾರ ಉಪಾಸನೆಯನ್ನು ಬಿಡಿರೆಂದ ಮಾತ್ರಕ್ಕೆ ಪಾಷಂಡಿಗಳಾಗಿರೆನ್ನಲಿಲ್ಲ. ಹಿಂದೂ ದೇಶದ ಪ್ರಗತಿಯೂ ಆದ್ಯಂತ ವೃದ್ಧಿಯು ಪ್ರಗತಿ ಮಾರ್ಗವನ್ನು ಬೆಂಬತ್ತಿ ನಡೆಯದಿದ್ದರೆ, ಮುಂದೆ ಪರಿಣಾಮವಾಗಲಾರದಾದುದರಿಂದ ಈ 'ಕೂಪಸ್ಥ ಮಂಡೂಕ' ವಿಚಾರದ ಅಲ್ಪಭಾವಗಳನ್ನು ಬದಿಗೊತ್ತಿ ಹೃದಯವನ್ನೂ ಕರಣೇಂದ್ರಿಯಗಳನ್ನೂ ಮಾನವ ಸೇವೆಯಲ್ಲಿ ಕಳೆಯಿರೆಂಬುದನ್ನು ತನ್ನ ಕಾರ್ಯಕ್ರಮಗಳಿಂದಲೇ ಘಂಟಾಘೋಷವಾಗಿ ಪ್ರದರ್ಶಿಸಿ ಬೋಧಿಸಿದನು. ತನ್ನ ಜನ್ಮವಾದ್ಯಂತವೂ ಅಹರ್ನಿಶಿ ಶ್ರಮಿಸಿ ತನ್ನ ದೇಶೀಯರಿಗೆ ಧಾರ್ಮಿಕ ನೈತಿಕ, ಸಾಮಾಜಿಕ ರಾಜಕೀಯ ವಿಚಾರಗಳಲ್ಲಿ ಅಗ್ರಗಾಮಿಯೂ ಮಾರ್ಗದರ್ಶಿಯೂ ಆದನು.

'ಕರ್ಮಯೋಗ - ಕರ್ಮಯೋಗ' ವೆಂದು ಬಾಯಲ್ಲಿ ಮಾತ್ರ ಗಿಳಿ ಪಾರದಂತೆ ಉಚ್ಚರಿಸುತ್ತ, ಸ್ವಾರ್ಥಸಾಧನೆಯಲ್ಲಿ ಮುಳುಗಿ ತೇಲುತ್ತಿರುವ ವಾಚಾವೇದಾಂತಿಗಳಂತಲ್ಲದೆ, ಯಾವ ಮಹನೀಯನು ಬಾಯಿಂದ ನ, ದಂತೆಯೇ ಕೈಯಿಂದಲೂ ಆಚರಿಸಿ ತ್ರಿಕರಣ ಶುದ್ಧಿಯಾಗಿ ಕರ್ಮಯೋಗಿಯಾಗಿದ್ದನೋ, ಆತನ ಪವಿತ್ರಾತ್ಮ ಸೂರ್ಯನು ಭಾರತದೇಶದ ಪ್ರಗತಿ ಮಾರ್ಗವನ್ನು ಬೆಳಕು ಮಾಡುತ್ತಾ ಪ್ರಕಾಶಿಸುತ್ತಿರಲಿ. ಭಾರತ ದೇಶೀಯರು ತಮ್ಮ ಕ್ಷುದ್ರ ಭಾವಗಳನ್ನು ನೀಗಿ ಆ ಮಾರ್ಗದರ್ಶನ ಪದಚಿಹ್ನೆಗಳಲ್ಲೇ ನಡೆಯಲು ಜಿತಮನಸ್ಕರಾಗಿ ಸಂಕಲ್ಪಿಸಲಿ. ಸರ್ವೇಶ್ವರನು ಆ ಮಹಾತ್ಮನ ಆಶಯದಲ್ಲಿದ್ದಂತಹ - ದೈಹಿಕ ಮಾನಸಿಕ ರಾಜಕೀಯ ಸ್ವಾತಂತ್ರ್ಯ ಸ್ಥಿತಿಗಳನ್ನು ಗಳಿಸುವ ದಾರ್ಢ್ಯವನ್ನು ಭಾರತಪುತ್ರ - ಪುತ್ರಿಯರಿಗೆ ದಯಪಾಲಿಸಲಿ

ತಥಾಸ್ತು.



ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ಶ್ರೀ ಕೃಷ್ಣಭಕ್ತಾಗ್ರಣಿ

ಶ್ರೀ ಕೃಷ್ಣಚೈತನ್ಯ ದೇವ

—✦ ಶ್ರೀರಾಮಸಹಾಯಂ ✦—

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## ( ಸಚಿತ್ರ ಮಾಸ ಪುಸ್ತಕಾವಳಿ )

**ಮುನ್ನುಡಿ : —**

ಶ್ರೀ ಕೃಷ್ಣ ಭಕ್ತಿ ಸಾಮ್ರಾಜ್ಯವನ್ನು ಪ್ರಪಂಚದಲ್ಲ ಸ್ಥಾಪಿಸಿದ ಮಹಾಪುರುಷರ ಪಙ್ತಿಯಲ್ಲಿ ನಮ್ಮ ಪ್ರಕೃತ ಕಥಾನಾಯಕರಾದ ಶ್ರೀ ಕೃಷ್ಣ ಚೈತನ್ಯರು ಅಗ್ರಗಣ್ಯರು. ಶ್ರೀ ಕೃಷ್ಣಮೂರ್ತಿಯ ಪಾದಾರವಿಂದಗಳಲ್ಲಿ ಅನಿರ್ವಚನೀಯವಾದ ಪ್ರೇಮಾಮೃತ ವರ್ಷವನ್ನು ಸುರಿಸಿ, ಆತನ ದಯೆಗೆ ಪಾತ್ರರಾದ ಪುಣ್ಯ ಶರೀರಿಗಳು ಶ್ರೀ ಗೌರಾಂಗ ದೇವರು. (ಶ್ರೀ ಕೃಷ್ಣ ಚೈತನ್ಯರು) ವಂಶ ಪಾರಂಪರ್ಯವಾಗಿ ತರ್ಕಶಾಸ್ತ್ರಾಧ್ಯಯನಾದಿಗಳಿಂದ ಗಳಿಸಿದ್ದ ಪಾಂಡಿತ್ಯ, ಪ್ರೌಢಿಮೆ, ಪ್ರತಿಷ್ಠೆಗಳನ್ನು ಮಾತ್ರವಲ್ಲದೆ, ಐಶ್ವರ್ಯವನ್ನು ಕೂಡ ನೀಗಿ ಶ್ರೀಕೃಷ್ಣಸ್ವಾಮಿಯಲ್ಲಿ ನೆಲೆಸಿದ ಚಿತ್ತದಿಂದ ತನ್ಮಯರಾಗಿ ಜನಾಂಗ ಹೃದಯದಲ್ಲ ಸಿಂತ ಮಹಾಮಹಿಮರು ನಮ್ಮ ಕಥಾನಾಯಕರು !

ಅನಾದಿಕಾಲದಿಂದಲೂ, ಬಂಗಾಳಾದೇಶವು ಭಾರತದೇಶದ ಇತರ ಭಾಗಗಳಿಗಿಂತಲೂ, ನ್ಯಾಯಶಾಸ್ತ್ರಾ(ತರ್ಕಶಾಸ್ತ್ರ) ಧ್ಯಯನಕ್ಕೆ ಮುಖ್ಯ ಪೀಠವೆಂದು ಪ್ರಸಿದ್ಧಿಯನ್ನು ಪಡೆದಿರುವುದು ಆ ದೇಶಕ್ಕೆ ಸೇರಿದ'ನದೀಯ' ವೆಂಬ ಮಂಡಲವು ಕ್ರಿ. ಶ. ೧೫ ನೆಯ ಶತಮಾನದಲ್ಲ ಸಂಸ್ಕೃತ ವಿದ್ಯಾಭ್ಯಾಸಕ್ಕೆ ಅತಿಶಯ ಪ್ರಸಿದ್ಧಿಯನ್ನು ಪಡೆದಿದ್ದಿತು. ತರ್ಕಶಾಸ್ತ್ರವನ್ನು ಆಮೂಲಾಗ್ರವಾಗಿ ಅಭ್ಯಸಿಸಿ, ಅಲ್ಲಿಯ ನಿವಾಸಿಗಳಾದ ದಿಗ್ದಂತಿ ಪಂಡಿತರನೇಕರು ದೇಶದೇಶಗಳಲ್ಲಿ ಬಿರುದು ಬಹುಮತಿಗಳನ್ನು ಪಡೆದು, ತಮ್ಮ ಪಾಂಡಿತ್ಯದಿಂದಲೂ, ತನ್ಮೂಲವಾಗಿ ಗಳಿಸಿದ ಅಮಿತೈಶ್ವರ್ಯದಿಂದಲೂ ಕೊಬ್ಬಿ ಮತ್ತಾರನ್ನೂ ಲಕ್ಷಿಸದೆ ಮೆರೆಯುತ್ತಿದ್ದರು 'ವಾಗ್ವಾದದಲ್ಲ ನಮ್ಮನ್ನು ಜಯಿಸುವವರಾರು' ಎಂಬ ಜಾಡ್ಯದ ಕೆಚ್ಚುಗಳು ಅವರ ತಲೆಯನ್ನು ತಿರುಗಿಸಿದ್ದುದರಿಂದ, ಅವರಿಗೆ ದೇವರು ಪರಲೋಕ ಮುಂತಾದ ವಿಚಾರಗಳು ತಲೆಗೆ ಏರುವಂತಿರಲಲ್ಲ ವೇದಾಂತವಿಚಾರವಾದರೂ ಈ ತಾರ್ಕಿಕರಿಗೆ ಕೇವಲ ವಿಲಾಸಯೋಗ್ಯ ಸಂಭಾಷಣೆಗೆ ಅನುಕೂಲವಾಗುತ್ತಿತ್ತಲ್ಲದೆ, ಅದರಿಂದ ಮತ್ತಾವಬಗೆಯ ಪ್ರಯೋಜನವೂ ಉಂಟಾಗುತ್ತಿರಲಲ್ಲ ಇತ್ತ ಪಂಡಿತವರ್ಗಕ್ಕೆ ಬುದ್ಧಿಯ ಹುಚ್ಚು ಹೀಗೆ ತಲೆಗೇರಿರಲು ಅತ್ತ ಜನಸಾಮಾನ್ಯವು ಶಕ್ತಿಪೂಜಾ ಧುರಂಧರರಾಗಿ ಮೇಕೆ ಕುರಿ ಕೋಳಿಗಳನ್ನು ಬಲಿಯಿತ್ತು, ತಿಂದು ಕುಡಿದು ಮೆರೆಯುತ್ತ ಯಥೇಷ್ಟ ಇರುತ್ತಿದ್ದರು, ಈ ಮಧ್ಯೆ ಬಡ 'ಭಕ್ತಿ' ಪಂಥವು ಅತ್ತ ಪಂಡಿತರ ತರ್ಕವಾದದಕಡೆಗಾಗಲೀ, ಅಥವ ಇತ್ತ ಶಕ್ತಿಪೂಜಕರ ಕುಡಿತ ಕುಣಿತಗಳಕಡೆಗಾಗಲಿ ಇಣಿಕಿ ನೋಡಲರಿಯದೆ ದಿನದಿನಕ್ಕೆ ಕೊರಗಿ ಕೃಶವಾಗಿ ಮರಣೋನ್ಮುಖವಾಗುತ್ತಿದ್ದಿತು

ಹೀಗೆ ಬಂಗಾಳೀ ಭೂಪ್ರದೇಶವೆಲ್ಲವೂ ತರ್ಕವಾದದ ವಾತಾವರಣದಿಂದಲೇ ವ್ಯಾಪ್ತವಾಗಿ, ಎತ್ತ ನೋಡಿದರೂ ಮತವಿಚಾರವಾಗಲಿ ಶ್ರದ್ಧಾಭಕ್ತಿಗಳೆಂಬ ಸೊಲ್ಲಾಗಲೀ ಕೇಳಿಸದಿದ್ದ ಆ ಕಾಲದಲ್ಲಿ ಉದ್ಭವಿಸಿ, ಶ್ರೀಕೃಷ್ಣಮೂರ್ತಿಯನ್ನು ಹೃದಯೇಶನನ್ನಾಗಿ ಸ್ವೀಕರಿಸಿ, ಸ್ವತಃ ತಾವು ವಿಷ್ಣುಭಕ್ತಿಯೆಂಬ ಆನಂದಸಾಗರದಲ್ಲಿ ಓಲಾಡಿದುದಲ್ಲದೆ, ತಮ್ಮಂತೆಯೇ ಪ್ರಜಾಸಮೂಹವನ್ನೂ ಪುನೀತವನ್ನಾಗಿ ಮಾಡಿದ ಕೀರ್ತಿಯು ಶ್ರೀ ಚೈತನ್ಯರ ಪವಿತ್ರನಾಮಕ್ಕೆ ಸೇರುವುದು. ಜನಮನದಲ್ಲಿ ಆಗ ಆ ಮಹಾಪುರುಷರಿಂದ ಬಿತ್ತಲ್ಪಟ್ಟ ಭಕ್ತಿಬೀಜವು, ಮೊಳಕೆಯಾಗಿ, ಗಿಡವಾಗಿ ಮರವಾಗಿ ಬೆಳೆದು ಪುಷ್ಪಫಲ ಭರಿತವಾಯಿತು. ಅದರ ದಿವ್ಯ ಫಲಗಳನ್ನು ಸವಿದು ಅನೇಕ ಆರ್ತಜೀವಿಗಳು ತೃಪ್ತರಾಗಿ ಜನ್ಮಸಾರ್ಥಕ್ಯವನ್ನು ಹೊಂದಿದರು.

ಭಗವಾನ್ ಚೈತನ್ಯರ ಭೌತಿಕ ಕಳೇಬರವು ಈ ಲೋಕವನ್ನು ಬಿಟ್ಟು ಹೋಗಿ ನಾಲ್ಕು ಶತಮಾನಗಳಾದರೂ ಅವರ ಕೀರ್ತಿ ಶರೀರವು ಆದ್ಯಂತ ವಂಗದೇಶದ ಪ್ರಜಾಹೃದಯದಲ್ಲಿ ಈಗಲೂ ಮನೆಮಾಡಿಕೊಂಡಿದೆ ಅವರು ಅನುಗ್ರಹಿಸಿದ ಭಕ್ತಿಪಂಥವು ಈಗಲೂ ಲಕ್ಷಾಂತರ ಮಂದಿಯ ಪಾರತ್ರಿಕ ಜೀವನಪಥವನ್ನು ಬೆಳಗಿಸುವಲ್ಲಿ ಚಂದ್ರಕಾಂತಿಯಂತೆ ಸಹಾಯಮಾಡುತ್ತಿದೆ. ಜನಸಮೂಹದ ದೃಷ್ಟಿಯಲ್ಲಾದರೋ ಶ್ರೀ ಚೈತನ್ಯರು ಭಗವದವತಾರವೆಂದೇ ಪರಿಗಣಿಸಲ್ಪಟ್ಟಿದ್ದಾರೆ ಕವಿಗಳೂ-ಲೇಖಕರೂ ಅವರ ದೈವಿಕ ಭಾವಸೌಂದರ್ಯವನ್ನು ಅಗಾಧವಾಗಿ ವರ್ಣಿಸುತ್ತಾರೆ ಚಿತ್ರಕಾರರೂ ಶಿಲ್ಪಿಗಳೂ ತಮ್ಮ ವಿದ್ಯಾಕುಶಲತೆಯನ್ನೆಲ್ಲ ವ್ಯಯಮಾಡಿ ಅವರ ಚಿತ್ರ-ಪ್ರತಿಮೆಗಳನ್ನು ಸಿದ್ಧಗೊಳಿಸಿ ಧನ್ಯರಾದೆವೆಂದುಕೊಳ್ಳುತ್ತಾರೆ. ಆ ಪುಣ್ಯವಂತರು ಹಾಕಿಕೊಟ್ಟ ಮೇಲುಪಙ್ಕ್ತಿಯನ್ನು ಅನುಸರಿಸಿ ನಿತ್ಯಸಂಕೀರ್ತನಗಳನ್ನು ನಡೆಯಿಸಿ ಜನಸಾಮಾನ್ಯವು ಲೌಕಿಕ ತಾಪತ್ರಯದಿಂದ ಬಿಡುಗಡೆಹೊಂದಿ ತೃಪ್ತರಾಗುತ್ತಾರೆ. ಶ್ರೀ ಚೈತನ್ಯ ಚರಿತಾಮೃತ ಪಠನೆಯಿಂದ ಪಾಮರ-ಪಂಡಿತ, ಬಡವ-ಬಲ್ಲಿದರೆಂಬ ಭೇದವಿಲ್ಲದೆ ಸಕಲರೂ ಆನಂದದಿಂದ ವಿಸ್ಮೃತರಾಗುತ್ತಾರೆ. ಹೀಗೆ ಕೇವಲ ಪಾಂಡಿತ್ಯ ಪ್ರೌಢಿಮೆಗಳೆಂಬ ಪ್ರಚಂಡ ಸೂರ್ಯಕಿರಣಗಳಿಂದ ಒಣಗಿ ಬೆಂಡಾಗಿದ್ದ ಜನಾಂಗದ ಹೃದಯದಲ್ಲಿ ಭಕ್ತಿವರ್ಷವನ್ನು ಸುರಿಸಿ ತಂಪನ್ನು ಹುಟ್ಟಿಸಿ ಅಲ್ಲಿ ಶ್ರೀಕೃಷ್ಣನಾಮ ಬೀಜಗಳನ್ನು ಬಿತ್ತಿದ ಈ ಮಹಾಮಹಿಮರ ಪವಿತ್ರಚರಿತ್ರೆಯನ್ನೂ ಕರ್ನಾಟಕ ಮಹಾಜನರು ಯಥಾಪೂರ್ವವಾಗಿ ಆದರಿಸಿ ಪ್ರೋತ್ಸಾಹಿಸಲೆಂದು ಕೋರುತ್ತೇವೆ.

ಬೆಂಗಳೂರು ನಗರ,
ತಾ|| ೨೦—೧೧—೧೯೩೭.

ಇತಿ ಸುಜನ ವಿಧೇಯ,
**ಯಂ. ರಾಮರಾವ್.**

ಶ್ರೀರಾಮಸಹಾಯಂ

ಶ್ರೀ ಕೃಷ್ಣ ಭಕ್ತಾಗ್ರಣಿ

# ಶ್ರೀ ಕೃಷ್ಣ ಚೈತನ್ಯ ದೇವ



## ಅಧ್ಯಾಯ ೧ "ಜನನ-ಬಾಲ್ಯ-ವಿದ್ಯಾಭ್ಯಾಸ"

ಜಗಜ್ಜನಕನ ಪಾದಕಮಲಗಳಲ್ಲಿ ಭಕ್ತಿಭಾಗ್ಯವನ್ನು ಗಳಿಸುವ ಮಾರ್ಗವನ್ನು ಪ್ರಜಾಸಮೂಹಕ್ಕೆ ಬೋಧಿಸಿದ ಅನೇಕಮಂದಿ ಭಕ್ತಶ್ರೇಷ್ಠರೂ, ಇತರ ಅನೇಕ ದೇಶೋದ್ಧಾರಕರಂತೆಯೇ, ನಮ್ಮ ಮಾತೃಭೂಮಿಯಾದ ಈ ಭಾರತದೇಶವನ್ನು ಸೇವಿಸಿರುತ್ತಾರೆ. ಪ್ರಪಂಚದಲ್ಲಿ ಶಾಂತಿಸ್ಥಾಪನೆಯ ಮಹತ್ಕಾರ್ಯವು, ಈ ಭಕ್ತಿಪಂಥದವರಿಂದ ನಡೆದಂತೆ ಮತ್ತೊಬ್ಬರಿಂದ ನಡೆಯದು ಏಕೆಂದರೆ, ಅವರ ಕಾರ್ಯವು ಹೃದಯಮೂಲದಿಂದ ಹೊರಟ ಪ್ರೇಮದಿಂದಲೇ ಪ್ರಾರಂಭಿಸಿ ಮುಂದಡಿಯಿಡುವುದು. ಶಾಂತಿಸ್ಥಾಪನೆಗೆಂದು ಹಲವರು ಹಲವು ಬಗೆಯಿಂದ ಪ್ರಯತ್ನಿಸಿದ ಉದಾಹರಣೆಯು ಲೋಕಚರಿತ್ರೆಯಲ್ಲಿ ದೊರೆವುದು. ಕೆಲವರು ಅಗಾಧ ಸೈನ್ಯಸಮೂಹವನ್ನಿಟ್ಟುಕೊಂಡು ಶತ್ರುವರ್ಗಕ್ಕೆ ಭೀತಿಪ್ರದರಾಗಿ ತನ್ಮೂಲಕ ಶಾಂತಿಯನ್ನು ಸ್ಥಾಪಿಸಿದ್ದೇವೆಂದು ಭ್ರಾಂತಿಗೊಳ್ಳುವರು. ಕೆಲವರು ಆಕಾಶ ಪಾತಾಳಗಳನ್ನು ಒಂದುಗೂಡಿಸುವಂತಹ ರಾಜನೀತಿ ಯುಕ್ತಿಪ್ರತ್ಯುಕ್ತಿಗಳನ್ನು ನಡೆಯಿಸಿ ಪ್ರತಿಪಕ್ಷದ ಅನೇಕರನ್ನು ಕಾರಾಗಾರಗಳಲ್ಲಿ ಇರಿಸಿ ತನ್ಮೂಲಕವೂ ಶಾಂತಿಯನ್ನು ಸ್ಥಾಪಿಸಿದ್ದೇವೆ ಎಂದು ಹೆಮ್ಮೆಗೊಳ್ಳುವರು. ಬೇರೆ ಕೆಲವರು, ಅನ್ಯಾಯಾರ್ಜಿತವಾದ ದ್ರವ್ಯವನ್ನು,—ಬೊಗಳುವ ನಾಯಿಯ ಬಾಯಿಗೆ ಎಸೆವ ರೊಟ್ಟಿಯ ತುಂಡಿನಂತೆ - ತಮ್ಮ ಕಾರ್ಯ

ಕಲಾಪಗಳನ್ನು ಕುರಿತು ಆಕ್ಷೇಪಿಸುವವರ ಬಾಯ್ಗಳಿಗೆ ಎಸೆದು ಅವರನ್ನು ಸುಮ್ಮನಾಗಿಸಿ, ಆ ಮೂಲಕ ಶಾಂತಿಯನ್ನು ಸ್ಥಾಪಿಸಿದ್ದೇವೆ ಎಂದು ತಮಗೆ ತಾವೇ ಹೆಚ್ಚಳಪಡುವರು. ಇನ್ನೂ ಕೆಲವರು ತಮ್ಮ ಹೃದಯವು ವಿಷಪೂರಿತವಾಗಿದ್ದರೂ, ಕಳ್ಳತನದ ಹುಸಿನಗೆಯನ್ನೂ ಬಹು ಬೆಡಗಿನ ಮೃದು ವಾಕ್ಯಗಳನ್ನೂ ನುಡಿಯುತ್ತ ಹಲಕೆಲವು ಕಾರಣಾಂತರಗಳನ್ನು ಹೇಳುತ್ತ ಕಾಲಯಾಪನೆ ಮಾಡಿ, ತಮ್ಮ ಪಾಂಡಿತ್ಯವನ್ನು ತಾವೇ ಮೆಚ್ಚಿ ಕೊಂಡು ಹಾಗೂ ಶಾಂತಿಸ್ಥಾಪಕರಾದೆವೆಂದುಕೊಳ್ಳುವರು. ಆದರ ಅಶಾಂತರನ್ನು ಹಾಗೆ ಬಲವಂತದಿಂದ ಸುಮ್ಮನಿರಿಸುವುದು ಶಾಂತತೆಯಲ್ಲ, ಅದು ಸಂಪೂರ್ಣ ಅಶಾಂತತೆಯ ಪ್ರಚ್ಛನ್ನಾವಸ್ಥೆಯು! ಅದು, ಪಾತ್ರೆಯ ಕೆಳಗಡೆ ಕಿಚ್ಚನ್ನಿಟ್ಟು, ಆ ಕಿಚ್ಚಿನಿಂದುಂಟಾದ ಪಾತ್ರೆಯಲ್ಲಿನ ಶಾಖವು ಹೊರಕ್ಕೆ ಹೋಗಲುಳ್ಳ ಅದರ ಬಾಯನ್ನು ಮುಚ್ಚಿದಂತಿರುವುದು. ಪಾತ್ರೆಯ ಬಾಯನ್ನು ಮುಚ್ಚಿದ ಮಾತ್ರದಿಂದಲೇ ಒಲೆಯಲ್ಲಿ ಉರಿಯುತ್ತಿದ್ದ ಕಿಚ್ಚಿನ ಜ್ವಾಲೆಯು ಕಡಮೆಯಾಗಬಲ್ಲುದೆ? ಆದುದರಿಂದ ಕೇವಲ ಬಾಯನ್ನು ಮುಚ್ಚಿಸುವುದರಿಂದ ಮಾತ್ರ ಉಂಟುಮಾಡುವ ಅಪಭ್ರಂಶದ ಶಾಂತತೆಯು ಬಹಿರಂಗದ ಅಶಾಂತತೆಗಿಂತಲೂ ಸಹಸ್ರ ಮಡಿ ಭಯಂಕರವಾಗಿರುವುದು.

ಪ್ರಪಂಚದ ಇತರ ದೇಶಗಳಲ್ಲಿ ಶಾಂತಿಸ್ಥಾಪನೆಯ ಕಾರ್ಯವು ಯಾವ ಮಾರ್ಗದಿಂದಲಾದರೂ ನಡೆಯುತ್ತಿರಲಿ! ಭಾರತದೇಶದಲ್ಲ ಮಾತ್ರ, ಅದು ನಡೆವ ಮಾರ್ಗವೇ ಬೇರೆ ಬೇರೆ ದೇಶಗಳಲ್ಲ ಲಕ್ಷಾಂತರ ಸೈನ್ಯವನ್ನೂ ಕೋಟ್ಯಾಂತರ ದ್ರವ್ಯವನ್ನೂ, ಅದ್ವಿತೀಯ ಸಂಧಿ ವಿಗ್ರಹಿಗಳಾದ ತಂತ್ರ ವಿಶಾರದರನ್ನೂ ಗಳಿಸಿ ಇಟ್ಟುಕೊಂಡ ರಾಜಾಧಿರಾಜರು ಸಾಧಿಸಲರಿಯದ ಈ ಕಾರ್ಯವನ್ನು ನಮ್ಮ ದೇಶದಲ್ಲಿ ಕೇವಲ ಏಕಾಂಗಿಗಳಾಗಿ, ಕೌಪೀನ ಧಾರಿಗಳಾಗಿ, ನಿತ್ಯಭಿಕ್ಷೆಯಿಂದ ಜೀವಿಸಿದ ಒಬ್ಬೊಬ್ಬ ಭಕ್ತಶ್ರೇಷ್ಠರು ಸಾಧಿಸಿಬಿಟ್ಟಿದ್ದಾರೆ. ಅಷ್ಟುಮಾತ್ರವಲ್ಲ.—ಅಂತಹ ಪ್ರಬಲ ರಾಜಾಧಿರಾಜರನ್ನೂ ಆ ಭಕ್ತರು ಪಾದಾಕ್ರಾಂತರನ್ನಾಗಿ ಮಾಡಿಕೊಂಡಿದ್ದಾರೆ. ಇದಕ್ಕೆ ಕಾರಣವೇನೆಂದು ಸ್ವಲ್ಪ ವಿಚಾರಿಸಬೇಕಾಗಿದೆ.

ಭಗವಂತನು ಪ್ರೇಮಸ್ವರೂಪನು ಎಂಬ ವಿಷಯವು ನಿರ್ವಿವಾದ ವಸ್ತು! ಯಾರು ನಂಬಲಿ-ಮತ್ತಾರು ನಂಬದಿರಲಿ, ಪ್ರೇಮಸ್ವರೂಪಿಯಾದ

ಆ ಭಗವಂತನು ಜಗದ್ವ್ಯಾಪಿಯೆಂಬುದಾದರೂ ನಿರ್ವಿವಾದ ಸಂಗತಿಯೇ! ಆದುದರಿಂದ ಭಗವಂತನಿಂದ ವ್ಯಾಪ್ತವಾದ ಅಂತಹ ಈ ಪ್ರಪಂಚದಲ್ಲಿ ಉಂಟಾಗ ಬೇಕಾದ ಶಾಂತಿಯು ಪ್ರೇಮಮೂಲಕಸ್ಥಾಪನೆಯಾಗಬೇಕಲ್ಲದೆ ಅನ್ಯಥಾ ಇಲ್ಲ. ಆದರ ದುರ್ದೈವ ವಶವಾಗಿ ಈ ಪ್ರೇಮವೇ ಅಪಾರ್ಥ ಮಾಡಿಕೊಳ್ಳಲ್ಪಟ್ಟಿರುವುದರಿಂದ ಅದೇ ಪ್ರಪಂಚದಲ್ಲುಂಟಾಗುವ ಸಮಸ್ತ ಅನಾಹುತಗಳಿಗೂ ಮೂಲಕಾರಣವಾಗಿದೆ. ಹಿಂದೊಂದುವೇಳೆ ಪ್ರೇಮವೆಂಬುದೇ ಅವಸ್ಥಾಭೇದದಿಂದ ಭಕ್ತಿಯೆಂದೂ ಕರೆಯಲ್ಪಡುವುದೆಂದು ಹೇಳಿದ್ದೇವಲ್ಲವೆ! ಅದು ವ್ಯರ್ಥಾಲಾಪವಲ್ಲ. ಆದರೆ ಲೋಕವು, ಪತ್ನಿ ಪುತ್ರ ವಿತ್ತ ಪಶುಧಾನ್ಯ ಮುಂತಾದುವುಗಳಲ್ಲಿ ಮನುಷ್ಯನಿಗಿರುವ ಆಸೆ ಅಥವ ಮೋಹವನ್ನೇ ಪ್ರೇಮವೆಂದು ಭ್ರಾಂತಿಗೊಂಡಿರುವುದು.—ಆದರೂ ಪತ್ನೀಪುತ್ರಾದಿಗಳಲ್ಲಿ ತೋರಿಸುವ ಮೋಹದಲ್ಲಿ ಪ್ರೇಮದ ಸೋಂಕು ಇಲ್ಲವೆಂದಲ್ಲ, ಇದೆ. ಪ್ರೇಮವು ಅಲ್ಲಿಂದಲೇ ಪ್ರಾರಂಭವಾಯಿತೆನ್ನಬಹುದು. ಆದರೆ ಅಲ್ಲೇ ಅಂತ್ಯವಾಗಬಾರದು ಮಾತ್ರ! ಪ್ರೇಮ-ಮೋಹಗಳ ಸ್ವರೂಪವನ್ನು ಇನ್ನೂ ವಿಶದವಾಗಿ ತಿಳಿಸಲು ಪ್ರೇಮವೆಂಬ ಪದಾರ್ಥವನ್ನು ಸಸ್ಯಸಾರಕ್ಕೆ ಹೋಲಿಸೋಣ. ಗಿಡದ ಬೆಳೆವಣಿಗೆಗೆಂದು ಅದರ ಬುಡಕ್ಕೆ ಗೊಬ್ಬರ ಗೋಡುಗಳನ್ನು 'ಹಾಕುತ್ತಾರಲ್ಲವೆ! ಗಿಡವು ತನ್ನ ಬೇರುಗಳಿಂದ ಆಕರ್ಷಿಸಿ ಆಯ್ದುಕೊಂಡ ಆ ಸಾರವನ್ನು ತನ್ನ ಆಹಾರಕ್ಕಾಗಿ ಉಪಯೋಗಿಸಿಕೊಳ್ಳುವುದು. ಆ ಗೊಬ್ಬರದ ಸಾರವು ಗಿಡದ ಬೇರು ಕಾಂಡ ತೊಗಟೆ ಎಲೆ ರೆಂಬೆ ಹೂವು ಹೀಚುಕಾಯಿಗಳೆಂಬ ಹಲವು ಭಾಗಗಳಿಗೆ ಹಲವು ಬಗೆಯ ಆಹಾರ ವಸ್ತುಗಳನ್ನಿತ್ತು, ಕೊನೆಗೆ ಅದೇ ರಸವೇ ಸುವಾಸನೆಯಾದ ರಸಪೂರಿತವಾದ ರುಚಿಕರವಾದ ಫಲವೂ ಆಗಿರುವುದು. ಆದರ ರುಚಿಕರವಾದ ಆ ಮಧುರ ರಸವು ವಾಸ್ತವವಾಗಿ ಗೊಬ್ಬರದ ಸಾರದಿಂದಲೇ ಬಂದುದೆಂಬುದರಲ್ಲಿ ಸಂದೇಹವಿಲ್ಲವಷ್ಟೆ! ಆದರೆ ಆ ರಸವೇ ಗೊಬ್ಬರದಸಾರವೆಂದಾಗಲೀ - ಅಥವ ಆ ಗೊಬ್ಬರದಸಾರವೇ ರುಚಿಕರವಾದ ಫಲದ ರಸವೆಂದಾಗಲೀ ಹೇಳಬಹುದೇ? ಭಕ್ತನು ಭಗವಂತನ ಪಾದಾರವಿಂದಗಳಲ್ಲಿ ಪ್ರದರ್ಶಿಸುವ ಭಕ್ತಿಯೆಂಬ ನಾಮಧೇಯವುಳ್ಳ ಆ ಪ್ರೇಮವು ಮೇಲ್ಕಂಡ ಮಧುರ ಫಲದ ರುಚಿಕರವಾದ ರಸದಂತಿದ್ದರೆ, ಪತ್ನೀಪುತ್ರಾದಿಗಳ ವಿಷಯದಲ್ಲಿ ತೋರಿ

ಸುವ-ಮೋಹವೆಂಬ ನಾಮಾಂತರದಿಂದ ಕರೆಯಲ್ಪಡುತ್ತಿರುವ ನಮ್ಮ ಈ ಪ್ರೇಮವು ಗೊಬ್ಬರದ ಸಾರದಂತಿರುವುದೆಂದು ಹೇಳಬಹುದು. ಇದಂತಿರಲಿ, ಫಲವನ್ನು ಕೊಡುವ ಸಾಮರ್ಥ್ಯವು ಕೇವಲ ಗಿಡಕ್ಕೆ ಹಾಕುವ ಗೊಬ್ಬರದಲ್ಲೇ ಆಗಲೀ ಅಥವ ಮತ್ತಾವುದೊಂದು ಹೊರಗಿನ ಸಾಧನದಲ್ಲೇ ಆಗಲಿ ಇದೆಯೆಂದು ಎಣಿಸುವುದು ತಪ್ಪು! ಈ ಸಂದರ್ಭದಲ್ಲಿ ಗೊಬ್ಬರ ಮುಂತಾದುವುಗಳಿಂದ ಫಲದ ರುಚಿಯಲ್ಲಾಗುವ ಹೆಚ್ಚು ಕಡಮೆಗಳು ಅಷ್ಟು ಗಣನೀಯವಾದುವಲ್ಲ. ಆ ಶಕ್ತಿಯು ಮುಖ್ಯವಾಗಿ ಇರುವುದು ಬೀಜದಲ್ಲಿ. ಬಿತ್ತಿದುದು ಮಾವಿನ ಬೀಜವಾದರ ಮಾವಿನ ಫಲವು ಬರುವುದು, ಬೇವಿನ ಬೀಜವಾದರೆ ಬೇವಿನ ಫಲವು ಬರುವುದು! ಮಾವಿನ ಫಲವಾಗಲಿ-ಬೇವಿನ ಫಲವಾಗಲಿ ಗೊಬ್ಬರ ಗೋಡುಗಳನ್ನು ಒದಗಿಸಿದಷ್ಟೂ ಅಧಿಕವಾಗುವುದು. ಕಾಯಿಗಳೂ ಹಣ್ಣುಗಳೂ ಹೆಚ್ಚಾಗುವುವು-ಪುಷ್ಟವಾಗುವುವು. ಆದರ ಬೇವಿನ ಬೀಜವನ್ನು ಬಿತ್ತಿದ್ದರ, ಯಾವ ಭೌತಿಕ ಸಾಧನವೂ ಅದರಿಂದ ಮಾವಿನ ಫಲವು ದೊರವಂತೆ ಮಾಡಲಾರದು. ಇದು ನಿಜವೆಂಬ ವಿಷಯದಲ್ಲಿ ಸಂದೇಹವಿಲ್ಲವಷ್ಟೆ! ಪ್ರಪಂಚದ ಇತರ ದೇಶಗಳಲ್ಲಿ ಶಾಂತಿಸ್ಥಾಪನೆಗೆಂದು ನಡೆವ ಪ್ರಯತ್ನಗಳು ಬೇವಿನಬೀಜವನ್ನು ಬಿತ್ತಿ ಅದರಿಂದ ಮಾವಿನಹಣ್ಣು ಬರಬೇಕೆಂದು ಅಪೇಕ್ಷಿಸಿದಂತೆ ಇರುವುದು. ಆದರೆ ನಮ್ಮಲ್ಲಿ ಶಾಂತಿ ಸ್ಥಾಪನೆಗೆ ತೊಡಗುವ ಮೇಲ್ಕಂಡ ಭಕ್ತವರ್ಯರು ಮಾನವರ ಹೃದಯಕ್ಷೇತ್ರಗಳನ್ನೇ ಆಕರ್ಷಿಸಿ ಅವುಗಳಲ್ಲಿ ಉತ್ತಮವಾದ ಭಗವದ್ಭಕ್ತಿಯೆಂಬ ಬೀಜಗಳನ್ನೇ ಬಿತ್ತುವರಾದುದರಿಂದ ಅವುಗಳಿಂದ ಯುಕ್ತಕಾಲದಲ್ಲಿ ಅತ್ಯುತ್ತಮ ಫಲಗಳೇ ಬಂದು ಲೋಕವನ್ನು ತೃಪ್ತಿಗೊಳಿಸುವುವು. ಇಂತು ಶಾಂತಿಯು ದೃಢಮೂಲವಾಗುವುದು. ಹೀಗಿರುವಲ್ಲ ಬೇವು ಹುಣಸೆ ಜಾಲ ಮುಂತಾದ ದುಷ್ಟ ಬೀಜಗಳಿಂದ ಹುಟ್ಟಿದ ಮರಗಳಂತೆ, ಕೇವಲ ಶುಷ್ಕತರ್ಕವೂ ದಯಾವಿಹೀನವಾದ ವಾಚಾವೇದಾಂತದ ಒಣಪಾಂಡಿತ್ಯವೂ ವ್ಯಾಪಿಸಿ, ದೇಶದಲ್ಲಿ ಭಗವದ್ಭಕ್ತಿಯು ಲೋಪಿಸಿ ಅಶಾಂತತೆಯು ಹಬ್ಬಿದ್ದ ಆ ಕಾಲದಲ್ಲ ಶಾಂತಿದಾಯಕವಾದ ಭಗವದ್ಭಕ್ತಿಯೆಂಬ ಉತ್ತಮ ಬಿತ್ತಗಳನ್ನು ಬಿತ್ತಿ ಬೆಳೆಗೊಂಡ ಅತ್ಯುತ್ತಮ ತೋಟಗಾರರು ನಮ್ಮ ಕಥಾನಾಯಕರು. ಅವರ ಈ ಪವಿತ್ರ ಚರಿತ್ರೆಯು

ಪಾಪನಾಶಕವಾದುದು, ಪುಣ್ಯಪ್ರದವಾದುದು, ಮಂಗಳಕರವಾದುದು, ಆದುದರಿಂದ ಅದನ್ನು ಶ್ರದ್ಧಾಭಕ್ತಿಯುತರಾಗಿ ಓದೋಣ!

ನಮ್ಮ ಚರಿತ್ರನಾಯಕರ ಪೂರ್ವಿಕರು ಬಹು ಕಾಲದಿಂದ ಒರಿಸ್ಸಾ ದೇಶದಲ್ಲಿನ ಜಯಪುರವೆಂಬಲ್ಲಿ ವಾಸಮಾಡುತ್ತಿದ್ದರು. ಆದರೆ ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ ಮಧುಕರ ಮಿಶ್ರನೆಂಬಾತನು ಅಲ್ಲಿಯ ರಾಜನ ಭಯಕ್ಕಾಗಿ ಆ ಸ್ಥಳವನ್ನು ಬಿಟ್ಟು ಅಸ್ಸಾಂದೇಶದ ಶಿಲ್ಹೆಟ್ ಎಂಬ ಸ್ಥಳಕ್ಕೆ ಹೊರಟುಹೋಗಿ, ಮುಂದೆ ಬಹು ದಿನಗಳು ಅಲ್ಲೇ ವಾಸವಾಗಿದ್ದನು. ಮಧುಕರ ಮಿಶ್ರನಿಗೆ ನಾಲ್ಕುಮಂದಿ ಮಕ್ಕಳು. ಅವರಲ್ಲಿ ಹಿರಿಯನಿಗೆ ಉಪೇಂದ್ರನೆಂದು ಹೆಸರು. ಆತನು ಕಮಲಾವತಿಯೆಂಬ ತನ್ನ ಧರ್ಮಪತ್ನಿಯಲ್ಲಿ ಕಂಸಾರಿ, ಪರಮಾನಂದ, ಪದ್ಮನಾಭ, ಸರ್ವೇಶ್ವರ, ಜಗನ್ನಾಥ, ಜನಾರ್ದನ, ತ್ರೈಲೋಕ್ಯನಾಥ ಎಂಬ ಏಳು ಮಂದಿ ಮಕ್ಕಳನ್ನು ಪಡೆದು ಸಾತ್ವಿಕನಾಗಿ ವೈದಿಕವೃತ್ತಿಯಿಂದ ಕಾಲಯಾಪನೆ ಮಾಡಿಕೊಂಡಿದ್ದನು. ಈತನ ಐದನೆಯ ಮಗನಾದ ಜಗನ್ನಾಥ ಅಥವ ಪುರಂದರ ಮಿಶ್ರನು ೧೪೬೬ ನೆಯ ಸಂವತ್ಸರದ ಸುಮಾರಿನಲ್ಲಿ ಅಸ್ಸಾಂ ಪ್ರಾಂತವನ್ನು ಬಿಟ್ಟು ಹೊರಟು, ಬಂಗಾಳದ 'ನದೀಯ' ಮಂಡಲಕ್ಕೆ ಸೇರಿದ ನವದ್ವೀಪವೆಂಬ ಪಟ್ಟಣದಲ್ಲಿ ನೆಲೆಸಿದನು. ಆಗ ನವದ್ವೀಪವು ಬಹು ಬ್ರಾಹ್ಮಣ್ಯಭರಿತವಾಗಿ – ಬಹುಮಂದಿ ಪಂಡಿತ ಜನದಿಂದ ಶೋಭಿತವಾಗಿ ದೊಡ್ಡ – ಅಗ್ರಹಾರವೆಂಬಂತೆ ಪ್ರಕಾಶಿಸುತ್ತಿದ್ದಿತು. ಪುರಂದರ ಮಿಶ್ರನಿಗೆ ಅದೇ ನವದ್ವೀಪದ ನಿವಾಸಿಯೂ ಅದ್ವಿತೀಯ ನ್ಯಾಯಶಾಸ್ತ್ರ ಪಾರಂಗತನೂ ಆದ ನೀಲಾಂಬರ ಚಕ್ರವರ್ತಿ ಎಂಬಾತನ ಮಗಳಾದ ಶಚೀದೇವಿಯೆಂಬ ಕನ್ಯಾನಿಶ್ಚಯವಾಗಿ, ವಿವಾಹವು ಬಹು ವಿಜೃಂಭಣೆಯಿಂದ ನೆರವೇರಿತು. ಶಚೀದೇವಿಯೊಂದಿಗೆ ಬಹು ಸಂತೋಷದಿಂದ ಸಂಸಾರ ಯಾತ್ರೆಯನ್ನು ಸಾಗಿಸುತ್ತಿದ್ದ ಆತನಿಗೆ ಎಂಟು ಮಂದಿ ಹೆಣ್ಣು ಮಕ್ಕಳು ಜನಿಸಿದರಾದರೂ ದುರ್ದೈವವಶದಿಂದ ಅವರಲ್ಲಿ ಒಂದು ಶಿಶುವೂ ದಕ್ಕದೆ, ಎಲ್ಲವೂ ಚಿಕ್ಕತನದಲ್ಲೇ ಮೃತವಾದುವು ತರುವಾಯ ಒಂಬತ್ತನೆಯ ಗರ್ಭದಲ್ಲಿ ವಿಶ್ವರೂಪನೆಂಬ ಹೆಸರಿನ ಒಂದು ಗಂಡು ಮಗುವಾಯಿತು. ಅಪೂರ್ವವಾಗಿ ಜನಿಸಿದ ಆ ಮಗುವಿಗೆ ಬಹು ಪ್ರೇಮದಿಂದ ವಿದ್ಯಾಬುದ್ಧಿಗಳನ್ನು ಕಲಿಸಿ, ಹದಿನಾರನೆಯ

ವಯಸ್ಸಿನಲ್ಲಿ ಮದುವೆ ಮಾಡಬೇಕೆಂದು ಪ್ರಯತ್ನ ನಡಿಸುತ್ತಿರಲು, ವಿಶ್ವರೂಪನು ಸಂಸಾರದಲ್ಲಿ ಜಿಹಾಸೆಗೊಂಡು ವಿರಾಗಿಯಾಗಿ ಮನೆಯಿಂದ ಹೊರಟು ನಡೆದು ದಕ್ಷಿಣ ದೇಶದಲ್ಲೆಲ್ಲೋ ಒಂದು ಮಠದಲ್ಲಿ ಸನ್ಯಾಸವನ್ನು ತೆಗೆದುಕೊಂಡುಬಿಟ್ಟನು. ಮುಂದೆ ಅವನ ವೃತ್ತಾಂತವು ಏನಾಯಿತೆಂದು ತಂದೆತಾಯಿಗಳಿಗೆ ತಿಳಿಯಲೇ ಇಲ್ಲ —

ಶಚೀದೇವಿಗೆ ಹತ್ತನೆಯ ಸಾರಿಯೂ ಗರ್ಭಧಾರಣೆಯಾಯಿತು. ಈ ಸಾರಿ ಬಸುರಿದ್ದಾಗ ಎಂದಿನಂತಲ್ಲದೆ, ಆಕೆಗೆ ಬಾಯಿಂದ ಹೇಳಲಾಗದ ಒಂದು ಬಗೆಯ ಆನಂದವು ಮನಸ್ಸಿಗೆ ತೋರುವುದು. ಮನಸ್ಸು ಪ್ರಾಪಂಚಿಕವಾದ ವಸ್ತುಗಳೊಂದನ್ನೂ ಅಪೇಕ್ಷಿಸದೆ ಸದಾ ಭಗವದ್ಭಜನೆ ಮಾಡಬೇಕೆಂದು ಕಾತರಿಸುವುದು. ಹೀಗೆ ನವಮಾಸಗಳೂ ಸುರಕ್ಷಿತವಾಗಿ ಕಳೆಯಲು, ಮುಂದೆ *ಕ್ರಿ.ಶ. ೧೪೮೬ ನೆಯ ಫೆಬ್ರುವರಿ ೧೮ ನೆಯ ದಿನ ಒಂದು ಪುರುಷ ಶಿಶು ಪ್ರಸವವಾಯಿತು. ಆ ದಿನ ಚಂದ್ರಗ್ರಹಣವಿದ್ದುದಲ್ಲದೆ, ಶಿಶುಜನನವು ಗ್ರಹಣಕಾಲದಲ್ಲೇ ಆಯಿತು. ಗ್ರಹಣಪ್ರಯುಕ್ತ ಗಂಗಾಸಾಗರ ಸಂಗಮದ ಆ ಪ್ರದೇಶವೆಲ್ಲ ದೇಶದೇಶಾಂತರಗಳ ಲಕ್ಷಾಂತರ ಮಂದಿ ಆಸ್ತಿಕ ಬ್ರಾಹ್ಮಣರಿಂದ ನಿಬಿಡವಾಗಿ, ಸರ್ವತ್ರನಾಮಸಂಕೀರ್ತನೆಯೇ ತುಂಬಿಹೋಗಿದ್ದುದರಿಂದ ತಾಯಿಯ ಗರ್ಭದಿಂದ ಭೂಪತನವಾದೊಡನೆಯೇ ಶಿಶುವಿನ ಕರ್ಣಕುಹರದಲ್ಲಿ ಹರಿನಾಮಘೋಷವೇ ಪ್ರಥಮ ಪ್ರವೇಶಮಾಡಿತು. ಪ್ರಸವಗೃಹದಲ್ಲಿ ಹತ್ತು ದಿನಗಳು ಕಳೆದು ಮಂಗಳಸ್ನಾನವಾಗಲು, ಜಗನ್ನಾಥಮಿಶ್ರನು ಬಂಧು ಬಾಂಧವರನ್ನೆಲ್ಲ ನೆರಯಿಸಿ ಮಹೋತ್ಸವವನ್ನು ನಡೆಯಿಸಿ ತನ್ನ ಕುವರನಿಗೆ ವಿಶ್ವಂಭರನೆಂದು ನಾಮಕರಣ ಮಾಡಿದನು ಆದರ ಆ ಮಗುವಿನ ಹಿಂದೆ ಹುಟ್ಟಿದ ಮಕ್ಕಳೆಲ್ಲಾ

---

*ಮೇಲೆ ಕೊಟ್ಟಿರುವ ಜನ್ಮದಿನವು ರಾಯ್‌ಸಾಹೇಬ್ ದಿನೇಶಚಂದ್ರಸೇನ್ರಿಂದ ಬರೆಯಲ್ಪಟ್ಟು ಕಲ್ಕತ್ತಾ ವಿಶ್ವವಿದ್ಯಾಲಯದಿಂದ ಪ್ರಕಟವಾಗಿರುವ „ಚೈತನ್ಯ ಚರಿತ್ರ" ಎಂಬ ಗ್ರಂಥಕ್ಕೆ ಅನುಸಾರವಾಗಿರುವುದು ಆದರೆ ಸುಪ್ರಸಿದ್ಧ ಚರಿತ್ರಕಾರರಾದ ಶ್ರೀ ಯದುನಾಥ ಸರ್ಕಾರ್ ಎಂ ಎ ಎಂಬ ಗೃಹಸ್ಥರು ಬರೆದಿರುವ „ಚೈತನ್ಯ ಚರಿತಾಮೃತ" ವೆಂಬ ಗ್ರಂಥದಲ್ಲಿ ಚೈತನ್ಯರ ಜನ್ಮದಿನವು ೧೪೮೫ ನೆಯ ಫೆಬ್ರುವರಿ ಅಥವ ಮಾರ್ಚಿ ಎಂದು ಕೊಡಲ್ಪಟ್ಟಿದೆ.

ಸತ್ತುಸತ್ತು ಹೋದುದರಿಂದ ಆ ಮಗುವಿನ ಗತಿಯಾದರೂ ಹಾಗೆಯೇ ಆಗಬಹುದೆಂದು ಬಗೆದು ತಾಯಿಯೂ ಇತರ ಹೆಂಗಸರೂ ಅದನ್ನು ನಿಮೆ (ಅಲ್ಪಾಯುಷ್ಯ)ಯೆಂದು ಕರೆಯುತ್ತಿದ್ದರು. ಶಚೀದೇವಿಯ ಆ ಮಗುವು ಗೌರವರ್ಣದಿಂದ ಅತಿಶಯ ಸುಂದರವಾಗಿ ನೇತ್ರಾನಂದಕರವಾಗಿದ್ದುದರಿಂದ ನೆರೆಹೊರೆಯವರು ಅದನ್ನು ಗೌರಾಂಗ ಎಂದು ಸಂಬೋಧಿಸುತ್ತ ಬಂದರು ಆ ಮಗುವಿನ ಜನ್ಮಕಾಲದ ಮುಹೂರ್ತವನ್ನು ಪರೀಕ್ಷಿಸಿ ನೋಡಿದ ಜ್ಯೋತಿಷ್ಕರು, ಚಂದ್ರಗ್ರಹಣಕಾಲದಲ್ಲಿ ಸರ್ವತ್ರ ಹರಿನಾಮ ಸಂಕೀರ್ತನೆಯು ನಡೆಯುತ್ತಿದ್ದ ಸುಮುಹೂರ್ತದಲ್ಲಿ ಜನನವಾದ ಅವನು ಮುಂದೆ ಪ್ರಬುದ್ಧ ವಯಸ್ಸಿನಲ್ಲಿ ಶ್ರೀ ಹರಿಭಕ್ತಿಯನ್ನು ಪ್ರಚಾರಗೊಳಿಸುವುದರಲ್ಲೇ ನಿರತನಾಗಿ ಭಕ್ತಿ ಪಂಥದ ಆಚಾರ್ಯನಾಗಿ ಪರಿಣಮಿಸುವನೆಂದು ಭವಿಷ್ಯ ಹೇಳಿದರು

ಬಹುಮಂದಿ ಮಕ್ಕಳು ಸತ್ತು ಯೌವನವು ಗಳಿತವಾಗುವ ವಯಸ್ಸಿನಲ್ಲಿ ಹುಟ್ಟಿದ ಮಗುವಾದ್ದರಿಂದ ವಿಶ್ವಂಭರನಮೇಲೆ ತಾಯಿತಂದೆಗಳಿಗಿದ್ದ ಪ್ರೇಮಕ್ಕೆ ಎಲ್ಲೆಯಿರಲಿಲ್ಲ. ಅವನ ಬಾಲಲೀಲೆಯು ಅವರ ಹಿಂದಿನ ಮಕ್ಕಳ ದುಃಖವನ್ನೆಲ್ಲ ನೀಗಿಸಿ ಅವರನ್ನು ಸಂತೋಷಾಂಬುಧಿಯಲ್ಲಿ ತೇಲಿಸಿತು. ವೃದ್ಧಾಪ್ಯದ ಏಕಪುತ್ರ ವಿಷಯವಾದ್ದರಿಂದ ತಾಯಿತಂದೆಗಳು ವಿಶ್ವಂಭರನನ್ನು ಬಹು ಮುದ್ದಿನಿಂದ ಕಣ್ಣಿನ ರೆಪ್ಪೆಗಳೊಳಗೆ ಮುಚ್ಚಿಟ್ಟುಕೊಂಡಷ್ಟು ಜಾಗರೂಕತೆಯಿಂದ ಕಾಪಾಡುತ್ತಿದ್ದರು. ಇದರಿಂದ ಶಿಶುತನದ ಲೀಲೆಗಳು ಬಾಲ್ಯದ ಚೇಷ್ಟೆಗಳಾಗಿಯೂ ಮಾರ್ಪಟ್ಟುವು. ಬಾಲಕ ವಿಶ್ವಂಭರನು ಮನೆಗೆ ಯಾರಾದರೂ ಪಂಡಿತರು ಬಂದು ಕುಳಿತಿದ್ದರೆ ಅವರ ರುಮಾಲನ್ನು ಹಿಡಿದೆಳೆದು ಅಣಕಿಸುವನು. ಅವರ ಪುಸ್ತಕಗಳನ್ನು ಬಚ್ಚಿಟ್ಟು ಅವರು ಹುಡುಕಿ ತೊಂದರಪಡುತ್ತಿರಲು ಹುಸಿನಗೆ ನಗುತ್ತ ಹೆಚ್ಚಳಪಡುವನು. ಅಲ್ಲದೆ ತುಂಟಹುಡುಗರ ಸಹವಾಸದಿಂದ ಬೀದಿಯಲ್ಲಿ ಕೂಗುವುದು ಹಾರುವುದು ಓಡುವುದು ಮುಂತಾದ ಚೇಷ್ಟೆಗಳಲ್ಲೇ ಕಾಲ ಕಳೆಯುವನು. ತನ್ನ ಮಗನ ಚೇಷ್ಟೆಗಳಿಗಾಗಿ ಬೇಸತ್ತ ಜಗನ್ನಾಥಮಿಶ್ರನು ಒಂದುದಿನ ಅವನನ್ನು ಕರೆದು, ಹೀಗೇಕೆ ಚೇಷ್ಟೆಮಾಡುವೆ ಎಂದು ಆಕ್ಷೇಪಿಸಲು,— 'ತಂದೆಯೇ ಒಳ್ಳೆಯನಡತೆ ಗಾಂಭೀರ್ಯ ಮುಂತಾದುವುಗಳನ್ನು ಕಲಿ

ಯಲು ಅನುಕೂಲವಾಗುವಂತೆ ನನ್ನನ್ನು ಪಾಠಶಾಲೆಗೆ ಕಳುಹಿಸಲಿಲ್ಲವಾದು ದರಿಂದ ಹೀಗೆಲ್ಲ ಆಯಿತು' ಎಂದು ಪ್ರತ್ಯುತ್ತರ ಕೊಟ್ಟನು. ತಂದೆಯು ತನ್ನ ಮಗನ ಮಾತನ್ನು ಕೇಳಿ ಆಶ್ಚರ್ಯಪಟ್ಟನಾದರೂ ಅದು ನಿಶ್ಚಯವೆಂದು ತೋರಿತು. ಮುಂದೊಂದು ಶುಭದಿನದ ಶುಭಮುಹೂರ್ತದಲ್ಲಿ ವಿಶ್ವಂಭರ ನನ್ನು ಪಾಠಶಾಲೆಗೆ ಕಳುಹಿಸಿದನು. ಜಗನ್ನಾಥಮಿಶ್ರನಿಗೆ ತನ್ನ ಮಗನು ವಿದ್ಯಾವಂತನಾಗಬೇಕೆಂಬ ಅಪೇಕ್ಷೆಯಿದ್ದಿತಾದರೂ, ಶಚೀದೇವಿಯು ನಿಮೆಯು ವಿದ್ಯೆ ಕಲಿತರೆ ತನ್ನ ಅಣ್ಣನಂತೆಯೇ ವಿರಾಗಿಯಾಗಿ ಓಡಿಹೋಗ ಬಹುದಾದ್ದರಿಂದ ವಿದ್ಯೆ ಕಲಿಯದಿದ್ದರೂ ಉತ್ತಮವೇ ಎಂದು ಯೋಚಿಸಿ ದ್ದಳು. ಆದರೆ ಆ ಭಯದಿಂದ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸದಿರಲು ಸಾಧ್ಯವೆ! ಪ್ರಾರಂಭದ ಪಾಠಪ್ರವಚನಗಳು ಬಹು ಶೀಘ್ರಕಾಲದಲ್ಲೇ ಮುಗಿದುವು. ವಿಶ್ವಂಭರನ ಬುದ್ಧಿಯು ಬಹು ತೀಕ್ಷ್ಣಪ್ರಕೃತಿಯುದಾದು ದರಿಂದ ಬಹು ಚಿಕ್ಕವಯಸ್ಸಿನಲ್ಲೇ ನ್ಯಾಯ-ವ್ಯಾಕರಣಶಾಸ್ತ್ರಗಳ ಅಭ್ಯಾ ಸಕ್ಕೆ ಪ್ರಾರಂಭಿಸಿದನು. ಇತರ ಸಾಮಾನ್ಯವಿದ್ಯಾರ್ಥಿಗಳು ನಾಲ್ಕಾರು ವರ್ಷಗಳಲ್ಲಿ ಕಲಿಯಬಹುದಾದಷ್ಟನ್ನು ನಿಮೆಯು ಒಂದೆರಡು ವರ್ಷಗಳಲ್ಲೇ ಕಲಿತು, ಆ ಎರಡು ಶಾಸ್ತ್ರಗಳಲ್ಲೂ ಪಾಂಡಿತ್ಯವನ್ನು ಸಂಪಾದಿಸಿದನು. ಬಹು ಕಠಿಣವಾದ ತರ್ಕ ವ್ಯಾಕರಣಾದಿ ಆರು ಶಾಸ್ತ್ರಗಳ ಬಹುಸೂಕ್ಷ್ಮ ವಿಚಾರ ಗಳನ್ನೂ ಪರಿಶೋಧಿಸಿ, ಕೇವಲ ಇಪ್ಪತ್ತು ವರ್ಷ ವಯಸ್ಸಿನೊಳಗಾಗಿಯೇ ಬಹು ಮೇಧಾವಿಯೆಂದು ಪ್ರಸಿದ್ಧನಾಗಿ ಒಂದಾನೊಂದು ಸಂಸ್ಕೃತ ಪಾಠ ಶಾಲೆಯ ಮುಖ್ಯಾಧ್ಯಾಪಕನೂ ಆದನು. ಆ ಕಾಲದಲ್ಲಿ ಪಂಡಿತಸಭೆಗಳಿಗೂ ತರ್ಕವಾದಗಳಿಗೂ ಕೊರತೆಯಿರಲಿಲ್ಲ. ವಿಶ್ವಂಭರನೂ ಬಹು ಪ್ರಸಿದ್ಧರಾದ ಪಂಡಿತರೊಂದಿಗೆ ಸಮಪೀಠದಲ್ಲಿ ಕುಳಿತು ವಾದಿಸುವನು. ಒಬ್ಬ ಪಂಡಿತನು ಮತ್ತೊಬ್ಬನನ್ನು ತರ್ಕವಾದದ ವಿವಿಧ ಸಾಧನೆಗಳಲ್ಲಿ ಸೋಲಿಸಿ, ಜಯ ಪತ್ರಿಕೆಯನ್ನು ಪಡೆಯುವುದು ಪಾಂಡಿತ್ಯಕ್ಕೆ ಗೌರವವೆಂಬ ಭಾವನೆಯು ಇದ್ದುದರಿಂದ ವಿಶ್ವಂಭರನೂ ಹಾಗೆಯೇ ಅನೇಕ ಸಭೆಗಳಲ್ಲಿ ವಾದಿಗಳನ್ನು ಜಯಿಸಿ ವಿಜಯಪತ್ರಿಕೆಗಳನ್ನು ಸಂಪಾದಿಸಿದನು. ಜಯಾಕಾಂಕ್ಷಿಗಳಾಗಿ ನವದ್ವೀಪಕ್ಕೆ ಬಂದ ಅನೇಕಮಂದಿ ದಿಗ್ದಂತಿ ಪಂಡಿತರನ್ನು ವಾದದಲ್ಲಿ ಸೋಲಿಸಿ ಆ ಕಾಲದ ಮೇಧಾವಿಗಳಲ್ಲೂ ತರ್ಕಶಾಸ್ತ್ರಪಾರಂಗತರಲ್ಲೂ ಅದ್ವಿ

ತೀಯನೆಂಬ ಪ್ರಖ್ಯಾತಿಗೆ ಪಾತ್ರನಾದನು. ಹುಟ್ಟಿದ ಒಂಬತ್ತು ಮಂದಿ ಮಕ್ಕಳು ಮೋಸಮಾಡಿ-ವ್ಯಸನಪಡಿಸಿಹೋದರೂ ಹತ್ತನೆಯವನಾಗಿ ಜನಿಸಿದ ತಮ್ಮ ವಿಶ್ವಂಭರನು ಬಾಲ್ಯದ ಆಟಪಾಟಗಳಿಂದಲೂ, ವಿದ್ಯಾಭ್ಯಾಸಮಾಡಿ ಬುದ್ಧಿವಂತನಾಗಿ ಗಳಿಸಿದ ಕೀರ್ತಿಯಿಂದಲೂ ಪರಮಾನಂದಪಟ್ಟ ಮಾತಾಪಿತೃಗಳು ತಮ್ಮನ್ನು ಧನ್ಯರೆಂದುಕೊಂಡು, ಸಂತೋಷದಿಂದ ಇದ್ದರು.



## ಅಧ್ಯಾಯ ೨ "ಅದ್ವಿತೀಯ ತ್ಯಾಗ"

ವಿಶ್ವಂಭರನು ವಿದ್ಯಾರ್ಥಿಯಾಗಿದ್ದಾಗ ಒಂದುದಿನಪಾಠಶಾಲೆಯಿಂದ ಮನೆಗೆ ಬರುತ್ತಿದ್ದಾಗ, ಅದೇ ಊರಿನಲ್ಲಿದ್ದ ವಲ್ಲಭಾಚಾರ್ಯನೆಂಬ ಪಂಡಿತನ ಮಗಳು ಲಕ್ಷ್ಮಿಯೆಂಬ ಒಬ್ಬ ಕನ್ಯಾಮಣಿಯನ್ನು ನೋಡಿದನು. ಆಕೆಯೂ ಅವನನ್ನು ನೋಡಿದಳು. ಉಭಯರ ದೃಷ್ಟಿಗಳೂ ಒಂದುಗೂಡಿದುವು. ಲಕ್ಷ್ಮೀದೇವಿಯಂತೆ ಸುರೂಪಿಯೂ ಸುಂಗಳಕರಳೂ ಆದ ಆ ಕನ್ಯೆಯನ್ನು ವಿಶ್ವಂಭರನೂ ಜಗನ್ಮೋಹನಾಕಾರನೂ ನವಯೌವನಾಂಗನೂ ಆದ ಆತನನ್ನು ಲಕ್ಷ್ಮಿಯೂ ಮೆಚ್ಚಿಕೊಂಡರು. ಮುಂದೆ ವಿವಾಹಯೋಗ್ಯವಯಸ್ಸಾಗಲು, ಅವರ ಈ ಇಷ್ಟವು ಉಭಯರ ಮಾತಾಪಿತೃಗಳಿಗೂ ತಿಳಿದು ಅವರೂ ಸಂತೋಷದಿಂದ ಆ ಸಂಬಂಧಗಳನ್ನು ಒಪ್ಪಿಕೊಂಡರು. ಮುಂದೊಂದು ಶುಭದಿನದ ಸುಮುಹೂರ್ತದಲ್ಲಿ ಪರಸ್ಪರ ಅನುರೂಪರೂ ಅನುರಕ್ತರೂ ಆದ ಆ ವಧೂವರರ ವಿವಾಹವು ಅತ್ಯಂತ ವಿಜೃಂಭಣೆಯಿಂದ ನಡೆಯಿತು ಕೆಲವು ದಿನಗಳಲ್ಲೇ ಲಕ್ಷ್ಮಿಯೂ ಪ್ರಬುದ್ಧಳಾಗಿ ಸಂಸಾರಕ್ಕೆ ಸಿದ್ಧಳಾಗಿ ಮನೆಗೆ ಬಂದಳು. ವಿಶ್ವಂಭರನು ಪರಮೋತ್ಸಾಹದಿಂದ ಆ ತನ್ನ ಪ್ರಿಯಭಾರ್ಯೆಯೊಂದಿಗೆ ಲೌಕಿಕಸುಖಾನುಭವ ಮಾಡುತ್ತ ಆನಂದದಲ್ಲಿದ್ದನು.

ಪ್ರಬುದ್ಧನಾದ ಗಂಡನು ಸಂಪಾದನೆಗೆ ತೊಡಗಬೇಕಷ್ಟೆ! ಆ ಕಾಲದಲ್ಲಿ ವಿದ್ವಾಂಸರ ಸಭೆಗಳಲ್ಲಿ ಪ್ರತಿವಾದಿಗಳಮೇಲೆ ಜಯವನ್ನು ಪಡೆಯುವಿಕೆಯೇ ಪಂಡಿತರ ಮುಖ್ಯ ಸಂಪಾದನಾ ಮಾರ್ಗವೆನಿಸಿದ್ದಿತು. ಅಲ್ಲದೆ ಅನುಕೂಲಸ್ಥರ ಮನೆಯ ಬಾಲಕರು ವಿದ್ಯಾಭ್ಯಾಸಕ್ಕೆಂದು ಗುರುಕುಲವಾಸದಲ್ಲಿದ್ದರ, ಗುರುಗಳ ಜೀವನಕ್ಕೆಂದು ಆ ಬಾಲಕರ ಮಾತಾಪಿತೃಗಳಿಂದಲೂ ಧನಧಾನ್ಯಗಳು ಒದಗುತ್ತಿದ್ದುವು. ಇವಲ್ಲದೆ, ಇತರ ದಾನದಕ್ಷಿಣೆ ಮೊದಲಾದುವಂತೂ ಬ್ರಾಹ್ಮಣರಾದ ಅವರಿಗೆ ಸ್ವತಸ್ಸಿದ್ಧ ಸಂಪಾದನೆಗಳಷ್ಟೆ! ವಿಶ್ವಂಭರನೂ ಇತರ ಪಂಡಿತರಂತೆಯೇ ಅನೇಕಮಂದಿ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ಪಾಠ ಹೇಳುತ್ತಿದ್ದನು. ಆಗಾಗ್ಗೆ ನವದ್ವೀಪದಲ್ಲಿ ಪಂಡಿತ ಸಭೆಗಳು ನಡೆಯುತ್ತಿದ್ದುದರಿಂದ ಅವುಗಳಲ್ಲೂ ಭಾಗ ತೆಗೆದುಕೊಳ್ಳುತ್ತಿದ್ದನು. ಒಂದಾನೊಂದು ಸಾರಿ ಬೇರೊಂದು ಪ್ರಾಂತದಿಂದ ವಾದಭಿಕ್ಷೆಗೆಂದು ಅಲ್ಲಿಗೆ ಬಂದಿದ್ದ ಒಬ್ಬ ಮಹಾ ಪಂಡಿತನು ನವದ್ವೀಪದ ಇತರ ವಿದ್ವಾಂಸರನ್ನೆಲ್ಲ ಸೋಲಿಸಿರಲು, ಆತನನ್ನು ನಮ್ಮ ಕಥಾನಾಯಕನು ತರ್ಕವಾದದಲ್ಲಿ ಜಯಿಸಿ ವಿಜಯಪತ್ರಿಕೆಯನ್ನು ಪಡೆದನು. ಅಂದಿನಿಂದ ಆತನ ಗೌರವ ಪ್ರತಿಷ್ಠೆಗಳು ಹೆಚ್ಚಿದುವು ತರುವಾಯ ಕೆಲವುದಿನಗಳಮೇಲೆ, ಆತನು ದೇಶಸಂಚಾರಕ್ಕೆಂದು ಹೊರಟು ಪೂರ್ವಬಂಗಾಳದ ಅನೇಕ ಸ್ಥಳಗಳಲ್ಲಿದ್ದ ಪಂಡಿತರನ್ನು ಜಯಿಸಿ, ರಾಜರಿಂದಲೂ ಜಮೀನುದಾರರಿಂದಲೂ ಹೇರಳ ಧನವನ್ನೂ ಅನೇಕ ಬಿರುದು ಬಹುಮಾನಗಳನ್ನೂ ಗಳಿಸಿದನು. ಆತನು ಸಂಚಾರದಲ್ಲಿದ್ದ ಕಾಲದಲ್ಲಿ ಇತ್ತ ಆತನ ಪತ್ನಿ ಲಕ್ಷ್ಮೀದೇವಿಯು ಹಾವಿನಿಂದ ಕಡಿಯಲ್ಪಟ್ಟು ಕಾಲವಶಳಾದಳೆಂಬ ವರ್ತಮಾನವು ತಲ್ಪಿತು. ಒಡನೆ ಹಿಂದಿರುಗಿ ಬಂದು ಆ ಪತ್ನೀವಿಯೋಗದಿಂದ ಚಿಂತಾಕ್ರಾಂತನಾಗಿ ಕೆಲದಿನಗಳನ್ನು ಕಳೆದನು. ಸುಪ್ರಸಿದ್ಧ ವಿದ್ವಾಂಸನೂ, ನವಯೌವನಾಂಗನೂ ಅದ್ವಿತೀಯ ಸೌಂದರ್ಯಮೂರ್ತಿಯೂ ಆದ ಆತನಿಗೆ ಕನ್ಯೆ ಸಿಕ್ಕುವುದು ದುರ್ಲಭವೇ! ಅದೇ ಸ್ಥಳದ ನಿವಾಸಿಗಳಾದ ಸನಾತನ-ಮಹಾಮಾಯೆ ಎಂಬ ಬ್ರಾಹ್ಮಣ ದಂಪತಿಗಳು ತಮ್ಮ ಏಕಮಾತ್ರ ಪುತ್ರಿಯಾದ ವಿಷ್ಣುಪ್ರಿಯಾ ಎಂಬ ಕನ್ಯೆಯನ್ನು ಆತನಿಗೆ ದಾನಮಾಡಿಕೊಡಲು ಸಿದ್ಧರಾದರು. ವಿಶ್ವಂಭರನಾದರೂ ವಿಷ್ಣುಪ್ರಿಯೆಯ ರೂಪುಲಾವಣ್ಯ

ಗುಣಗಾಂಭೀರ್ಯಗಳನ್ನು ಮೆಚ್ಚಿಕೊಂಡು ಆ ಕನ್ಯೆಯ ಪಾಣಿಗ್ರಹಣ ಮಾಡಿದನು. ಮುಂದೆ ಅವರ ಸಂಸಾರವು ಕೆಲಕಾಲ ಸುಖಮಯವಾಗಿ ಸಾಗಿತು.

ಜ್ಯೋತಿಷ್ಕರು ಹೇಳಿದ್ದ ಭವಿಷ್ಯದಂತೆ ತನ್ನ ಮಗನು ಭಕ್ತಿಪಂಥವನ್ನು ಸ್ಥಾಪಿಸಿ ಜಗದ್ವಂದ್ಯನಾದುದನ್ನು ನೋಡಿ ಸಂತೋಷಪಡುವ ಯೋಗವು ಜಗನ್ನಾಥಮಿಶ್ರನ ಲಭ್ಯದಲ್ಲಿರಲಿಲ್ಲ. ಮುಂದೆ ಕೆಲದಿನಗಳಲ್ಲೇ ಆತನೂ ಕಾಲವಶನಾದನು. ಸಂಸಾರಭಾರವು ವಿಶ್ವಂಭರನಮೇಲೆಯೇ ಬಿತ್ತು. ಪ್ರಿಯ ಜನಕನ ಮರಣವು ಲೌಕಿಕದ ಕಷ್ಟಕಾರ್ಪಣ್ಯಗಳೆಂದರೇನೆಂದು ಅರಿಯದಿದ್ದ ಆತನಿಗೆ ಅಸಹನೀಯವಾಗಿತ್ತು. ಆದರೂ ಲೌಕಿಕವಾಗಿ ಮಾಡಬೇಕಾದ ಉತ್ತರಕ್ರಿಯಾದಿಗಳನ್ನೆಲ್ಲ ನೆರವೇರಿಸಿ, ತನ್ನ ಪಿತೃವನ್ನುದ್ದೇಶಿಸಿ ವಿಶೇಷವಾಗಿ ಬ್ರಾಹ್ಮಣಸಮಾರಾಧನೆ-ದಾನಧರ್ಮಾದಿಗಳನ್ನು ಮಾಡಿದನು. ವರ್ಷಾಂತ್ಯದಲ್ಲಿ ಮಹಾಕ್ಷೇತ್ರವಾದ ಗಯೆಗೆ ಹೋಗಿ ಅಲ್ಲಿ ಶ್ರಾದ್ಧಮಾಡಿ ಪಿತೃಗಳನ್ನುದ್ದೇಶಿಸಿ ಪಿಂಡಪ್ರದಾನಮಾಡಿ, ಗದಾಧರಮೂರ್ತಿಯನ್ನು ಆರಾಧಿಸಿದನು. ಅದೇ ಆತನ ಜೀವನ ಪಥದ ಪರಿವರ್ತನಸಮಯವು. ಆತನು ಆ ಗದಾಧರಮೂರ್ತಿಯ ಸಾನ್ನಿಧ್ಯದಲ್ಲಿದ್ದಾಗಲೇ, ಆತನ ಮನಸ್ಸು ಭಗವದ್ವಿಚಾರದ ಕಡೆಗೆ ಹೊರಳಿತು. ಯಾವ ಸ್ಥಳದಲ್ಲಿ ಭಗವಾನ್ ಬುದ್ಧದೇವನಿಗೆ ಜ್ಞಾನಜ್ಯೋತಿಯ ಪ್ರಥಮದರ್ಶನವಾಯಿತೋ ಆ ಸ್ಥಳವನ್ನು ಸಂದರ್ಶಿಸಿದಾಗ ವಿಶ್ವಂಭರನ ಹೃದಯವಾದರೂ ಪರವಶವಾಗದಿರಲಿಲ್ಲ. ನವದ್ವೀಪದ ಕೇವಲ ಬುದ್ಧಿಕೌಶಲ್ಯಪ್ರದರ್ಶಕವಾದ ತರ್ಕವಾದಗಳ ವಾತಾವರಣ ಮಹಿಮೆಯಿಂದ ಚೋರ್ಕಲ್ಲಿನಂತೆ ಕಠಿನವಾಗಿದ್ದ ಆತನ ಹೃದಯವು, ಆ ದಯಾಮಯಮೂರ್ತಿಯ ದರ್ಶನದಿಂದ ಚಂದ್ರಕಾಂತಶಿಲೆಯಾಗಿ ಮಾರ್ಪಟ್ಟಿತು. ರಾಜಪುತ್ರನಾದ ಗೌತಮನು ಪಾಪಮಯಪ್ರಪಂಚದ ಕಷ್ಟದುಃಖಗಳ ನಿವಾರಣೆಗಾಗಿ ತುಂಬುಯೌವನದಲ್ಲಿ ರಾಜ್ಯ ಭೋಗ-ಪತ್ನೀ ಪುತ್ರಾದಿ ಸಮಸ್ತೈಶ್ವರ್ಯಗಳನ್ನೂ ತ್ಯಾಗಮಾಡಿ ಹೊರಟ ಕಥಾವೃತ್ತಾಂತವು ಆತನ ಹೃದಯದಿಂದ ದಯಾಮೃತ ಪ್ರವಾಹವನ್ನು ಹೊರಡಿಸಿತು. ಆ ಮಹಾನುಭಾವನ ಕಥೆಯನ್ನು ಕೇಳಿ ಕೇಳಿದಂತೆ ಆತನ ಕಣ್ಣುಗಳಿಂದ ಆನಂದಬಾಷ್ಪವು ಸುರಿಯುತ್ತಿರುವುದು. ಅದೇ ಸಂದರ್ಭದಲ್ಲೇ ಆತನಿಗೆ ಈಶ್ವರಪುರಿ ಎಂಬೊಬ್ಬ ಸ್ವಾಮಿಗಳ ಸಮಾಗಮವೂ ಉಂಟಾಯಿತು. ಈಶ್ವರಪುರಿ ಎಂಬು

ಋುವರು ಮಾಧವೇಂದ್ರ ಪುರಿಯುವರ ಶಿಷ್ಯರು. ಮಾಧವೇಂದ್ರಪುರಿಯುವರು, ೧೨ ನೆಯ ಶತಮಾನದಲ್ಲಿ ನಮ್ಮ ದೇಶದ ದಕ್ಷಿಣಕನ್ನಡ ಜಿಲ್ಲೆಯ ಉಡುಪಿಯಲ್ಲಿ ಅವತರಿಸಿ ದ್ವೈತ ಸಿದ್ಧಾಂತವನ್ನು ಸ್ಥಾಪಿಸಿದ ಶ್ರೀಮನ್ಮಧ್ವಾಚಾರ್ಯ ಸಂಪ್ರದಾಯದ ಒಬ್ಬ ಸನ್ಯಾಸಿಗಳು. ಇವರು ಆ ಪ್ರಾಂತದ ಸನ್ಯಾಸಿಗಳಲ್ಲೂ, ಜನಸಮೂಹದಲ್ಲೂ ಶ್ರೀ ಕೃಷ್ಣ ಭಕ್ತಿಯನ್ನು ಹಬ್ಬಿಸುವುದರಲ್ಲಿ ಅಧಿಕ ಯಶಸ್ವಿಗಳಾಗಿದ್ದರು ಮೇಲ್ಕಂಡ ಈಶ್ವರ ಪುರಿಯುವರನ್ನು ನಮ್ಮ ಕಥಾನಾಯಕನು ಗುರುವನ್ನಾಗಿ ಸ್ವೀಕರಿಸಿ ಅವರಿಂದ ಶ್ರೀ ಕೃಷ್ಣಸ್ವಾಮಿಯುವರ ಪಾದಾರವಿಂದಗಳಲ್ಲಿ ಭಕ್ತಿಭಾಗ್ಯವನ್ನು ಯಾಚಿಸಿದನು. ಅವರಾದರೂ ಮಹಾಪಂಡಿತನೂ ಸಾತ್ವೀಕನೂ ಆದ ಆತನಿಗೆ ಭಕ್ತಿಪಂಥದ ಮುಖ್ಯ ತತ್ವಗಳನ್ನು ಉಪದೇಶಿಸಿ, ಶ್ರೀಮನ್ಮಹಾವಿಷ್ಣು ಭಾಗವತ ಗ್ರಂಥರತ್ನವನ್ನು ಆತನಿಗೆ ಪರಿಚಯಮಾಡಿಸಿದರು ವಿಶ್ವಂಭರನು ಭಾಗವತ ಗ್ರಂಥಪಠನೆಯಿಂದಂತೂ ಹುಚ್ಚನಂತಾದನು. ತಾನು ಬಂಗಾಳದ ದಿಗ್ದಂತಿ ಪಂಡಿತರನ್ನು ಸೋಲಿಸಿ ಜಯಪತ್ರಿಕೆಯನ್ನು ಗಳಿಸಿದ ಮಹಾ ವಿದ್ವಾಂಸನೆಂಬ ವಿದ್ಯಾಮದಾಂಧತೆಯು ಎಲ್ಲೋ ಓಡಿಹೋಯಿತು. ಹೃದಯಪಟಲವು ತೆರೆದಂತಾಯಿತು. ಅಂತರ್ದೃಷ್ಟಿಯುಂಟಾಗಿ, ತನ್ನಲ್ಲಿದ್ದ ದುರ್ಗುಣಗಳೆಲ್ಲವೂ ಕಣ್ಣಿಗೆ ಪ್ರತ್ಯಕ್ಷವಾಗಿ ಕಾಣಿಸತೊಡಗಿದುವು. ಬಹು ಸರಳಭಾವವೂ ವಿನಯವಿಧೇಯತೆಗಳೂ ಉಂಟಾದುವು. ದಯೆಯು ಉತ್ಪನ್ನವಾಯಿತು. ನೋಡಿದುದೆಲ್ಲವೂ ದೈವಭಾವನೆಯಿಂದಲೇ ತೋರಸಾಗಿತು. ವಿದ್ಯಾಮದದಿಂದ ಅತಿಕಠಿಣನೂ ದಯವಿಹೀನನೂ, ಗರ್ವೋದ್ಧತನೂ, ಆಗಿದ್ದ ವಿಶ್ವಂಭರಪಂಡಿತನು, ಭಕ್ತಿತತ್ವವು ಹೃದಯದಲ್ಲಿ ಪ್ರವೇಶಮಾಡಲು ಈಗ ಸರ್ವಸುಲಭನಾದನು, ದೀನನಾದನು, ಪರೋಪಕಾರಿಯಾದನು, ಪ್ರೇಮಸ್ವರೂಪಿಯಾದನು. ಏಕಾಏಕಿ ಆತನ ಹೃದಯವನ್ನು ಪ್ರವೇಶಿಸಿದ ಭಗವಚ್ಛೈತನ್ಯದ ಪ್ರೇಮಪ್ರವಾಹದ ರಭಸವನ್ನು ತಡೆದುಕೊಳ್ಳಲಾರದೆ ಆತನು ಹುಚ್ಚನಂತೆ ಗಂಗಾತೀರಪ್ರಾಂತದಲ್ಲೆಲ್ಲ ಸಂಚರಿಸುತ್ತ ಯಾರಿಗಾದರೂ ಏನಾದರೂ ಉಪಕಾರಮಾಡುವ ಸಂಧರ್ಭಸಿಕ್ಕೀತೊ ಎಂದು ಎದುರುನೋಡುವನು. ಬಡವರ ಹೊರೆಗಳನ್ನು ತಾನು ಹೊತ್ತೊಯ್ದು ಇಳಿಸಿಬರುವನು. ಕೆಲಕೆಲವು ವೇಳೆ ಪ್ರೇಮಭರದಲ್ಲಿ ಅಸ್ಪೃಶ್ಯರ ಬಟ್ಟೆಗಳನ್ನು ಸಹ ಒಗೆದು

ಕೊಡುವನಂತೆ! ಇದನ್ನು ಕಂಡ ಎಲ್ಲರೂ ಆತನನ್ನು ಕುರಿತು ಅನೇಕ ವಿಧ ವಾಗಿ ಆಡಿಕೊಳ್ಳುವರು, ನಿಂದಿಸುವರು. ಆದರೇನು! ಆತನು ಯಾರು ಏನೆಂ ದರೂ ತನ್ನ ಕರ್ತವ್ಯವನ್ನು ಬಿಡದೆ ದಿನದಿನಕ್ಕೆ ಹೆಚ್ಚುಹೆಚ್ಚು ಸಮಾಧಾನಿ ಯಾಗುತ್ತಾ ಸಕಲರನ್ನೂ ಸಮಭಾವದಿಂದ ಕಾಣುತ್ತಾ ಸಾಗಿದನು. ಆತನು ಒಂದೊಂದುವೇಳೆ—"ಎಲೋ ಪರೋಪಕಾರ ವಿಚಾರದಲ್ಲಿ ವೃಕ್ಷದಂತೆ ಇರು. ವೃಕ್ಷವು ತನ್ನ ರೆಂಬೆಗಳನ್ನು ಕತ್ತರಿಸುವ ಶತ್ರುವಿಗೂ ನೆರಳು ಕೊಡುತ್ತದೆ. ತಾನು ನೀರಿಲ್ಲದೆ ಬಾಡಿ ಬಸವಳಿಯುತ್ತಿದ್ದರೂ ಯಾರನ್ನೂ ತನಗೆ ಸ್ವಲ್ಪ ನೀರುಕೊಡಿರೆಂದು ಅದು ಕೇಳುವುದಿಲ್ಲ. ಮಳೆಗೂ ಗಾಳಿಗೂ ಪ್ರಚಂಡ ಸೂರ್ಯಕಿರಣಗಳಿಗೂ ಒಂದೇ ಸಮವಾಗಿ ತಲೆಯೊಡ್ಡಿದ್ದರೂ ಯಾವ ಬಗೆಯಲ್ಲಿಯೂ ಗೊಣಗಿಕೊಳ್ಳದೆ, ಮನೋಹರ ಪುಷ್ಪಗಳನ್ನೂ ಸುಮಧುರ ಫಲಗಳನ್ನೂ ಕೊಡುತ್ತದೆಯಲ್ಲವೆ ? ಅದನ್ನು ನೋಡು. ಯಾವಾಗಲೂ ಅದರಂತೆ ಪರೋಪಕಾರಿಯಾಗಿರು" ಎಂದು ಆ ಪುಣ್ಯಾ ತ್ಮನು ತನಗೆ ತಾನೇ ಹೇಳಿಕೊಳ್ಳುವನು.

ವಿಶ್ವಂಭರನಲ್ಲಿ ವಾದಬುದ್ಧಿಯೂ, ಇತರರಲ್ಲಿ ತಿರಸ್ಕಾರಭಾವವೂ ದೂರವಾದುವು. ದಿನದಿನಕ್ಕೆ ಭಗವದ್ಭಕ್ತಿಭಾಗ್ಯವು ಬೆಳೆಯಸಾಗಿತು. ಭಗ ವದ್ಗುಣವರ್ಣನೆಯು ಕೀರ್ತನೆಗಳು ಆತನ ಬಾಯಿಂದ ಅಪ್ರಯತ್ನವಾಗಿ ಹೊರಡಸಾಗಿದುವು. ಶ್ರುತಿಸ್ಮೃತಿ ಅರ್ಥಗಳನ್ನೊಳಕೊಂಡು, ಅಲೌಕಿಕ ಮಹಿಮನಾದ ಶ್ರೀ ಕೃಷ್ಣಸ್ವಾಮಿಯ ಗುಣಮಹಿಮೆಗಳ ವರ್ಣನೆಯಿಂದ ಕೂಡಿದ ಆ ಕವಿತಾಪ್ರವಾಹವೂ ಆತನ ಮೃದುಮಧುರ ಕಂಠಧ್ವನಿಯೂ ಸಕಲರನ್ನೂ ಆಕರ್ಷಿಸಿಬಿಟ್ಟಿತು ನೂರಾರು ಜನರು ಆತನ ಕೀರ್ತನೆಗಳನ್ನು ಕೇಳಲು ಆತನ ಸುತ್ತಲೂ ನೆರೆಯುವರು. ನಿಮೆಯೂ ಉತ್ಸಾಹವು ಮೇಲೆ ಮೇಲೆ ಉಕ್ಕುತ್ತಿರಲು, ಭಕ್ತ್ಯುದ್ರೇಕವನ್ನು ತಡೆಯಲಾರದೆ ಎದ್ದು ಕುಣಿ ಯತೊಡಗುವನು. ಆ ದಿವ್ಯಕವಿತೆಯೂ ಗಾಯನವೂ ನರ್ತನವೂ ಎಂತಹ ಕಠಿಣಹೃದಯವನ್ನಾದರೂ ಕರಗಿಸಿ ಅದರಲ್ಲಿ ಪ್ರೇಮವೆಂಬ ದ್ರವವನ್ನು ಹೊರಡಿಸಿಬಿಡುವುದು. ಹರಿನಾಮಸಂಕೀರ್ತನದ ಈ ನೂತನಪದ್ಧತಿಯು ಆ ಪ್ರಾಂತದ ಅನೇಕರನ್ನು ಎಚ್ಚರಗೊಳಿಸಿತು. ಬಹುಮಂದಿ ಕ್ರಮವಾಗಿ ಆತನ ನಿತ್ಯಸಂಕೀರ್ತನೆಗಳಲ್ಲಿ ನೆರೆಯುವರು. ಕೇವಲ ಸಾಮಾನ್ಯರು ಮಾತ್ರ

ವಲ್ಲ. ಆತನ ಶಿಷ್ಯರ ಗುಂಪಿನಲ್ಲಿ ಅನೇಕಮಂದಿ ವಿದ್ಯಾವಂತರೂ ಇದ್ದರು. ಅವರೆಲ್ಲಾ ಅದ್ವೈತಾಚಾರ್ಯನೆಂಬಾತನು ದೊಡ್ಡ ಪಂಡಿತನು. ನಿತ್ಯಾನಂದನೆಂಬ ಸನ್ಯಾಸಿಯೂ ಆತನ ಶಿಷ್ಯರಲ್ಲೊಬ್ಬನು. ನಿತ್ಯಾನಂದ ಸನ್ಯಾಸಿಯು ವಿಶ್ವಂಭರನ ಪರಮಮಿತ್ರನೂ, ಆಪ್ತಶಿಷ್ಯನೂ ಆಗಿ ಸರ್ವದಾ ಆತನ ಬಳಿಯಲ್ಲೇ ಇರುತ್ತಿದ್ದನು.

ಒಹುಜನ್ಮ ಸಂಸ್ಕಾರದಿಂದ ಭಗವಂತನ ಪಾದಾರವಿಂದಗಳಲ್ಲಿ ಭಕ್ತಿಯು ಉದಯಿಸಿ, ಪ್ರಪಂಚವನ್ನೇ ಪ್ರೇಮಭಾವದಿಂದ ನೋಡುವ ಮಹಾಪುರುಷರ ಉದಾರಭಾವವು, ಐಶ್ವರ್ಯಮದ ಅಧಿಕಾರಮದ ವಿದ್ಯಾಮದ ಕುಲಮದಗಳಿಂದ ಬಿಬ್ಬಿರಿಯುತ್ತಿರುವವರಿಗೆ ಹೇಗೆ ಉಂಟಾಗುವುದು? ವಿಶ್ವಂಭರನು ಭಕ್ತ್ಯುದ್ರೇಕದಿಂದ ಗಾಯನವನ್ನು ಪಾಡುತ್ತ ನರ್ತಿಸುತ್ತ ಮಾಡುತ್ತಿದ್ದ ಸಂಕೀರ್ತನಕ್ಕೆ ಜಾತಿಮತಭೇದಗಳಿಲ್ಲದ, ದೊಡ್ಡವರು ಚಿಕ್ಕವರನ್ನದ, ಪಂಡಿತಪಾಮರರನ್ನದೆ ಎಲ್ಲರೂ ಸೇರುತ್ತಿದ್ದರಲ್ಲವೆ? ಇದು ಅನೇಕರಿಗೆ ಸರಿಬೀಳಲಿಲ್ಲ. ಬಹು ಕಾಲದಿಂದ ನಡೆದುಬಂದಿರುವ ವರ್ಣಾಶ್ರಮಗಳ ಶ್ರೇಷ್ಠತೆಯನ್ನೂ, ಶಾಸ್ತ್ರವಿಚಾರದ ಗಾಂಭೀರ್ಯವನ್ನೂ, ಭಗವನ್ನಾಮದ ಪಾವಿತ್ರ್ಯತೆಯನ್ನೂ, ಕಲಸಕ್ಕೆ ಬಾರದ ಈ ಹುಡುಗನು ಬೀದಿಗೆಳೆದು ತಂದು ಪಾತ್ರಾಪಾತ್ರರನ್ನದೆ ಎಲ್ಲರಿಗೂ ಹಂಚಿ ಹಾಳುಮಾಡುತ್ತಿರುವನೆಂದು ಆತನನ್ನು ದೂಷಿಸತೊಡಗಿದರು. ಅಲ್ಲದೆ, ಕೇವಲ ನಿಷ್ಠುರ ಪ್ರಕೃತಿಯುವರಾದ, ಅವರ ಕಿವಿಗಳಿಗೆ, ಆ ಭಕ್ತರು 'ಹರಿಹರೀಹರಿ'ಯೆಂದು ಹೇಳುತ್ತಿದ್ದ ಭಗವನ್ನಾಮವು ಬಹು ಕರ್ಕಶವಾಗಿ ಕೇಳಿಸುತ್ತಿರಲು,—'ಅಕ್ಕಟಾ ಸಮಾಧಾನದಿಂದ-ಶಾಂತತೆಯಿಂದ ಇರಲು ಅವಕಾಶವಿಲ್ಲದಂತೆ ಈ ನೀಚನು ಜನರ ಹಿಂಡನ್ನು ಕಟ್ಟಿಕೊಂಡು ಹೀಗೆ ದೊಂಬಿ ಮಾಡುತ್ತಿರುವನಲ್ಲಾ!' ಎಂದು ಕೋಪಗೊಂಡು ಹಲ್ಕಡಿಯುವರು. ಪವಿತ್ರವಾದ ಗಂಗಾಸ್ನಾನದಿಂದ ಶುದ್ಧರಾಗಿ ಅರಿಶಿನವರ್ಣದ ವಸ್ತ್ರಗಳನ್ನುಟ್ಟು, ದಿವ್ಯ ವೈಷ್ಣವನಾಮಗಳನ್ನು ಧರಿಸಿ, ಕೊರಳಲ್ಲಿ ತುಲಸೀಮಣಿಗಳ ಹಾರವನ್ನು ಹಾಕಿಕೊಂಡು, ತಾಳ ತಂಬೂರಿ ಮದ್ದಳೆಗಳನ್ನು ಹಿಡಿದು, ಭಾಗವತದಲ್ಲಿ ಹೇಳಲ್ಪಟ್ಟ ಶ್ರೀ ಕೃಷ್ಣನ ಮಹಿಮೆಗಳನ್ನು ಕೀರ್ತನೆಗಳಿಂದ ಪಾಡುತ್ತ ಆತನ ದಿವ್ಯಸ್ವರೂಪವನ್ನು ಅಂತರಾತ್ಮನಲ್ಲಿ ದರ್ಶಿಸುತ್ತ ಆನಂದಬಾಷ್ಪವು ಧಾರೆ

ಧಾರೆಯಾಗಿ ಸುರಿಯುತ್ತಿರಲು, ಬಾಹ್ಯಪ್ರಜ್ಞೆಯೇ ಇಲ್ಲದೆ, ನವದ್ವೀಪದ ಬೀದಿಬೀದಿಗಳಲ್ಲೂ ಸಾಗುತ್ತಿದ್ದ ವಿಶ್ವಂಭರನ ಆ ಸಂಕೀರ್ತನವನ್ನು ನೋಡಿದ ಆ ವಿದ್ಯಾಮದಾಂಧರು ಇದೆಲ್ಲವೂ ಜನಗಳನ್ನು ಮರುಳುಮಾಡಿ ದುಡ್ಡೆಳೆವ ಸಾಧನಗಳೆನ್ನುವರು. ಪಾಂಡಿತ್ಯದ ಆಟವು ಸಾಗದಿರಲು ಜೀವನೋಪಾಯಕ್ಕಾಗಿ ಹೂಡಿಕೊಂಡ ಅದೊಂದು ಬಗೆಯ ಆಟವೆನ್ನುವರು. ಅಣಕಿಸುವರು. ಅನೇಕವಿಧಗಳಲ್ಲಿ ನಿರುತ್ಸಾಹಪಡಿಸಲೆಳೆಸುವರು. ವಿಶ್ವಂಭರನನ್ನೂ ಆತನ ಪರಮಸಾಧು ಕುಟುಂಬದವರನ್ನೂ ಅನೇಕಬಗೆಯ ಅವಮಾನಕ್ಕೆ ಗುರಿಮಾಡಿದರು. ಆದರೆ ಆ ಸಾಧುವರನು ಅವರೇನು ಮಾಡಿದರೂ, ಯಾವುದನ್ನೂ ಲಕ್ಷ್ಯಮಾಡದೆ ತನ್ನ ಆನಂದದಲ್ಲಿ ತಾನಿದ್ದು ಬಿಟ್ಟನು.

ಸಂಕೀರ್ತನೆಗಳಿಗೆ ದಿನದಿನಕ್ಕೆ ಹತ್ತಿರ ದೂರದ ಅನೇಕ ಜನಗಳು ನೆರೆಯುಸಾಗಿದರು. ಬೀದಿಗಳಲ್ಲಿ 'ಹರಿಬೋಲೆ-ಹರಿಬೋಲೆ' ಎಂಬ ಗಲಭೆಯು ವಿಶೇಷವಾಯಿತು. ಇದನ್ನು ಕಂಡು ಮುಂದೆ ಸಹಿಸಿಕೊಂಡಿರುವುದು ಆತನ ದ್ವೇಷಿಗಳಿಗೆ ಅಸಾಧ್ಯವಾಯಿತು. ಯಾವ ಬಗೆಯ ಅಪವಾದಕ್ಕೂ ಭಯಭೀತಿಗಳಿಗೂ ಮಣಿಯದ ಅವನನ್ನು ರಾಜಾಜ್ಞೆಯಿಂದ ಬಾಯಿಮುಚ್ಚಿಸಬೇಕೆಂದು ಯೋಚಿಸಿದ ಆತನ ದ್ವೇಷಿಗಳು, ನವದ್ವೀಪದ 'ಖಾಜಿ' ಎಂದರೆ ನ್ಯಾಯಾಧಿಪತಿಯ ಬಳಿಗೆಹೋಗಿ ಆತನ ಮೇಲೆ ದೂರಿಕೊಂಡರು. ಅವರ ಪ್ರಾರ್ಥನೆಗೆ ಮರುಳಾದ ಆತನು,-'ಇನ್ನು ಮುಂದೆ ಬಹಿರಂಗದ ರಸ್ತೆಗಳಲ್ಲಿ ವಿಶೇಷ ಗದ್ದಲಮಾಡುತ್ತ ನಾಗರೀಕರಿಗೆ ತೊಂದರೆ ಮಾಡಿದರೆ ಸರ್ಕಾರದ ದಂಡನೆಗೆ ಗುರಿಯಾಗಬೇಕಾಗುತ್ತದೆ'ಂದು ಆ ಸಂಕೀರ್ತನಮಂಡಲಿಯವರಿಗೆ ಒಂದು ಆಜ್ಞಾಪತ್ರವನ್ನು ಕಳುಹಿಸಿದನು. ಅದು ತಲ್ಪಿದೊಡನೆಯೇ ವಿಶ್ವಂಭರನು ಏನೂ ಪ್ರತ್ಯುತ್ತರ ಹೇಳದೆ, ಹುಸಿನಗುವನ್ನು ನಕ್ಕು, ತನ್ನ ನೂರಾರುಮಂದಿ ಹಿಂಬಾಲಕರೊಂದಿಗೆ, ಎಂದಿನಂತೆಯೇ ವಿಶೇಷ ರೀತಿಯಿಂದ ಭಜನೆಮಾಡಿಕೊಳ್ಳುತ್ತ, ನೇರವಾಗಿ ಖಾಜಿಯ ಮನೆಗೇ ನಡೆದು ಆತನ ಸಮ್ಮುಖದಲ್ಲೇ ಹರಿನಾಮಗಳನ್ನುಚ್ಚರಿಸುತ್ತ ಅದ್ಭುತ ಸಂಕೀರ್ತನೆಯನ್ನು ಜರುಗಿಸಿದನು. ಅದನ್ನು ಕಂಡು ಆ ಖಾಜಿಯು, ದಿಗ್ಭ್ರಾಂತನಾಗಿ ತಾನು ಕೊಟ್ಟಿದ್ದ ಆಜ್ಞಾಪತ್ರವನ್ನು ಹಿಂದಕ್ಕೆ ತೆಗೆದುಕೊಂಡು,-'ನಿಮ್ಮ ಮನಸ್ಸು ಬಂದಂತೆ ಸಂಕೀರ್ತನೆ

ಯನ್ನು ಮಾಡಿಕೊಳ್ಳಿರಿ' ಎಂದು ಹೇಳಿ ಕಳುಹಿಸಿದನು ಹಾಗೂ ಬಗ್ಗ ದಿದ್ದ ಆ ವಿಶ್ವಂಭರನನ್ನು ಕಂಡು, ಆತನ ದ್ವೇಷಿಗಳಿಗೆ ರೋಷವು ನೆತ್ತಿ ಗೇರಿತು. ಕೂಡಲೇ ಆ ದುಷ್ಟರು, ಆ ಊರಿನಲ್ಲಿ ಮಹಾಪುಂಡರೂ ಘಾತುಕರೂ ಎಂದು ಹೆಸರಾದ ಜಗೆ ಮತ್ತು ಮಾಧೆ ಎಂಬಿಬ್ಬರನ್ನು ಪ್ರೇರಿಸಿ ವಿಶ್ವಂಭರನನ್ನೂ ಮತ್ತು ನಿತ್ಯಾನಂದನನ್ನೂ ಕಲ್ಲುಗಳಿಂದ ಹೊಡೆ ಯಿಸಿದರು. ಆದರ ಹಾಗೆ ಹಿಂಸಿಸಿದ ಆ ಘಾತುಕರನ್ನೂ ಆ ಸಾಧು ವರ್ಯರು ಪ್ರೇಮಮಯದೃಷ್ಟಿಯಿಂದ ನೋಡಿ, ಮಿತ್ರಭಾವದಿಂದ ಆಲಂ ಗಿಸಿ ಆದರಿಸಿದುದರಿಂದ ಆ ಘಾತುಕರ ಹೃದಯವು ಕೂಡ ಕರಗಿ, ಅವರೂ ಆ ಭಕ್ತಾಗ್ರಣಿಗಳ ಪಾದಾಕ್ರಾಂತರಾಗಿ, ತಮ್ಮ ಅಪರಾಧಗಳನ್ನು ಕ್ಷಮಿಸ ಬೇಕೆಂದು ಬೇಡಿಕೊಂಡದ್ದಲ್ಲದೆ, ಮುಂದೆ ತಮ್ಮ ಜೀವಮಾನವಿದ್ದ ಪರ್ಯಂತರವೂ ಅವರ ನಂಬಿಕೆಯ ಭಂಟರಾದರು.

ಇದುವರೆಗೆ ಆತನು ಮಾಡಿದ ವಿದ್ಯಾಭ್ಯಾಸವೂ ಪಡೆದ ಪ್ರಾಪಂಚಿಕ ಅನುಭವವೂ ಆತನಲ್ಲಿ ಮಾನವಸ್ವಭಾವದ ಸ್ಥಿತಿಯೆಂಥದೆಂಬ ತಿಳುವಳಿಕೆ ಯನ್ನು ಉಂಟುಮಾಡಿದ್ದುವು. ಆತನು ತನ್ನ ಸ್ಥಿತಿಯನ್ನು ಕುರಿತು ತಾನೇ ಯೋಚಿಸಿಕೊಂಡನು-''ಭಗವಂತನ ದಾಸಾನುದಾಸನಾದ ನಾನು, ಮನೆ ಬಾಗಿಲುಗಳೆಂಬ-ವೃತ್ತಿಕ್ಷೇತ್ರಗಳೆಂಬ ಇತರ ಸಂಬಂಧಗಳನ್ನೂ ಇಟ್ಟು ಕೊಂಡಿರುವುದು ಸಾಧುವಲ್ಲ. ನನಗೆ ಸಮಸ್ತವೂ ಶ್ರೀ ಕೃಷ್ಣಮೂರ್ತಿಯೇ ಆಗಿರುವಾಗ ಇವುಗಳ ಸ್ವಾಮ್ಯವನ್ನೂ ಇಟ್ಟುಕೊಂಡ ನಾನು ಭಕ್ತನೆಂದೂ ಭಾಗವತನೆಂದೂ ಹೇಳಿಕೊಳ್ಳುತ್ತಿರುವುದು ಕೇವಲ ನಟನೆಯಲ್ಲದೆ ಬೇರಲ್ಲ! ಅಲ್ಲದೆ ಶ್ರೀ ಕೃಷ್ಣಮೂರ್ತಿಗಾಗಿ ಸಮಸ್ತ ಲೌಕಿಕಬಂಧಗಳನ್ನೂ ತ್ಯಜಿಸಿ ತ್ರಿಕರಣಶುದ್ಧಿಯಾಗಿ ಸೇವಿಸಬೇಕೆಂದು ಬೋಧಿಸುತ್ತಿರುವ ನಾನೇ ಇವು ಗಳೆಲ್ಲವನ್ನೂ ತ್ಯಜಿಸದಿರತಕ್ಕುದು ಯೋಗ್ಯವಲ್ಲ. ಪ್ರತಿಯೊಂದನ್ನೂ ನಾನು ಆಚರಿಸಿ ತೋರಿಸಬೇಕಲ್ಲದೆ ಬರೀ ಬೋಧನೆಯು ಸಹಕಾರಿಯಾಗಲಾರದು. ನಾನು ಕೇವಲ ವಾಚಾ ಬೋಧಿಸುತ್ತಿದ್ದೇನೆಂದಲ್ಲವೆ ಈ ಜನರು ನನ್ನನ್ನು ಆಕ್ಷೇಪಿಸುತ್ತಿರುವರು. ಬೋಧನೆಯು ನಿಜವಾಗಿ ಜನಮನದಲ್ಲಿ ಮೂಡ ಬೇಕಾಗಿದ್ದರೆ, ನಾನು ನನ್ನ ತ್ಯಾಗದಿಂದ ತೋರಿಸಬೇಕಾದುದೇ ಕರ್ತ ವ್ಯವು" ಎಂದು ಯೋಚಿಸಿ, ಸಮಸ್ತವನ್ನೂ ತ್ಯಾಗಮಾಡಿ ಸನ್ಯಾಸಾ

ಶ್ರಮವನ್ನು ಸ್ವೀಕಾರಮಾಡಬೇಕೆಂದು ನಿರ್ಧರಿಸಿದನು. ಒಡನೆ ಶ್ರೀ ಕೇಶವ ಭಾರತಿ ಎಂಬ ಯತಿಗಳನ್ನಾಶ್ರಯಿಸಿ ಸನ್ಯಾಸವನ್ನು ಸ್ವೀಕರಿಸಿದನು ಆತನ ಆ ಅದ್ಭುತ ತ್ಯಾಗದ ವಿಚಾರವು ಆತನ ದ್ವೇಷಿಗಳಿಗೂ ಮಹದಾಶ್ಚರ್ಯವನ್ನುಂಟುಮಾಡಿತು.



## ಅಧ್ಯಾಯ ೩ "ತೀರ್ಥಯಾತ್ರೆ-ದೇಶಸಂಚಾರ"

ತ್ಯಾಗಮಹಿಮೆಯು ಅಸಾಧಾರಣವಾದುದು. ಮಾನವನನ್ನು ಅಮರನನ್ನಾಗಿಸುವುದು ತ್ಯಾಗವೇ! ತ್ಯಾಗಗುಣವಿಲ್ಲದ ಮಾನವನು ದಾನವ ಸಮಾನನಾಗುವನು 'ಸಮಸ್ತವೂ ನನಗಾಗಬೇಕು' ಎಂಬ ಸ್ವಾರ್ಥತೆಯು ಯಾವನಲ್ಲಿರುವುದೋ ಅವನು ತ್ಯಾಗಿಯಾಗಲಾರನು ತ್ಯಾಗಿಯಲ್ಲದವನ ಆತ್ಮವು ಬೆಳೆಯಲಾರದು. ಅವನು ತನ್ನ ಒಳಿಯಲ್ಲಿರುವ ಅಲ್ಪಸ್ವಲ್ಪ ಹಣ ಕಾಸು-ಭೂಮಿಕಾಣಿ-ವಸ್ತ್ರ ಒಡನೆ ಮುಂತಾದ ಪ್ರಾಪಂಚಿಕ ವಸ್ತು ಸಮುದಾಯದಿಂದಲೇ ಕಟ್ಟಲ್ಪಟ್ಟು, ಅವುಗಳೊಂದಿಗೆ ನಿರ್ನಾಮವಾಗುವನು. ಇದನ್ನು ಇನ್ನೂ ಸ್ವಲ್ಪ ವಿಶದವಾಗಿ ಹೇಳಲು ಒಂದು ಉದಾಹರಣೆಯನ್ನು ಕೊಡಬೇಕಾಗುತ್ತದೆ ಅವರೆ ಕಡಲೆ ರಾಗಿ ಬತ್ತ ಮುಂತಾದ ಬೇರೆ ಬೇರೆ ಧಾನ್ಯದ ಕಾಳುಗಳಿವೆಯಷ್ಟೆ! ಅವುಗಳಲ್ಲಿ ಒಂದೊಂದು ಕಾಳನ್ನೂ ತೆಗೆದು ಪ್ರತ್ಯೇಕವಾಗಿ ಪರೀಕ್ಷಿಸಿದರೆ, ಅದರಲ್ಲಿ ಹಿಟ್ಟು ಪದಾರ್ಥವೂ ಸಿಪ್ಪೆಯೂ ಅಲ್ಲದೆ ಮೊಳಕೆಯಾಗುವ ಮತ್ತೊಂದು ಸತ್ವಭಾಗವಿರುವುದನ್ನೂ ಕಾಣಬಹುದು ಈ ಸತ್ವಭಾಗವೇ ಬೀಜದ ಜೀವವು ಬೀಜವು, ತನ್ನ ಆಸ್ತಿಯಾದ ಹಿಟ್ಟುಪದಾರ್ಥ ಮತ್ತು ಸಿಪ್ಪೆಗಳನ್ನು ತ್ಯಾಗ ಮಾಡಿದಲ್ಲದೆ ಮೊಳಕೆಯಾಗಲಾರದು ಮೊಳಕೆಯಾಗುವವರೆಗೆ ಅವುಗಳೆರಡೂ ಆ ಸತ್ವಭಾಗಕ್ಕೆ ಸಹಾಯಕವಾಗಬೇಕೆಂಬುದು ವಾಸ್ತವ. ಆದರೆ ಬೀಜವು ಅವುಗಳನ್ನು ನಿರ್ಜರ ಮಾಡಲಾರದ ಲೋಭಕ್ಕೆ ಒಳಪಟ್ಟರೆ ಮಾತ್ರ ಅವುಗಳೊಂದಿಗೆ ತಾನೂ ನಾಶವಾಗಬೇಕಾದುದು ತಪ್ಪದು ಅಲ್ಲವೆ! ಪ್ರತಿಯೊಂದು

ಧಾನ್ಯದ ಅಸಂಖ್ಯಾಕ ಕಾಳುಗಳಲ್ಲಿ ಬಹು ಸ್ವಲ್ಪ ಸಂಖ್ಯೆಯವುಗಳಿಗೆ ಮಾತ್ರವೇ ಹಾಗೆ ಮೊಳಕೆಯಾಗಿ ಬೆಳೆದು ತಮ್ಮ ಕುಲವನ್ನು ಊರ್ಜಿತ ಗೊಳಿಸುವ ಅವಕಾಶ ಸಿಕ್ಕುತ್ತದೆ.—ಎಂದರ ಪ್ರತಿ ವರ್ಷ ಬೆಳೆಯಾಗುವ ಅಗಣಿತ ಸಂಖ್ಯೆಯ ಕಾಳುಗಳಲ್ಲಿ ಬಹು ಸ್ವಲ್ಪವನ್ನು ಮಾತ್ರವೇ ಪುನಃ ಬೀಜಕ್ಕಾಗಿ ಉಪಯೋಗಿಸುವರು. ಆ ಸ್ವಲ್ಪ ಬೀಜಗಳಿಂದಲೇ ಮುಂದಿನ ಆ ಧಾನ್ಯದ ಸಂತಾನಗಳು ಅಭಿವೃದ್ಧಿಯಾಗಬೇಕಾಗಿದೆ. ಅರ್ಥಾತ್ ಜೀವಿಸಿ ವಂಶದ ಹೆಸರು ಹೇಳತಕ್ಕುವು ಅವು ಮಾತ್ರ! ಮಿಕ್ಕ ಎಣಿಕೆಗೆ ಬಾರದಷ್ಟು ಕಾಳುಗಳು ಪ್ರಾಣಿವರ್ಗಕ್ಕೆ ಆಹಾರವಾಗಿ,—ಕೊಳೆತು ಹುಳಿತು ಎಂತೋ ಅನಾಮಧೇಯವಾಗಿ ನಾಶವಾಗುವುವು. ಮಾತೃ ವಂಶವನ್ನು ಅಭಿವೃದ್ಧಿ ಗೊಳಿಸುವ ಲಭ್ಯವು ದೊರತ ಆ ಕಾಳುಗಳ ಜನ್ಮವು ಧನ್ಯವಲ್ಲವೆ! ಅಂತಹ ಲಭ್ಯವು ದೊರೆವುದೂ ಸಾಮಾನ್ಯ ಪುಣ್ಯವಲ್ಲ. ಒಂದು ಸಾರಿ ಹಾಗೆ ದೊರೆತ ಲಭ್ಯವು ವ್ಯರ್ಥವಾದರೆ, ಮುಂದೆ ಅಂತಹ ಸಂದರ್ಭವು ಎಂದಿಗೆ ದೊರವು ದೆಂದು ಹೇಗೆ ಹೇಳಲಾದೀತು? ಹಾಗೆಯೇ ದುರ್ಲಭವಾದ ಮನುಷ್ಯ ಜನ್ಮವು ದೊರೆತಿರುವಾಗ ಹಣಹೊನ್ನು ವಿದ್ಯಾಬುದ್ಧಿಗಳು ಒದಗಿರುವುದಾದರೂ ದೊಡ್ಡ ದೊಂದು ಪುಣ್ಯ ಫಲವಾಗಿದೆ. ಹಾಗೆ ದೊರೆತಾಗ ಅವುಗಳನ್ನು ವೆಚ್ಚಮಾಡಿ ಆತ್ಮಾಭಿವೃದ್ಧಿ ಮಾಡಿಕೊಳ್ಳುವ ವಿಷಯದಲ್ಲಿ ತಾತ್ಸಾರ ಮಾಡಿದರ ಪುನಃ ಈ ಲಭ್ಯವು ದೊರೆಯಲಾರದು ಬೀಜವು ತನ್ನ ಸಿಪ್ಪೆ ಮತ್ತು ಪಿಷ್ಟ ಪದಾರ್ಥಗಳನ್ನು ತ್ಯಾಗ ಮಾಡುವಂತೆ, ಮನುಷ್ಯನೂ ತನ್ನನ್ನಾವರಿಸಿದ ಅಹಂಕಾರ ಮಮಕಾರಗಳೆಂಬ ಸಿಪ್ಪೆಯನ್ನೂ ತನಗಾಧಾರವೆಂದು ತಿಳಿದಿ ರುವ ಐಶ್ವರ್ಯ ಪದವಿಗಳೆಂಬ ಪಿಷ್ಟ ಪದಾರ್ಥವನ್ನೂ ತ್ಯಾಗ ಮಾಡಿದಲ್ಲದೆ ಆತ್ಮಜ್ಯೋತಿಯೆಂಬ ಮೊಳಕೆಯು ಹೊರಡಲಾರದು. ಬೀಜವು ಗಿಡವಾಗಿ ಮರವಾಗಿ ಪುಷ್ಪಫಲಭರಿತವಾಗುವ ಸಕಲ ಕಾರ್ಯಗಳೂ ಅದು ಸಿಪ್ಪೆ ಪಿಷ್ಟ ಪದಾರ್ಥಗಳನ್ನು ತ್ಯಾಗಮಾಡಿ ಮೊಳಕೆಯಾದಲ್ಲದೆ ಹೇಗೆ ಸಾಧ್ಯ ವಾಗಲಾರದೋ ಹಾಗೆಯೇ ಮನುಷ್ಯನೆಂಬ ಬೀಜವೂ ಲೋಕದಲ್ಲಿ ಪರೋಪ ಕಾರಿಯೂ, ಲೋಕಸೇವಕನೂ, ಭಗವದ್ಭಕ್ತನೂ, ಆತ್ಮಜ್ಞಾನಿಯೂ ಜೀವನ್ಮುಕ್ತನೂ ಆಗಿ, ಆದರ್ಶ ಪುರುಷನೆಂದು ನಿಲ್ಲಬೇಕಾದರೆ ಪ್ರಾರಂಭಕ್ಕೆ ತನ್ನನ್ನಾವರಿಸಿದ ಮೇಲೆಹೇಳಿದ ಸಿಪ್ಪೆಯನ್ನು ತ್ಯಜಿಸಿ ನೊಳಕೆಯಾಗಿ ತನ್ನ

ಆಸ್ತಿಯಾದ ಪಿಷ್ಟ ಪದಾರ್ಥವನ್ನೂ ತ್ಯಾಗ ಮಾಡಲು ಸಿದ್ಧನಾಗಬೇಕು. ಆತ್ಮಾಭಿವೃದ್ಧಿ ಕಾರ್ಯಕ್ಕೆ ಅಡಿಗಲ್ಲಿನಂತಿರುವ ಈ ತ್ಯಾಗದ ಮಹಿಮೆಯನ್ನು ತಿಳಿದಿದ್ದುದರಿಂದಲೇ ನಮ್ಮ ಕಥಾನಾಯಕರು ತಮ್ಮ ಸಕಲ ಕಾರ್ಯಗಳಿಗೂ ಮೊದಲನೆಯದೆಂದೆನಿಸುವಂತೆ ಪ್ರಾಪಂಚಿಕವಾದ ತಮ್ಮ ಸಮಸ್ತವನ್ನೂ ತ್ಯಾಗಮಾಡಿ ಸನ್ಯಾಸವನ್ನು ಸ್ವೀಕಾರ ಮಾಡಿದರು.

ವಿಶ್ವಂಭರ ವಿಪ್ರೋತ್ತಮನಿಗೆ ಸನ್ಯಾಸ ದೀಕ್ಷೆಯನ್ನು ಕೊಟ್ಟ ಶ್ರೀ ಕೇಶವ ಭಾರತೀ ಸ್ವಾಮಿಗಳವರು ಆತನ ಜನ್ಮನಾಮವನ್ನು ಬದಲಾಯಿಸಿ 'ಶ್ರೀಕೃಷ್ಣ ಚೈತನ್ಯ' ಎಂಬ ಉಪನಾಮಕರಣಮಾಡಿದರು. ಸನ್ಯಾಸ ಸ್ವೀಕಾರಮಾಡಿದ ಶ್ರೀ ಕೃಷ್ಣ ಚೈತನ್ಯರು, ಸಮಸ್ತ ಪ್ರಾಪಂಚಿಕ ಬಂಧನಗಳಿಂದಲೂ ನಿವೃತ್ತರಾಗಿ ಪುಟಕ್ಕೆ ಹಾಕಿದ ಚಿನ್ನದಂತೆ, ಪರಿಶುದ್ಧರಾದರು. ಆಗ ಅವರು ಎಲ್ಲಾ ಐಹಿಕ ಆಸೆಗಳನ್ನೂ ನೀಗಿ-"ಪೂರ್ವಕಾಲದಲ್ಲಿ ಶ್ರೀವರನ ಪಾದಾರವಿಂದಗಳನ್ನು ಭಜಿಸಿ ಸೇವಿಸಿ ಮುಕ್ತರಾದ ಮಹಾನುಭಾವರಂತೆಯೇ ನಾನಾದರೂ ವೇದವೇದ್ಯನೂ ಅವಾಙ್ಮಾನಸ ಗೋಚರನೂ, ಸರ್ವೇಶ್ವರನೂ ಆದ ಶ್ರೀಕೃಷ್ಣಸ್ವಾಮಿಯ ಪಾದಾರವಿಂದಗಳನ್ನು ಸೇವಿಸಿ ಭವಸಮುದ್ರವನ್ನು ದಾಟುವೆನು" ಎಂದುಕೊಂಡರು.

ತನ್ನ ಮುದ್ದುಮಗನು ಸನ್ಯಾಸ ಸ್ವೀಕಾರ ಮಾಡಿದನೆಂಬ ವಾರ್ತೆಯು ಸಾಧ್ವೀ ಶಚೀದೇವಿಯ ಕಿವಿಗಳಿಗೆ ಸಿಡಿಲಿನ ಭಯಂಕರ ಶಬ್ದದಂತೆ ಕೇಳಿಸಿತು ಎಂಟುಮಂದಿ ಮಕ್ಕಳನ್ನು ಕೈಯ್ಯಾರೆ ಮಣ್ಣಲ್ಲಿಟ್ಟು, ಕೈಗೆಬಂದ ಒಂಬತ್ತನೆಯ ಮಗನನ್ನು ದೇಶಾಂತರ ಹೋಗಗೊಳಿಸಿಕೊಂಡು, ತರುವಾಯ ಉಳಿದ ಈ ಒಬ್ಬ ಮಗನಲ್ಲೇ ಆಕೆಯು ತನ್ನ ಪಂಚ ಪ್ರಾಣಗಳನ್ನೂ ಇಟ್ಟುಕೊಂಡಿದ್ದಳು. ಈಗ ಆತನೂ ಹೀಗಾಗಿ ಸಂಸಾರಕ್ಕೆ ಹೊರಗಾದುದರಿಂದ ಆಕೆಯ ಹೃದಯವು ಬಿರಿದು ಹೋದಂತಾಯಿತು. ಚೈತನ್ಯರು ಚಿರದುಃಖಿಯಾದ ತಮ್ಮ ಆ ಮಾತೆಯನ್ನು ಬಹು ಬಗೆಯಿಂದ ಸಮಾಧಾನಗೊಳಿಸಿ, ಪಾದಗಳಿಗೆರಗಿ ತಾಯಿಯಾದ ಆಕೆಯೊಬ್ಬಾಕೆಯ ವಿಷಯದಲ್ಲಿ ಮಾತ್ರ ಎಂದಿನಂತೆಯೇ ವಿಧೇಯರಾಗಿ ನಡೆದುಕೊಳ್ಳುತ್ತೇವೆಂದೂ ವ್ಯಥೆಪಡದೆ ಇರಬೇಕೆಂದೂ ಸಮಾಧಾನಮಾಡಿದರು.

ಶ್ರೀ ಕೃಷ್ಣ ಪ್ರೇತನ್ಯರ ಭಕ್ತಿಭಾಗ್ಯವು ಅನುಪಮವಾದುದು. ಶ್ರೀ ಕೃಷ್ಣಮೂರ್ತಿಯ ಪಾದಕಮಲ ಧ್ಯಾನಾಸಕ್ತರಾಗಿ ಕಣ್ಣುಗಳನ್ನು ಅರ್ಧ ಮಾತ್ರ ಮುಚ್ಚಿಕೊಂಡ ಅವರಿಗೆ ಸಂಪೂರ್ಣವಾಗಿ ಈ ಬಾಹ್ಯ ಪ್ರಪಂಚದ ಸ್ಮರಣೆಯೇ ಮರೆತುಹೋಗುವುದು ನೀಲವರ್ಣದ ವಿಶಾಲಾಕಾಶ, ಯಮುನಾ ನದಿಯ ಕಪ್ಪಾದ ನಿರ್ಮಲಜಲರಾಶಿ, ಅಂತರಿಕ್ಷದ ಕೆಳಭಾಗ ದಲ್ಲಿ ತೇಲುವ ಕಪ್ಪು ಮೇಘಪಙ್ಕ್ತಿ, ಕದಂಬಕುಸುಮಾವಳಿ ಈ ಮುಂತಾದ ವಸ್ತುಗಳ ನೋಟವು ಅವರಿಗೆ ಶ್ರೀ ಕೃಷ್ಣನನ್ನು ಸ್ಮೃತಿಗೆ ತಂದಿತ್ತು, ದೇಹ ದಮೇಲಿನ ಜ್ಞಾನವನ್ನೇ ತಪ್ಪಿಸುವುದು. 'ಶ್ರೀ ಕೃಷ್ಣಾ, ದ್ವಾರಕವಾನ, ಮು ಕುಂದ-ದಾಮೋದರ' ಎಂಬೀ ಭಗವನ್ನಾಮಗಳನ್ನು ಉಚ್ಚರಿಸುತ್ತ ಅವರ ಮೈಮೇಲಿನ ರೋಮಗಳು ನೇರವಾಗಿ ನಿಲ್ಲುವುವು. ಆನಂದಬಾಷ್ಪವು ಧಾರ ಧಾರೆಯಾಗಿ ಸುರಿಯತೊಡಗುವುದು. ಅವರು ಹೀಗೆ ಸರ್ವದಾ ಭಗವತ್ಸಾನ್ನಿ ಧ್ಯದಲ್ಲೇ ಇದ್ದುಬಿಡುವರು. ಎಷ್ಟೋ ದಿನಗಳವರೆಗೆ ಬಾಹ್ಯಪ್ರಪಂಚಜ್ಞಾನ ವೇ ಅವರಿಗೆ ಉಂಟಾಗುತ್ತಿರಲಿಲ್ಲ.

ಪ್ರಪಂಚದ ರೀತಿನೀತಿಗಳು ವಿಚಿತ್ರವಾದುವು. ಹಾಲುಮೊಸರುಗಳನ್ನು ತಲೆಯಮೇಲೆಹೊತ್ತು, ಗಂಟಲೊಣಗುವಂತೆ ಕೂಗಿಕೊಂಡು ಬೀದಿಬೀದಿ ಅಲೆದು ಮಾರುವರು-ಮದ್ಯ(ಹೆಂಡ)ವನ್ನಾದರೋ ಜನರು ಬೇಕುಬೇ ಕೆಂದು ಬಯಸಿ ಅದಿದ್ದ ಸ್ಥಳಕ್ಕೇ ಹೋಗಿ ಶ್ರದ್ಧಾಭಕ್ತಿಯಿಂದ ಕ್ರಯ ಕೊಟ್ಟು ಕುಡಿದುಬರುವರು. ನೀತಿಯ ವಿಷಯವಾದರೂ ಹಾಗೆಯೇ ಇದೆ. ಅನ್ಯಾಯ ಅನೀತಿಯ ಜನ್ಮಸ್ಥಳಗಳಾದ ದ್ಯೂತ ವೇಶ್ಯಾದಿ ಗೃಹಗ ಳಿಗೆ ಜನರು ಪ್ರಯತ್ನ ಪೂರ್ವಕ ಹೋಗಿ, ಕೈಯಲ್ಲಿ ಇದ್ದುದು ಬದ್ದುದ ನ್ನೆಲ್ಲ ತೆತ್ತು, ಮಾನವನ್ನೂ ಕಳೆದುಕೊಂಡು ಅಪಕೀರ್ತಿಯನ್ನು ಹೊಂದುವ ರಾದರೂ, ಸತ್ಯಧರ್ಮ ನ್ಯಾಯ ವಿಚಾರಗಳನ್ನು ದೇಶದೇಶಕ್ಕೆ ಊರೂರಿಗೆ ಮನೆಮನೆಗೆ ತಿರುಗಿ ಜನಗಳಿಗೆ ಕೇಳಿಸಬೇಕಾಗಿದೆ. ಆದರೂ ಅದನ್ನು ಗಮನಿಸುವವರು ಬಹು ಸ್ವಲ್ಪಮಂದಿ ಮಾತ್ರ! ಈ ವಿಧಿಯು ಈಗ ಮಾತ್ರ ವಲ್ಲ. ಅನಾದಿಕಾಲದಿಂದಲೂ ಇದೆ. ಧರ್ಮೋದ್ಧಾರಕರೆಲ್ಲರೂ ತಮ್ಮ ತಮ್ಮ ಕಾಲದಲ್ಲ ಹೀಗೆಯೇ ತಿರುಗಿ ಮಾನವಲೋಕಕ್ಕೆ ಬೋಧಿಸಿದ್ದಾರೆ. ಆ ಪದ್ಧತಿಯಂತೆಯೇ ನಮ್ಮಕಥಾನಾಯಕರೂ ಸನ್ಯಾಸ ಸ್ವೀಕಾರಮಾಡಿದ

ನಂತರ, ಆದ್ಯಂತ ದೇಶದಲ್ಲಿ ಶ್ರೀ ಭಗವನ್ನಾಮ ಸುಧಾರಸವರ್ಷವನ್ನು ಸುರಿಸಲೋಸುಗ ಭಗವಂತನಿಂದ ಪ್ರೇರಿತರಾದರೋ ಎಂಬಂತೆ ತೀರ್ಥ ಯಾತ್ರೆಯನ್ನು ಕೈಕೊಂಡರು.

ಶ್ರೀ ಕೃಷ್ಣ ಚೈತನ್ಯರು ಕ್ರಿ ೧೫೧೦ ನೆಯ ಏಪ್ರೆಲ್ ತಿಂಗಳಲ್ಲಿ ದಕ್ಷಿಣ ದೇಶದಲ್ಲಿ ಯಾತ್ರೆ ಹೊರಟಂತೆ ಉಲ್ಲೇಖವಿದೆ. ಪುರಿ ಅಥವ ಜಗನ್ನಾಥ ಪಟ್ಟಣದಿಂದ, ಗೋವಿಂದದಾಸ ಮತ್ತು ಕೃಷ್ಣದಾಸರೆಂಬ ಇಬ್ಬರು ಬ್ರಾಹ್ಮಣ ಭಕ್ತರು ಮಾತ್ರ ಅವರ ಸಹಾಯಕ್ಕಿರಲು, ಹೊರಟು ಪೂರ್ವ ಸಮುದ್ರತೀರದಲ್ಲೇ ಪ್ರಯಾಣಮಾಡಿದರು. ದಕ್ಷಿಣ ದಿಕ್ಕನ್ನನುಸರಿಸಿ ನಡೆಯುತ್ತಾ ಕ್ರಮವಾಗಿ ಮಾರ್ಗದಲ್ಲಿ ಸಿಕ್ಕಿದ ಅಹೋಬಲಕ್ಷೇತ್ರ, ಶ್ರೀಶೈಲ, ತಿರುಪತಿ, ಕಾಳಹಸ್ತಿ, ಶಿವಕಂಚಿ-ವಿಷ್ಣುಕಂಚಿಗಳು, ಚಿದಂಬರ, ಅಗಸ್ತ್ಯಕ್ಷೇತ್ರ, ಶ್ರೀರಂಗ, ಮಧುರೆ, ತಂಜಾವೂರು, ಕುಂಭಕೋಣ, ರಾಮೇಶ್ವರ ಕ್ಷೇತ್ರ, ಕನ್ಯಾಕುಮಾರಿ, ತಿರುವನಂತಪುರ, ಗೋಕರ್ಣ, ಉಡುಪಿ, ಹಂಪೆ, ಪಂಡರಾಪುರ, ಪಂಚವಟಿ, ಕೊಲ್ಹಾಪುರ, ಪ್ರಭಾಸಕ್ಷೇತ್ರ, ಪೂನಾ ಮುಂತಾದ ಅನೇಕ ಸುಪ್ರಸಿದ್ಧ ಸ್ಥಳಗಳನ್ನು ಸಂದರ್ಶಿಸಿ, ಅಲ್ಲಲ್ಲಿ ವಿರಾಜಮಾನವಾದ ಶಿವ ವಿಷ್ಣು, ಶಕ್ತಿ ಲಕ್ಷ್ಮೀಮೂರ್ತಿಗಳನ್ನೂ ಭಕ್ತಿಯಿಂದ ಸೇವಿಸಿದರು. ಗೋದಾವರಿ ಕೃಷ್ಣ ಕಾವೇರಿ ತಾಮ್ರಪರ್ಣಿ ಭೀಮಾ ಮುಂತಾದ ಮಹಾಪುಣ್ಯನದಿಗಳಲ್ಲೂ, ರಾಮಸೇತು ಕನ್ಯಾಕುಮಾರಿಗಳ ಬಳಿ ಸಮುದ್ರದಲ್ಲೂ ಸ್ನಾನ ಮಾಡಿದರು. ಮಾರ್ಗಮಧ್ಯದಲ್ಲಿ ಉದ್ದಕ್ಕೂ ಅಖಂಡ ಹರಿನಾಮಸಂಕೀರ್ತನೆಯು ನಡೆಯುತ್ತಲೇ ಇತ್ತು ಒಂದೊಂದು ಸ್ಥಳದಲ್ಲೂ ಶ್ರೀ ಯವರ ಅಸಮಾನ ಭಕ್ತಿ ಸೌಂದರ್ಯಕ್ಕೆ ಮರುಳಾದ ನೂರಾರು-ಸಹಸ್ರಾರು ಮಂದಿ ಭಕ್ತಜನರು ತಂಡತಂಡವಾಗಿ ಬಂದು ಅವರನ್ನು ಸೇವಿಸುವರು. ಅವರೊಂದಿಗೆ ಭಗವದ್ವಿಚಾರದಲ್ಲೂ-ಭಕ್ತಿಪಂಥದ ಶ್ರೇಷ್ಠತ್ವದ ವಿಷಯದಲ್ಲೂ ವಾದಮಾಡಲು ಬಂದ ಅನೇಕ ಮಂದಿ ಪ್ರತಿಪಕ್ಷದ ಪಂಡಿತರು ಕೆಲಕೆಲವು ವೇಳೆ ಅವರ ಅಗಾಧ ತರ್ಕಶಾಸ್ತ್ರಪಾಂಡಿತ್ಯದಿಂದಲೂ, ಮತ್ತೆ ಕೆಲವುವೇಳೆಗಳಲ್ಲಿ ಕೇವಲ ಶ್ರೀ ಕೃಷ್ಣನ ಪವಿತ್ರ ನಾಮಸ್ಮರಣೆಯಿಂದಲೇ ಬಾಹ್ಯಸ್ಮರಣೆಯು ತಪ್ಪಿ ಕಣ್ಣುಗಳನ್ನು ಮುಚ್ಚಿ ಆನಂದಬಾಷ್ಪಗಳು ಸುರಿ

ಯುತ್ತಿರಲು ಎಷ್ಟೋ ಹೊತ್ತು ಧ್ಯಾನಮಗ್ನರಾಗುತ್ತಿದ್ದ ಶ್ರೀ ಚೈತನ್ಯರ ಅದ್ವಿತೀಯ ಭಕ್ತಿಪ್ರಭಾವದ ಪ್ರತ್ಯಕ್ಷದರ್ಶನದಿಂದಲೂ ಪರಾಜಿತರಾಗಿ ತಮ್ಮ ಪಂಥಗಳನ್ನು ತ್ಯಜಿಸಿ ವೈಷ್ಣವಪಂಥದ ಭಕ್ತರಾಗಿ ಅವರ ಶಿಷ್ಯವೃಂದದಲ್ಲಿ ಸೇರಿ ಹೋಗುವರು. ಈ ಪ್ರಯಾಣದಲ್ಲೇ ಅನೇಕಮಂದಿ ಬೌದ್ಧ ಪಂಡಿತರೂ, ಅದ್ವೈತಿಗಳೂ, ನಾಸ್ತಿಕರೂ, ಶಕ್ತಿಪೂಜಕರೂ ಅಲ್ಲದೆ ಭಿಲ್ಲ ಜಾತಿಯ ಚೌರ್ಯವೃತ್ತಿಯ ಜನರೂ ಅವರ ಭಕ್ತಿಪಂಥಕ್ಕೆ ಶರಣುಬಂದರು. ಶ್ರೀ ಚೈತನ್ಯರು ಒಬ್ಬಾನೊಬ್ಬ ಮನುಷ್ಯನು ಕುಷ್ಠರೋಗದ ಅಸಹ್ಯಯಾತನೆಯನ್ನು ಸಹಿಸಲಾರದೆ ಮೊರೆಯಿಡುತ್ತಿರಲು ತಮ್ಮ ಕರುಣಾಮಯ ದೃಷ್ಟಿಯಿಂದ ನೋಡಿ ಅಮೃತಹಸ್ತದಿಂದ ಆ ಪಾಪಿಯನ್ನು ಸೋಂಕಲು ಅವನ ಆ ದುಷ್ಟವ್ಯಾಧಿಯು ಒಡನೆ ನಿವಾರಣೆಯಾಗಿ ಅವನು ಸುಖಿಯಾದನು. ಹೀಗೆ ದಕ್ಷಿಣದೇಶದ ತೀರ್ಥಯಾತ್ರೆಯು ೧೫೧೨ ನೆಯ ಜನವರಿಯ ವೇಳೆಗೆ ಮುಗಿದು ಆ ಮಹಾನುಭಾವರು ಪುರಿಗೆ ಹಿಂದಿರುಗಿದರು. ಒಡನೆ ಉತ್ತರ ದೇಶದ ಪುಣ್ಯತೀರ್ಥಕ್ಷೇತ್ರಗಳ ಯಾತ್ರೆಗೆ ಹೊರಡಬೇಕೆಂಬ ಯೋಚನೆಯು ಉಂಟಾಯಿತಾದರೂ ಮುಂದೆ ನಾಲ್ಕು ವರ್ಷಗಳ ಕಾಲ ಅವಕಾಶವೇ ಆಗಲಿಲ್ಲ. ಕೊನೆಗೆ ೧೫೧೬ ರಲ್ಲಿ ವೃಂದಾವನದ ಯಾತ್ರೆಗಾಗಿ ಹೊರಡಲೇ ಬೇಕೆಂದು ಸ್ಥಿರಸಂಕಲ್ಪಮಾಡಿದರು. ಆ ವಾರ್ತೆಯು ತಿಳಿದೊಡನೆಯೇ, ಆವರೆಗೇ ಅವರ ಭಕ್ತರಲ್ಲಿ ಅಗ್ರಗಣ್ಯನೆನಿಸಿದ್ದ ಒರಿಸಾ ದೇಶದ ರಾಜನಾದ ಪ್ರತಾಪರುದ್ರದೇವನು, ಅವರ ಪ್ರಯಾಣಕ್ಕೆ ಆವಶ್ಯಕವೆನಿಸಬಹುದಾದ ಸಕಲ ವಸ್ತು ಸಾಮಗ್ರಿಗಳನ್ನೂ ವಾಹನಾದಿಗಳನ್ನೂ ಸಿದ್ಧಗೊಳಿಸಿದನು. ಇದನ್ನು ತಿಳಿದ ಶ್ರೀ ಚೈತನ್ಯರು.—'ಶ್ರೀ ಕೃಷ್ಣನ ದಾಸಾನುದಾಸನಾದ ನಾನು ಭಗವತ್ಸಾನ್ನಿಧ್ಯಕ್ಕೆ ಸಮಸ್ತ ವೈಭವಗಳಿಂದಲೂ ರಾಜನಂತೆ ಮೆರೆಯುತ್ತಾ ದಾಸಪರಿವಾರಯುಕ್ತನಾಗಿ ವಾಹನಾದಿಗಳನ್ನೇರಿ ಹೋಗುವುದು ಸಲ್ಲದು. ನಡೆದೇ ಹೋಗುತ್ತೇನೆ' ಎಂದು ನುಡಿದರು. ಹಾಗಾದರೂ ಅವರೊಂದಿಗೆ ಹೊರಡಲು ಅನೇಕರು ಸಿದ್ಧರಾದರು. ಆದರೆ ಅವರು ಯಾರಿಗೂ ತಿಳಿಯದಂತೆ ಒಂದಾನೊಂದು ರಾತ್ರೆ ಏಕಾಂಗಿಗಳಾಗಿ ಹೊರಟು, ಛೋಟಾನಾಗಪುರದ ಕಾಡಿನಮಾರ್ಗವಾಗಿ ಪ್ರಯಾಣ ಮಾಡಿ ಕಾಶೀಕ್ಷೇತ್ರವನ್ನು ಸೇರಿದರು. ಅಲ್ಲಿ ಶ್ರೀ ಕೇಶವಭಾರತೀ

ಸ್ವಾಮಿಗಳ ಶಿಷ್ಯನಾದ ಪ್ರಕಾಶಾನಂದನೆಂಬಾತನು ಶ್ರೀ ಚೈತನ್ಯರ ಭಕ್ತಿ ಮಾಹಾತ್ಮ್ಯೆಗಾಗಿ ಮೊದಮೊದಲು ಅಸೂಯೆಪಟ್ಟು ನಿಂದಿಸಿದನಾದರೂ, ತರುವಾಯ ತಾನೇ ಬಂದು ಅವರ ಪಾದಾಕ್ರಾಂತನಾಗಿ ಭಕ್ತಿಪಂಥವನ್ನು ಅಂಗೀಕರಿಸಿ ಅವರ ಶಿಷ್ಯನಾದನು. ಮುಂದೆ ಪ್ರಯಾಣವು ಸಾಗಿತು ಶ್ರೀ ಕೃಷ್ಣಮೂರ್ತಿಯ ಲೀಲಾಕ್ಷೇತ್ರವಾಗಿದ್ದ ಪ್ರಯಾಗ ಮಧುರೆ ಗೋಕುಲಬೃಂದಾವನ ಮುಂತಾದ ಸ್ಥಳಗಳಲ್ಲಿ ಸಂಚರಿಸುವಾಗಲಂತೂ ಅವರ ಮನಸ್ಸಿನಲ್ಲುಂಟಾಗುತ್ತಿದ್ದ ಭಾವನಾತರಂಗಗಳನ್ನು ವರ್ಣಿಸಲು ನಮ್ಮ ಬಲಹೀನ ಲೇಖನಿಯು ಕುಂಠಿತವಾಗುತ್ತದೆ. ಶ್ರೀ ಕೃಷ್ಣಸ್ವಾಮಿಯು ಗೋಪೀ ಗೋಪಾಲಕರೊಂದಿಗೆ ಆ ಸ್ಥಳಗಳಲ್ಲಿ ಆಡಿದ ರಾಸಲೀಲಾಸ್ಮರಣೆಯು ಅವರ ಸ್ಮೃತಿಪಥಕ್ಕೆ ಬರಲು, ಚೈತನ್ಯರು ಕೆಲಕೆಲವು ವೇಳೆ ನಗುತ್ತ, ಕೆಲಕೆಲವು ವೇಳೆ ಅಳುತ್ತ, ಒಮ್ಮೊಮ್ಮೆ ಕುಣಿಯುತ್ತ, ಮತ್ತೊಮ್ಮೆ ಒಂದೇ ಸ್ಥಳದಲ್ಲಿ ನಿಟ್ಟಿಸಿ ನೋಡುತ್ತ, ಶ್ರೀ ಕೃಷ್ಣನನ್ನು ಹಿಡಿಯುವರಂತೆ ಓಡಾಡುತ್ತ, ನಿಟ್ಟುಸಿರು ಬಿಡುತ್ತ, ಒಂದೊಂದು ವೇಳೆ ಬೆರಗಾಗುತ್ತ, ಬೆಚ್ಚಿಬೀಳುತ್ತ, ದೇಹವು ರೋಮಾಂಚವಾಗಲು ಆನಂದ ಬಾಷ್ಪಗಳನ್ನು ಸುರಿಸುತ್ತ, ತಮ್ಮ ಹೃದಯೇಶನನ್ನು ಗದ್ಗದ ಸ್ವರದಿಂದ ಹಾಡಿ ಕರೆಯುತ್ತ-ಭಕ್ತಿಪಾರವಶ್ಯತೆಯಿಂದ ಮೈಮರೆಯುತ್ತ, ಎಷ್ಟೋ ಹೊತ್ತು ಅನ್ನ ನೀರು ನಿದ್ರೆ ಸಂಭಾಷಣೆಗಳೊಂದನ್ನೂ ಅಪೇಕ್ಷಿಸದೆ ಹುಚ್ಚರಂತೆಯೂ, ಮತ್ತರಂತೆಯೂ ಇದ್ದುಬಿಡುವರು. ಭಾವನಾ ವ್ಯತ್ಯಾಸವಾದಂತೆಲ್ಲಾ ಹೊರಗಿನ ಅವರ ಕ್ರಿಯೆಯಲ್ಲೂ ವ್ಯತ್ಯಾಸವಾಗುವುದು. ತಾವು ಶರೀರಿಗಳಾಗಿದ್ದೇವೆಯೋ ಅಥವ ಮತ್ತಾರಾದರೂ ಇದ್ದಾರೆಯೋ ಎಂಬ ಭಾವನೆಯೇ ಅವರಿಗೆ ಉಂಟಾಗುತ್ತಿರಲಿಲ್ಲ. ನಿರಂತರದಲ್ಲೂ ಶ್ರೀ ಕೃಷ್ಣಸಾನ್ನಿಧ್ಯದ ಆನಂದದಲ್ಲೇ ಮಗ್ನರಾಗಿ ಬಾಹ್ಯ ಪ್ರಪಂಚದ ಸ್ಮೃತಿಯೇ ಇಲ್ಲದೆ ಎಷ್ಟೋ ದಿನಗಳು ಕಳೆದುಹೋಗುವುವು. ಹೀಗೆ ಆ ಪ್ರಾಂತ್ಯದಲ್ಲಿದ್ದಾಗಲೇ ಅವರು ಸ್ವಾಯಂಭುತೀರ್ಥ, ವಿಶ್ರಮತೀರ್ಥ ವಿಷ್ಣುತೀರ್ಥ, ಭೂತೇಶ್ವರ ತೀರ್ಥ, ಗೋಕರ್ಣ ತೀರ್ಥ ಮುಂತಾದ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿ, ಶ್ರೀ ಕೃಷ್ಣಲೀಲೆಯಿಂದ ಪಾವನಗಳೆನಿಸಿದ ಮಧುವನ ತಾಳವನ ಕದಂಬವನ ಮುಂತಾದ ಪ್ರದೇಶಗಳನ್ನೂ ಸಂದರ್ಶಿಸಿದರು. ವೃಂದಾ

ವನದಲ್ಲಿದ್ದಾಗ್ಗೆ ಶ್ರೀ ಚೈತನ್ಯರು ದಿನದಿನವೂ ತಮ್ಮ ಸಂದರ್ಶನಕ್ಕಾಗಿ ಬಂದು ನೆರೆಯುತ್ತಿದ್ದ ಸಹಸ್ರಾರುಮಂದಿ ಭಕ್ತರ ಸಮೂಹಕ್ಕೆ ಶ್ರೀ ಕೃಷ್ಣಭಕ್ತಿ ಯನ್ನು ಬೋಧಿಸುತ್ತಿದ್ದರು. ಆ ಸ್ಥಳವನ್ನು ಬಿಟ್ಟು ಹೊರಡಲು ಅವರ ಮನಸ್ಸು ಒಪ್ಪದಿದ್ದರೂ, ಶಿಷ್ಯರ ಪ್ರಾರ್ಥನೆಯನ್ನು ನಿರಾಕರಿಸಲಾರದೆ, ಹೊರಟು ಪವಿತ್ರವಾದ ಯಮುನಾನದಿಯನ್ನು ದಾಟಿ ಮುಂದೆ ಪ್ರಯಾಣ ಮಾಡಿದರು. ಮಧುರಾ ದ್ವಾರಕಾ ಬೃಂದಾವನಗಳ ಸ್ಮರಣೆಯು ಅವ ರಿಗೆ ಎಲ್ಲೆಂದರಲ್ಲಿ ದೇಹದಮೇಲೆ ಮರವೆಯನ್ನುಂಟುಮಾಡುವುದು. ಒಂದು ಸ್ಥಳದಲ್ಲಿ ಅವರು ಹಾಗೆ ಹರಿಭಕ್ತಿಯ ಆವೇಶದಿಂದ ಮೈಮರೆದು ಮಲಗಿರಲು, ನಾಲ್ಕುಮಂದಿ ಶಿಷ್ಯರು ಅವರ ಸುತ್ತಲೂ ಕುಳಿತು ತಮ್ಮ ಗುರುವು ಬಹಿರ್ಮುಖರಾಗುವುದನ್ನೇ ಎದುರು ನೋಡಿಕೊಂಡಿದ್ದರು. ಅಷ್ಟ ರಲ್ಲಿ ಆ ಮಾರ್ಗವಾಗಿ ಕೆಲಮಂದಿ ಮಹಮ್ಮದೀಯ ಸೈನಿಕರು ಬಂದು, ಕೆಳಗೆ ಬಿದ್ದಿದ್ದ ಚೈತನ್ಯರನ್ನು ಕಳ್ಳರಕೈಗೆ ಸಿಕ್ಕಿಬಿದ್ದ ಮಾರ್ಗಸ್ಥನೆಂದೂ ಸುತ್ತಲೂ ಕುಳಿತಿದ್ದ ಶಿಷ್ಯರನ್ನು ಕಳ್ಳರೆಂದೂ ಭಾವಿಸಿ, ಅವರಲ್ಲರನ್ನೂ ಬಂಧಿಸಿದರು. ಅಷ್ಟರಲ್ಲಿ ಬಾಹ್ಯಪ್ರಜ್ಞೆಯು ಬರಲು ಚೈತನ್ಯರು "ಅಪ್ಪಾ ನಾನೊಬ್ಬ ಸನ್ಯಾಸಿಯು. ಇವರೆಲ್ಲರೂ ನನ್ನ ಸ್ನೇಹಿತರು-ಆಪ್ತರು. ಇವರಿಂದ ನನಗೇನೂ ತೊಂದರೆಯಾಗಿಲ್ಲ. ಅವರನ್ನು ಬಂಧಿಸಬೇಡಿ" ಎಂದರು. ಆ ಮಹಮ್ಮದೀಯ ಸೈನಿಕರಲ್ಲಿ ಮಹಮ್ಮದೀಯ ಮತಗ್ರಂಥ ಗಳನ್ನು ಓದಿ ಆ ವಿಚಾರವನ್ನು ತಿಳಿದಿದ್ದ ಒಬ್ಬನಿದ್ದನು. ಅವನು ಚೈತನ್ಯರ ಭಗವದ್ಭಕ್ತಿಮಹಿಮೆಯನ್ನೂ, ಅವರ ಧ್ಯಾನಮಗ್ನರಾಗುತ್ತಿದ್ದುದರ ಸ್ವರೂ ಪವನ್ನೂ ಕಂಡು ಪರಮಾಶ್ಚರ್ಯಪಟ್ಟನು. ಮತ್ತು ಚೈತನ್ಯರನ್ನು ಸಮಿೂ ಪಿಸಿ ಮತವಿಚಾರದ ಕೆಲವು ಪ್ರಶ್ನೆಗಳನ್ನು ಕೇಳಿದನು. ಚೈತನ್ಯರು ಕರುಣಾ ಮಯದೃಷ್ಟಿಯಿಂದ ನೋಡಿ, ಆ ಮಹಮ್ಮದೀಯರನ್ನುದ್ದೇಶಿಸಿ ಶ್ರೀ ಕೃಷ್ಣಭಕ್ತಿಯ ವಿಚಾರವನ್ನು ಕುರಿತು ಸ್ವಲ್ಪಮಾತ್ರ ಪ್ರಸ್ತಾಪಿಸುವುದರೊಳ ಗಾಗಿಯೇ ಆ ಹತ್ತುಮಂದಿ ಮುಸಲ್ಮಾನರೂ ಅವರ ಭಕ್ತಿಪಂಥವನ್ನು ಸ್ವೀಕಾರಮಾಡಲು ಒಪ್ಪಿ ಅವರ ಶಿಷ್ಯರಾದರು. ಅವರಿಗೆ ಪಠಾಣವಿರಾಗಿ ಗಳು ಎಂದು ಹೆಸರಾಯಿತು. ಮುಂದೆ ನಮ್ಮ ಕಥಾನಾಯಕರು ವಾರಣಾ ಸಿಯನ್ನು ಹೊಕ್ಕು ಅಲ್ಲಿಂದ ಸಾವಧಾನವಾಗಿ ಪುರಿಯ ಕಡೆಗೆ ಪ್ರಯಾಣ

ಮಾಡಿದರು. ಬಹು ದಿನಗಳಿಂದ ಅಗಲಿದ್ದ ಅವರನ್ನು ಕಂಡು ಶಚೀದೇವಿ ಯೂ ಇತರ ಅನೇಕಾನೇಕ ಮಂದಿ ಅನುಯಾಯಿಗಳೂ, ಎದುರುಗೊಂಡು ಬಹುಪರಿಯಿಂದ ಹಲುಬಿಕೊಂಡರು. ಅನಾಮಧೇಯಗಳೆನಿಸಿದ್ದ ಅನೇಕ ತೀರ್ಥಗಳೂ ಕ್ಷೇತ್ರಗಳೂ ಆ ಮಹಾಮಹಿಮರು ಕೈಕೊಂಡ ದೇಶಸಂಚಾರ ದಿಂದ ಪುನಃ ಜೀರ್ಣೋದ್ಧಾರವಾದುವು. ಅವರ ಆ ಸಂಚಾರದಲ್ಲಿ ಲಕ್ಷಾಂ ತರಮಂದಿ ಅವರಿಂದ ಭಕ್ತಿಭಿಕ್ಷೆಯನ್ನು ಪಡೆದು ತಮ್ಮ ಜನ್ಮಗಳನ್ನು ಸಾರ್ಥ ಕಗೊಳಿಸಿಕೊಂಡರು. ಆ ಮಹಾತ್ಮರ ವದನಾರವಿಂದದಿಂದ ಹೊರಡು ತ್ತಿದ್ದ ಶ್ರೀ ಕೃಷ್ಣನಾಮಾಮೃತ ಪ್ರವಾಹವು ಲಕ್ಷಾಂತರ ಯೋಗ್ಯಜೀವಿಗಳ ಹೃದಯದ ದಾಹವನ್ನು ಅಣಗಿಸಿ ಧನ್ಯರನ್ನಾಗಿ ಮಾಡಿತು.



## ಅಧ್ಯಾಯ ೪ — " ಚೈತನ್ಯರ ಭಕ್ತಬೃಂದ "

ಶ್ರೀ ಕೃಷ್ಣ ಚೈತನ್ಯ ಪ್ರಭುಗಳ ಭಕ್ತಿ ಪಂಥದ ಲೇಶಮಾತ್ರ ಪರಿಚ ಯವನ್ನು ಹೊಂದಿದ ಯಾವನಾದರೂ ಅದರಿಂದ ಆಕರ್ಷಿತನಾಗದೆ ಇರುತ್ತಿ ರಲಿಲ್ಲ. ಅವರ ಶಿಷ್ಯ ಸಮೂಹದಲ್ಲಿ ಮಹಾರಾಜನಿಂದ ಚಂಡಾಲನವರೆಗೂ ಬ್ರಾಹ್ಮಣನಿಂದ ಮಹಮ್ಮದೀಯನವರಗೂ ಎಲ್ಲಾ ಜಾತಿಯ ಎಲ್ಲಾ ಅಂತ ಸ್ತಿನ ಜನರೂ ಇದ್ದರು. ಅವರ ಧ್ಯಾನಮಗ್ನಸ್ಥಿತಿಯನ್ನೂ ಭಜನೆಯ ಆಡಂಬ ರವನ್ನೂ ಕಂಡು ಮರುಳಾದ-ಅಥವ ಯುಕ್ತಾಯುಕ್ತ ವಿಚಾರವನ್ನರಿಯದ- ಶಾಸ್ತ್ರಪ್ರಜ್ಞೆಯಿಲ್ಲದ ಬುದ್ಧಿಹೀನಜನಾಂಗವು ಮಾತ್ರ ಅವರ ಬೆನ್ನುಹತ್ತಿದ್ದ ರೆಂದು ತಿಳಿಯಬಾರದು. ಅವರ ಶಿಷ್ಯವೃಂದದಲ್ಲಿ ಸಾಧುಗಳೂ ಸನ್ಯಾಸಿ ಗಳೂ ಅದ್ವಿತೀಯ ತರ್ಕಶಾಸ್ತ್ರ ಪಾರಂಗತರೂ ಮಹಾಪಂಡಿತರೂ ಮಾತ್ರ ವಲ್ಲದೆ ಬೌದ್ಧಚಾರ್ವಾಕಯವನಾದಿ ಪರಧರ್ಮಿಯರೂ ಇದ್ದರು. ಅವರೆ ಲ್ಲರೂ ಶ್ರೀ ಕೃಷ್ಣಚೈತನ್ಯರ ದೇಹಸೌಂದರ್ಯವನ್ನು ನೋಡಿಯಾಗಲೀ ಸಂಕೀರ್ತನೆಯ ಆಡಂಬರಕ್ಕೆ ಮರುಳಾಗಿಯಾಗಲಿ ಅವರಿಗೆ ಶಿಷ್ಯರಾದವ ರೆಂದು ಭಾವಿಸುವುದು ಸಾಧುವಲ್ಲ. ಅವರಲ್ಲಿ ಬಹು ಮುಖ್ಯರಾದ ಕೆಲ ಮಂದಿ ಅನುಯಾಯಿಗಳ ವಿಚಾರವನ್ನು ಇಲ್ಲಿ ಹೇಳುತ್ತೇವೆ.

ಹದಿನೈದನೆಯ ಶತಮಾನದ ಕೊನೆಯಭಾಗದಲ್ಲಿ ಒರಿಸ್ಸಾದೇಶವನ್ನು ಧರ್ಮದಿಂದ ಪಾಲಿಸುತ್ತಿದ್ದ ಪುರುಷೋತ್ತಮದೇವನೆಂಬ ರಾಜನಿಗೆ ಆತನ ರಾಣಿ ಪದ್ಮಾವತೀದೇವಿಯಲ್ಲಿ ಪ್ರತಾಪರುದ್ರನೆಂಬ ಏಕಮಾತ್ರಪುತ್ರನು ಜನಿಸಿ ೧೫೦೪ ನೆಯ ಸಂ|| ದಲ್ಲಿ ಸಿಂಹಾಸನವನ್ನು ಏರಿದನು ಮಗನೂ ತಂದೆಯಂತೆಯೇ ಮಹಾ ಪ್ರತಾಪಿಯಾಗಿ ಪರರಾಜರಿಗೆ ಭಯಂಕರ ಶತ್ರುವಾಗಿ ರಾಜ್ಯವನ್ನು ಬಹುದರ್ಪದಿಂದ ಪಾಲಿಸುತ್ತಿದ್ದನು. ರಾಜ್ಯಭಾರದ ವಿಚಾರದಲ್ಲಿ ಅಷ್ಟು ಧಿಟ್ಟನಾಗಿದ್ದ ಆತನು ತರ್ಕ ವ್ಯಾಕರಣಾದಿ ಸಕಲ ಶಾಸ್ತ್ರಗಳನ್ನೂ ಪಠಿಸಿದ ಮಹಾಪಂಡಿತನೂ ಭಗವದ್ಭಕ್ತನೂ ಆಗಿದ್ದನು. ಆತನ ಪರಿಶ್ರಮದಿಂದಲೇ ಆ ಪ್ರಾಂತದ ಅನೇಕ ಪುರಾತನ ದೇವಾಲಯಗಳು ಜೀರ್ಣೋದ್ಧಾರವಾದುವೆಂಬ ಪ್ರತೀತಿ ಇದೆ. ಆತನ ಶೌರ್ಯವನ್ನೂ ದೈವಭಕ್ತಿಯನ್ನೂ ಏಕತ್ರ ಪ್ರದರ್ಶಿಸುವ ಒಂದು ದಂತ ಕಥೆಯು ಹೇಳಲ್ಪಟ್ಟಿದೆ. ಆತನು ಒಂದು ಸಾರಿ ಕಾಂಚೀಪುರದ ರಾಜಪುತ್ರಿ ಪದ್ಮಾವತಿಯೆಂಬಾಕೆಯ ರೂಪುಯೌವನ ಸೌಂದರ್ಯಾದಿಗಳನ್ನು ಕೇಳಿ ಆಕೆಯನ್ನು ವಿವಾಹವಾಗಲು ಅಪೇಕ್ಷಿಸಿ ಕನ್ಯಾಪಿತೃವಿಗೆ ತನ್ನ ಉದ್ದೇಶವನ್ನು ತಿಳಿಸಿ, ಕನ್ಯೆಯನ್ನು ಯಾಚಿಸಲು ಯೋಗ್ಯಜನರನ್ನು ಕಳುಹಿಸಿದನು. ಒರಿಸ್ಸಾದ ರಾಜಮನೆತನದವರು ವರ್ಷದಲ್ಲೊಂದುದಿನ ಜಗನ್ನಾಥಸ್ವಾಮಿಯ ದೇವಾಲಯದ ಮಹಾದ್ವಾರವನ್ನು ಗುಡಿಸುವ ಆರ್ಷೇಯಧಾರ್ಮಿಕ ಸಂಪ್ರದಾಯವೊಂದಿರುವುದು. ಅದರಂತೆಯೇ ಆಚರಿಸುತ್ತಿದ್ದ ಪ್ರತಾಪರುದ್ರನಿಗೆ—'ಕಸಬಳಿಯುವ ರಾಜನಿಗೆ ನನ್ನ ಮಗಳನ್ನು ಕೊಡಲಾರನು' ಎಂದು ಕಾಂಚೀಪುರದ ರಾಜನು ನಿರಾಕರಿಸಿದನು. ಆ ಮಾತನ್ನು ಕೇಳಿದ ಪ್ರತಾಪರುದ್ರನು ರೋಷಗೊಂಡು ಮೊರದೆದ್ದು—'ಮೈಕೊಬ್ಬಿನ ಆ ಕಾಂಚಿಯ ರಾಜನನ್ನು ಯುದ್ಧದಲ್ಲಿ ಗೆದ್ದು ಅವನ ಆ ಮಗಳನ್ನು ಒಬ್ಬ ನಿಜವಾದ ಕಸ ಗುಡಿಸುವವನಿಗೇ ಲಗ್ನಮಾಡಿಸುವೆನು' ಎಂದು ಪ್ರತಿಜ್ಞೆಮಾಡಿ ಸೈನ್ಯಸಮೇತನಾಗಿ ಹೊರಟನು. ಯುದ್ಧವು ಬಹು ಘೋರವಾಗಿ ನಡೆದು ಕಾಂಚೀಪುರದ ರಾಜನು ಪರಾಜಿತನಾದನು. ರಾಜಪುತ್ರಿ ಪದ್ಮಾವತಿಯೊಂದಿಗೆ ತನ್ನ ರಾಜಧಾನಿಯನ್ನು ಸೇರಿದ ಪ್ರತಾಪರುದ್ರನು, ತನ್ನ ಪ್ರತಿಜ್ಞೆಗೆ ಅನುಸಾರವಾಗಿ ಅವಳನ್ನು ಒಬ್ಬ ಕಸ ಗುಡಿಸುವವನಿಗೆ ಕೊಟ್ಟು ಲಗ್ನಮಾಡೆಂದು ತನ್ನ ಪ್ರಧಾನನ ವಶಮಾಡಿದನು.

ಪ್ರಧಾನನು, ರಾಜ್ಯದ ಇತರ ಅಧಿಕಾರಿಗಳೊಂದಿಗೆ ಯೋಚಿಸಿ, ರಾಜಪುತ್ರಿಯನ್ನು ಬೇರೊಂದು ಭವ್ಯಗೃಹದಲ್ಲಿಟ್ಟು ರಾಜೋಪಚಾರಗಳಿಂದಲೇ ಪೋಷಿಸುತ್ತ ಕಾಲನಿರೀಕ್ಷಣೆಯಲ್ಲಿದ್ದನು. ಅಷ್ಟರಲ್ಲಿ ರಥೋತ್ಸವಕಾಲವು ಪ್ರಾಪ್ತವಾಗಲು, ರಾಜನು ವಂಶಪದ್ಧತಿಯಂತೆ ಆ ದಿನ ಮಿಂದುಮಡಿಯುಟ್ಟು ಶ್ರದ್ಧಾಭಕ್ತಿಯುತನಾಗಿ ದೇವಾಲಯಕ್ಕೆ ಬಂದು ಸ್ವಾಮಿಯನ್ನು ಆರಾಧಿಸಿ, ಚಿನ್ನದ ಹಿಡಿಯ ಪೊರಕೆಯನ್ನು ಹಿಡಿದು ದೇವಾಲಯದ ದ್ವಾರ ಪ್ರದೇಶವನ್ನು ಗುಡಿಸತೊಡಗಿದನು. ಆ ವೇಳೆಯನ್ನೇ ಕಾಯುತ್ತಿದ್ದ ಪ್ರಧಾನನು, ರಾಜಪುತ್ರಿ ಪದ್ಮಾವತಿಯನ್ನು ಕರೆತಂದು, ತನ್ನಂತೆಯೇ ರಾಜ್ಯಾಧಿಕಾರಿಗಳಾದ ಇತರ ಹತ್ತುಮಂದಿಯೊಂದಿಗೆ ಅಡ್ಡಬಿದ್ದು –"ಮಹಾಪ್ರಭೊ ಕಾಂಚೀಪುರದ ರಾಜಪುತ್ರಿಯಾದ ಈಕೆಯನ್ನು ಕಸ ಬಳಿಯುವವನಿಗೆ ಲಗ್ನ ಮಾಡಬೇಕೆಂದು ಸನ್ನಿಧಾನದ ಆಜ್ಞೆಯಾಗಿತ್ತು. ಈಕೆಗೆ ಯೋಗ್ಯ ವರನು ಈ ವರೆಗೂ ದೊರತಿರಲಿಲ್ಲ ತಾವು ಆ ಕೆಲಸ ಮಾಡುವುದರಲ್ಲಿ ಶ್ರೇಷ್ಠರೆಂದು ನಮ್ಮ ಮತಿಗೆ ಗೋಚರವಾಗುತ್ತದೆ ಈಕೆಯನ್ನು ಪರಿಗ್ರಹಿಸಬೇಕು" ಎಂದು ಒಪ್ಪಿಸಿದನು ಪ್ರಜೆಗಳೆಲ್ಲರೂ—"ಒಪ್ಪಿಸಿಕೊಳ್ಳಬೇಕು ಮಹಾ ಪ್ರಭೊ" ಎಂದು ಕೇಳಿಕೊಂಡರು. ರಾಜನು ತನ್ನ ಪ್ರಜೆ ಪರಿವಾರಗಳ ರಾಜಭಕ್ತಿಗೆ ಮೆಚ್ಚಿ ಆಕೆಯನ್ನು ಸ್ವಾಮಿಸಾನ್ನಿಧ್ಯದಲ್ಲೇ ಸ್ವೀಕರಿಸಿ ಕಟಕ್‌ಪಟ್ಟಣದಲ್ಲಿದ್ದ ತನ್ನ ಅರಮನೆಗೆ ಕರದೊಯ್ದನು.

ಹೀಗೆ ಮಹಾಪ್ರತಾಪಿಯೂ ಪ್ರಾಜ್ಞನೂ ಭಗವದ್ಭಕ್ತನೂ ಆದ ಆ ರಾಜನು ಚೈತನ್ಯಪ್ರಭುವರ್ಯರ ಕೀರ್ತಿಯನ್ನು ಕೇಳಿ, ಆ ದಿವ್ಯಮೂರ್ತಿಯ ದರ್ಶನಮಾಡಬೇಕೆಂದು ಅಪೇಕ್ಷೆಪಟ್ಟು. ತನ್ನ ರಾಜಧಾನಿಗೆ ಬಿಜಯಂಗೈದು ತನಗೆ ದರ್ಶನ ಭಾಗ್ಯವನ್ನು ಕೊಡಬೇಕೆಂದು ತನ್ನವರನ್ನು ಕಳುಹಿಸಿ ಪ್ರಾರ್ಥಿಸಿದನು. ಅದನ್ನು ಕೇಳಿ ಚೈತನ್ಯರು–"ನಾನು ಸಮಸ್ತ ಲೌಕಿಕ ವ್ಯವಹಾರವನ್ನೂ ತ್ಯಜಿಸಿದ ಸನ್ಯಾಸಿಯು. ನಾನು ಸಾಧ್ಯವಾದ ಮಟ್ಟಿಗೂ ಪ್ರಾಪಂಚಿಕ ಐಶ್ವರ್ಯಪದವಿಗಳಿಂದ ದೂರದಲ್ಲಿರಲು ಪ್ರಯತ್ನಿಸತಕ್ಕುದು ಯೋಗ್ಯವು" ಎಂದು ಹೇಳಿಬಿಟ್ಟರು. ಕೆಲವು ದಿನಗಳ ಮೇಲೆ ರಾಜನು ಮತ್ತೊಂದುಸಾರಿ ಪ್ರಯತ್ನಿಸಿದನು. ಆಗಲೂ ಅದೇ ಪ್ರತ್ಯುತ್ತರವಾಯಿತು. ಮೂರನೆಯಸಾರಿಯೂ ರಾಜನು ದರ್ಶನವನ್ನು

ಅಪೇಕ್ಷಿಸಿದನು. ಆಗ ಚೈತನ್ಯರು-''ಸನ್ಯಾಸಿಯಾದವನು ಮನಸಾ ವಚಸಾ ಕರ್ಮಣಾ ಪರಿಶುದ್ಧನಾಗಿರಬೇಕು. ರಾಜಸ್ನೇಹವೂ ಆತನೊಂದಿಗೆ ಸಲಿಗೆಯೂ ಆಯಿತೆಂದರೆ ಅದು ತನ್ನ ಪರಂಪರೆಯಲ್ಲಿ ಪ್ರಾಪಂಚಿಕ ಸಮಸ್ತ ದುಷ್ಟ ವಸ್ತುಗಳನ್ನೂ ತರುತ್ತದೆ ನಾನು ಲೌಕಿಕವನ್ನು ಬಿಟ್ಟವನಾದುದರಿಂದ ಅದು ನನ್ನ ಸಮೀಪಕ್ಕೆ ಬರಲು ಎಷ್ಟು ಮಾತ್ರವೂ ಒಪ್ಪಲಾರೆನು.'' ಎಂದುಬಿಟ್ಟರು. ಆದರೇನು ರಾಜನ ಅಪೇಕ್ಷೆಯು ಕುಂದಲಿಲ್ಲ. ಮುಂದೆ ಅದಕ್ಕೊಂದು ಅನುಕೂಲ ಸಂದರ್ಭವೂ ಒದಗಿತು. ಜಗನ್ನಾಥದಲ್ಲಿ ಎಂದಿನಂತೆ ನಡೆಯುತ್ತಿದ್ದ ರಥೋತ್ಸವಕ್ಕಾಗಿ ಶ್ರೀ ಚೈತನ್ಯರು ತಮ್ಮ ಭಕ್ತ ಪರಿವಾರದೊಂದಿಗೆ ದಯಮಾಡಿಸಿ, ಕಾಶೀಮಿಶ್ರನ ಮನೆಯಲ್ಲಿದ್ದು ಸ್ವಾಮಿಯ ರಥಾರೋಹಣಕ್ಕಾಗಿ ಕಾದಿದ್ದರು. ಅವರ ಭಜನ ಮಂಡಲಿಯು ಗಳಿಗೆ ಗಳಿಗೆಗೆ ಬೆಳೆಯುತ್ತಾ ಹೋಯಿತು. ಜಗನ್ನಾಥಮೂರ್ತಿಯು ರಥಾರೋಹಣಮಾಡಿದೊಡನೆಯೇ ಶ್ರೀ ಕೃಷ್ಣಚೈತನ್ಯರು, ಸಂಕೀರ್ತನಮಂಡಲಿಯ ಮಧ್ಯದಲ್ಲಿ, ಕೈಯಲ್ಲಿ ತಾಳಗಳನ್ನು ಹಿಡಿದು ನರ್ತನಮಾಡುತ್ತ ಭಗವನ್ನಾಮ ಸಂಕೀರ್ತನೆಮಾಡುತ್ತಾ ಸಾಗುತ್ತಿರಲು ರಾಜನು ತನ್ನ ಅರಮನೆಯ ಉಪ್ಪರಿಗೆಯಲ್ಲಿದ್ದು ಅವರ ಆ ಅಲೌಕಿಕ ಸೌಂದರ್ಯಾಕೃತಿಯನ್ನು ನೋಡಿ- 'ಆಹಾ ಇದೇನು! ಈ ಸ್ವರ್ಗೀಯ ಸೌಂದರ್ಯವು ಮನುಷ್ಯಲೋಕಕ್ಕೆ ಬಂದುದೆಂತು' ಎಂದು ಆಶ್ಚರ್ಯಗೊಂಡನು. ಅಷ್ಟರಲ್ಲಿ ರಥವು ಅರಮನೆಯಬಳಿಗೇ ಬರಲು ರಾಜನು ಕೆಳಕ್ಕಿಳಿದುಬಂದನು. ಆ ವೇಳೆಗೆ ಶ್ರೀ ಕೃಷ್ಣಚೈತನ್ಯರು ಭಗವದ್ಭಕ್ತಿ ಮತ್ತತೆಯಿಂದ ಸೊಕ್ಕಿ ಮೈಮರೆದಿದ್ದರು. ರಾಜನು ಗುಂಪಿನೊಳಹೊಕ್ಕು ಆ ಸಾಧುವರ್ಯರಿದ್ದಬಳಿಗೆ ಬಂದು ಅವರ ಪಾದಗಳೆರಡನ್ನೂ ಹಿಡಿದು ದೀರ್ಘದಂಡನಮಸ್ಕಾರ ಮಾಡಿ,-'ನನ್ನ ಜನ್ಮಸಾರ್ಥಕವಾಯಿತು - ವಂಶವು ಪಾವನವಾಯಿತು' ಎಂದುಕೊಂಡನು ಅಷ್ಟರಲ್ಲೇ ಬಹಿರ್ಮುಖರಾದ ಚೈತನ್ಯರು-''ಅಕಟಾ ಮೋಸವಾಯಿತು. ಪ್ರಾಪಂಚಿಕ ಐಶ್ವರ್ಯಪದವಿಗಳಿಂದ ಮೋಹಿತನಾದ ಮನುಷ್ಯನ ಸಂಪರ್ಕವಾಯಿತಲ್ಲಾ!'' ಎಂದುಕೊಂಡರು. ಅದನ್ನು ಕೇಳಿದ ರಾಜನು-'ಪ್ರಭೋ ವಿಕಲ್ಪಗೊಳ್ಳಲಾಗದು, ನನ್ನ ಐಶ್ವರ್ಯಪದವಿಗಳನ್ನೆಲ್ಲ ತಮ್ಮ ಪಾದಸಮೀಪದಲ್ಲಿ ಒಪ್ಪಿಸುತ್ತೇನೆ. ಕೃಪೆಬಂದಂತೆ ನಡಿಸಬಹುದು.

ನನ್ನನ್ನು ತಮ್ಮ ಭಕ್ತಕೋಟಿಯಲ್ಲಿ ಕನಿಷ್ಟನನ್ನಾಗಿಯಾದರೂ ಭಾವಿಸಿ ರಕ್ಷಿಸ ಬೇಕು' ಎಂದು ಬೇಡಿಕೊಂಡನು. ದಯಾಮಯರಾದ ಚೈತನ್ಯರು ರಾಜನ ಭಕ್ತಿವಿಶೇಷಕ್ಕೆ ಮೆಚ್ಚಿಕೊಂಡು, ಆಲಂಗಿಸಿ ಯುಕ್ತವಚನಗಳಿಂದ ಉಪಚರಿಸಿ ದರು. ಯವನಸೈನ್ಯಕ್ಕೆ ಯಮಪ್ರಾಯನೂ ಅರಿವೀರ ಭಯಂಕರನೂ ಅಜಾನುಬಾಹುವೂ ಮಹಾಬಲಶಾಲಿಯೂ ಆದ ಆ ಪ್ರತಾಪರುದ್ರರಾಜನು ಆ ಭಕ್ತಶ್ರೇಷ್ಠರ ಕಾಲಬಳಿಯಲ್ಲಿ, ಪ್ರತಾಪವಡಗಿ ಹಸುಮಗುವಿನಂತೆ ನಿಂತಿದ್ದುದನ್ನು ಕಂಡ ಪ್ರಜೆಗಳು ಆ ಚೈತನ್ಯಪ್ರಭುವಿನ ಮಹಿಮೆಗಾಗಿ ಅದ್ಭುತಪಟ್ಟರು. ಚೈತನ್ಯರು, ಎಂದಾದರೂ ಭಜನೆಯೊಂದಿಗೆ ಪುರಿಯ ರಾಜಮಾರ್ಗದಲ್ಲಿ ಸಾಗುತ್ತಿದ್ದ ಸಂದರ್ಭವನ್ನು ಕಂಡನೆಂದರೆ ರಾಜನು ಒಡನೆ ಅರಮನೆಯಿಂದ ಹೊರಟು ಸಾಮಾನ್ಯಮನುಷ್ಯನಂತೆ ಪಾದಚಾರಿ ಯಾಗಿ ಅವರೊಂದಿಗೆ ನಡೆಯುತ್ತ ಬರುವನು

ಗೌಡದೇಶದ ಅಧಿಪತಿಯಾದ ಹುಸೇನ್‌ಸಾಹಾ ಎಂಬೊಬ್ಬ ಮುಸ ಲ್ಮಾನ್ ಪ್ರಭುವಿನ ಬಳಿಯಲ್ಲಿ ಇಬ್ಬರು ಬ್ರಾಹ್ಮಣರು ಮಂತ್ರಿಗಳಾಗಿದ್ದರು. ಅವರು ಅದ್ವಿತೀಯ ಸಂಸ್ಕೃತ ವಿದ್ವಾಂಸರಾಗಿದ್ದರೂ ಯಾವ ಕಾರಣ ದಿಂದಲೋ ಸಾಕತ್‌ಮಲ್ಲಿಕ್ ಮತ್ತು ಡಬೀರ್‌ಖಾಸ್ ಎಂಬ ಮಹಮ್ಮ ದೀಯ ಹೆಸರುಗಳನ್ನು ಇಟ್ಟುಕೊಂಡಿದ್ದರು. ಅವರಿಗೆ ಚೈತನ್ಯರ ಪ್ರಥಮ ಸಂದರ್ಶನವು ರಾಮಕೇಳಿ ಎಂಬೊಂದು ಸ್ಥಳದಲ್ಲಿ ಆಯಿತು. ಅವರೊಂ ದಿಗೆ ನಡೆದ ಅತ್ಯಲ್ಪಕಾಲದ ಸಂಭಾಷಣೆಯಿಂದಲೇ ಶ್ರೀ ಚೈತನ್ಯರ ಅಲೌ ಕಿಕ ಮಹಿಮೆಯ ಮತ್ತು ಅದ್ಭುತ ಪಾಂಡಿತ್ಯದ ಪ್ರದರ್ಶನವನ್ನು ಕಂಡು ಹಿಡಿದ ಆ ಮಂತ್ರಿಗಳಿಬ್ಬರೂ, ತಮ್ಮ ಜನ್ಮದಲ್ಲೇ ಎಂದೂ ಕಂಡಿರದ ಅಪೂರ್ವ ವ್ಯಕ್ತಿಯನ್ನು ಆ ದಿನ ಕಂಡೆವೆಂದುಕೊಂಡರು.—''ವಿಶ್ವವೆಂಬು ದೊಂದು ಅಗಾಧ ಕವಿತೆ. ಆಧ್ಯಾತ್ಮಿಕ ದೃಷ್ಟಿಯುಳ್ಳವರು ಮಾತ್ರವೇ ಆ ಕವಿತೆಯ ಅಂತರಾರ್ಥವನ್ನು ತಿಳಿದು ರಸಗ್ರಹಣಮಾಡಬಲ್ಲರು'' ಎಂದು ಚೈತನ್ಯರು ಹೇಳಿದ ವಿಚಾರವು ಅವರ ಮನಸ್ಸಿನಲ್ಲಿ ನೆಟ್ಟಿತು. ಆಧ್ಯಾತ್ಮಿಕ ಜೀವಿತ ಪಥವನ್ನು ಬಿಟ್ಟು ತಾವು ಬಹುದೂರ ಸಾಗಿದ್ದೇವೆಂದು ಅವರಿಗೆ ಗೋಚರವಾಯಿತು. ಬಂದಾಗ ಮಹಾಪಂಡಿತರೆಂಬ ಅಹಂಕಾರದಿಂದ ಬೀಗುತ್ತಾ, ಆ ಸಾಧುವರ್ಯರಿಗೆ ನಮಸ್ಕರಿಸುವುದು ಕೂಡ ತಮ್ಮ ಗೌರ

ವಕ್ಕೆ ಕೊರತೆಯೆಂದು ಭಾವಿಸಿದ್ದ ಅವರು, ಈಗ ಗರ್ವವಣಗಿ ಪಾದಾಕ್ರಾಂತರಾಗಿ ತಮಗೆ ಮಾರ್ಗದರ್ಶಕರಾಗಬೇಕೆಂದು ಪ್ರಾರ್ಥಿಸಿದರು. ಚೈತನ್ಯರು ಅವರ ಮಹಮ್ಮದೀಯ ಹೆಸರುಗಳನ್ನು ಬದಲಿಸಿ ಸನಾತನ ಮತ್ತು ರೂಪ ಎಂದು ಪ್ರತಿನಾಮಗಳನ್ನು ಕೊಟ್ಟರು. ಚೈತನ್ಯರ ಸಾನ್ನಿಧ್ಯದಿಂದ ಹೊರಡುವಾಗ ಅವರ ಪೂರ್ವಸ್ಥಿತಿಯು ಸಂಪೂರ್ಣವಾಗಿ ವ್ಯತ್ಯಾಸಗೊಂಡಿತ್ತು. ಮುಂದೆ ಸ್ವಲ್ಪ ದಿನಗಳಲ್ಲೇ ಅವರಿಬ್ಬರೂ ಭಗವತ್ಸಂಬಂಧದ ಅಮಲು ತಲೆಗೇರಲು ಅಧಿಕಾರ ಐಶ್ವರ್ಯ ಪತ್ನೀಪುತ್ರರು ಮುಂತಾದ ಸಮಸ್ತ ಐಹಿಕ ವಿಚಾರಗಳನ್ನೂ ತ್ಯಜಿಸಿ ಚೈತನ್ಯರ ಪರಿವಾರವನ್ನು ಸೇರಿದರು.

ಹುಗ್ಲೀ ಮಂಡಲಕ್ಕೆ ಸೇರಿದ ನಾರಾಯಣಪುರ ಗ್ರಾಮದಲ್ಲಿ ವಾಸವಾಗಿದ್ದ ಅದ್ವೈತಾಚಾರ್ಯನೆಂಬ ವಿದ್ವಾಂಸನು ವೇದಾಂತ ಶಾಸ್ತ್ರ ಪಾಂಡಿತ್ಯದಿಂದ ಜ್ಞಾನಮಾರ್ಗವೇ ಜನ್ಮಸಾರ್ಥಕ್ಯಕ್ಕೆ ಉತ್ತಮ ಸಾಧನವೆಂದು ಬೋಧಿಸುತ್ತಿದ್ದನು. ಆತನ ಬಳಿಯಲ್ಲೂ ಅನೇಕಮಂದಿ ವಿದ್ಯಾರ್ಥಿಗಳು ಶಾಸ್ತ್ರ ಪಾಠಗಳನ್ನು ಕಲಿಯುತ್ತಿದ್ದರು. ಒಂದಾನೊಂದು ವೇಳೆ ಅದ್ವೈತನು ಚೈತನ್ಯರನ್ನು ಸಂದರ್ಶಿಸಿ ಅವರೊಂದಿಗೆ ವಾದ ನಡೆಸಿದನು. ಅವರ ಯುಕ್ತಿಯುಕ್ತ ಪ್ರವಚನಗಳಿಂದ ಆತನ ಮನಸ್ಸಿನ ಸಂದೇಹವೆಲ್ಲ ನಿವಾರಣೆಯಾಗಿ ಭಕ್ತಿಪಂಥದಲ್ಲಿ ಅತಿಶಯ ಶ್ರದ್ಧೆಯು ಉತ್ಪನ್ನವಾಯಿತು. ಆತನ ಶಿಷ್ಯರಲ್ಲ ಒಬ್ಬನಾದ ಕವಿಕರ್ಣಪೂರ ಎಂಬಾತನು ಚೈತನ್ಯಮಾಲಾ ಮಂಜೂಷ ಎಂಬ ಹೆಸರಿನ ಭಾಗವತ ವ್ಯಾಖ್ಯಾನವನ್ನು ಬರೆದನು.

ವೈಷ್ಣವಪಂಥವನ್ನು ಅಭಿವೃದ್ಧಿಗೆ ತಂದ ಶ್ರೀ ಚೈತನ್ಯರು ಅದ್ವೈತಾಚಾರ್ಯ ನಿತ್ಯಾನಂದ ಈ ಮೂವರಲ್ಲಿ ನಿತ್ಯಾನಂದನ ಪ್ರಸಿದ್ಧಿಯಾದರೂ ಅಲ್ಪವಾದುದಲ್ಲ. ವೈಷ್ಣವಸಿದ್ಧಾಂತವನ್ನು ಬಂಗಾಳ ಒರಿಸ್ಸ ಪ್ರಾಂತಗಳಲ್ಲಿ ಹರಡಿದ ಅಖಂಡ ಕೀರ್ತಿಯು ಈತನಿಗೆ ಸಲ್ಲುತ್ತದೆ ಶ್ರೀ ಚೈತನ್ಯರು ಸರ್ವದಾ ಭಗವದ್ಗುಣ ಚಿಂತನೆಯಲ್ಲೇ ಕಾಲ ಕಳೆಯುತ್ತಲೂ ಮರವೆಗೊಳ್ಳುತ್ತಲೂ ಇದ್ದುದರಿಂದ ಅವರಿಗೆ ವೈಷ್ಣವ ಪಂಥದ ಸಾಮಾಜಿಕ ವಿಚಾರಗಳನ್ನು ಗಮನಿಸಿ, ನಿಯಮನಿಬಂಧನೆಗಳನ್ನೇರ್ಪಡಿಸಲು ಸಾಧ್ಯವಿರಲಿಲ್ಲವಾಗಿ ಆ ಕೆಲಸವನ್ನು ನಿತ್ಯಾನಂದ ಸನ್ಯಾಸಿಯು ಕೈಕೊಂಡು ನೆರವೇ

ರಿಸಿದನು. ಬೌದ್ಧಧರ್ಮ ಪ್ರಾಬಲ್ಯದಿಂದ ಭಿಕ್ಷುಕಭಿಕ್ಷುಣಿಯರಾಗಿದ್ದು ಅದರ ಅಳಿವಿನಿಂದ ಧರ್ಮಭ್ರಷ್ಟರಾಗಿ ಉಳಿದು ಗತ್ಯಂತರ ಕಾಣದಿದ್ದ ಸಹಸ್ರಾರು ಕುಟುಂಬಗಳಿಗೆ ವೈಷ್ಣವ ದೀಕ್ಷೆಯನ್ನು ಕೊಟ್ಟು ಉದ್ಧರಿಸಿದವನೀತನೇ! ತಾನು ಬ್ರಾಹ್ಮಣನಾದರೂ ಕುಲಭೇದ ಮತಭೇದಗಳನ್ನು ನೋಡದೆ ಪಾಪಿಗಳು ಚಂಡಾಲರು ಮುಂತಾದವರನ್ನೂ ತನ್ನ ಕುಲದವರಂತೆಯೇ ಸಮಾನ ಪ್ರೇಮದಿಂದ ಕಂಡು - ಅವರ ಮನೆಗಳನ್ನೂ ಪ್ರವೇಶಿಸಿ ಅವರಿಗೂ ವೈಷ್ಣವ ದೀಕ್ಷೆಯನ್ನು ಕೊಟ್ಟನು. ಬೌದ್ಧಧರ್ಮದ ನಂತರ ಗೊತ್ತಾದ ಒಂದು ಧಾರ್ಮಿಕ ವಿಚಾರವನ್ನೇ ಅರಿಯದೆ ದಿಕ್ಕು ಕೆಟ್ಟಿದ್ದ ಬಂಗಾಳದ ವರ್ತಕ ವರ್ಗದವರಿಗೂ ಈ ನಿತ್ಯಾನಂದನೇ ವೈಷ್ಣವ ದೀಕ್ಷೆಯನ್ನು ಕೊಟ್ಟು ಉದ್ಧರಿಸಿದನು. ಈತನಲ್ಲಿ ಚೈತನ್ಯರಿಗಿದ್ದ ನಂಬಿಕೆಗೆ ಎಂದೂ ಕುಂದುಂಟಾಗಲಿಲ್ಲ. ಈತನಾದರೂ ಅವರು ತನ್ನಲ್ಲಿಟ್ಟಿದ್ದ ನಂಬಿಕೆಗೆ ತಕ್ಕಂತೆಯೇ ನಡೆದು, ತನ್ನ ಶಕ್ತಿಸಾಹಸಗಳನ್ನೆಲ್ಲ ವೆಚ್ಚಮಾಡಿ ವೈಷ್ಣವ ಪಂಥವನ್ನು ಅಭಿವೃದ್ಧಿಗೊಳಿಸಿದನು. ಈತನು ವಯಸ್ಸು ಮೀರಿದಮೇಲೆ ಚೈತನ್ಯರ ಆಜ್ಞೆಗೊಳಪಟ್ಟು ತನ್ನ ಬ್ರಹ್ಮಚರ್ಯ ವ್ರತವನ್ನು ಬಿಟ್ಟು ವಸುಧಾ ಮತ್ತು ಜಾಹ್ನವೀ ಎಂಬಿಬ್ಬರು ಕನ್ಯೆಯರನ್ನು ಮದುವೆಯಾಗಿ ಸಂಸಾರಿಯಾದನು. ಈ ಪತ್ನಿಯರಲ್ಲಿ ಒಬ್ಬಳಾದ ಜಾಹ್ನವಿಯೂ ಮತ್ತು ಪುತ್ರನಾದ ವೀರಚಂದ್ರನೂ ನಿತ್ಯಾನಂದನಂತೆಯೇ ವೈಷ್ಣವಧರ್ಮ ಪ್ರಚಾರದಲ್ಲಿ ಬಹು ಆಸಕ್ತರಾಗಿದ್ದರು.

ಇವರಂತೆಯೇ ಶ್ರೀವಾಸ, ಹರಿದಾಸ, ಲೋಕನಾಥ ಗೋಸ್ವಾಮಿ, ವಾಸುದೇವಸಾರ್ವಭೌಮ, ರಾಮಾನಂದರಾಯ್, ನರಹರಿಸರ್ಕಾರ್ ಮಾನ್ನೀಪಾದನ, ವಾಸುದೇವಘೋಷ್, ಗೋಪಾಲಭಟ್ಟ, ವಕ್ರೇಶ್ವರ ಪಂಡಿತ, ಗೌರೀದಾಸ, ಪರಮಾನಂದಸೇನ, ರಘುನಾಥದಾಸ ಮುಂತಾದ ಅನೇಕಾನೇಕಮಂದಿ ಚೈತನ್ಯರ ಭಕ್ತಬೃಂದದಲ್ಲ ಸೇರಿ ಬಂಗಾಳಾ ಬಿಹಾರ ಒರಿಸ್ಸಾ ಅಸ್ಸಾಂ ಪ್ರಾಂತಗಳಲ್ಲಿ ವೈಷ್ಣವ ಮತವನ್ನು ರೂಢಮೂಲವನ್ನಾಗಿಸಲು ತಮ್ಮ ಸಮಸ್ತವನ್ನೂ ತ್ಯಾಗಮಾಡಿ ಪರಿಶ್ರಮ ಮಾಡಿದರು. ಇವರಲ್ಲಿ ಮಾನ್ನೀಪಾದನನೆಂಬಾತನು, ಶ್ರೀ ಚೈತನ್ಯರು ಸನ್ಯಾಸ ಸ್ವೀಕಾರ ಮಾಡಿದ ತರುವಾಯ ಅವರ ಪತ್ನಿಯಾದ ವಿಷ್ಣುಪ್ರಿಯಾದೇವಿಯ ಬಳಿ

ಯಲ್ಲೇ ಇದ್ದು ಸೇವೆಮಾಡುತ್ತ ಆಕೆಯ ಆಜ್ಞೆಯಿಂದ ಚೈತನ್ಯರ ಮೂರ್ತಿ ಯೊಂದನ್ನು ಮಾಡಿಸಿ, ಅದಕ್ಕೆ ನಿತ್ಯಪೂಜೆ ಆರಾಧನೆಗಳನ್ನು ಸಲ್ಲಿಸುತ್ತಾ ಇದ್ದುದಾಗಿ ಹೇಳಲ್ಪಟ್ಟಿದೆ.



## ಅಧ್ಯಾಯ ೫ "ವೈಕುಂಠ ಯಾತ್ರೆ"

ಶ್ರೀ ಗೌರಾಂಗರು (ಚೈತನ್ಯದೇವ) ದಕ್ಷಿಣ-ಉತ್ತರ ಭಾರತಗಳ ಸಂಚಾರವನ್ನು ಮುಗಿಸಿದ ನಂತರ ಮುಂದೆ ತಾವು ಭೂಮಿಯಮೇಲಿದ್ದ ೧೮ ವರ್ಷಕಾಲವೂ ಜಗನ್ನಾಥಪುರಿಯಲ್ಲೇ ವಾಸಿಸಿ ಶ್ರೀ ಕೃಷ್ಣಸೇವಾ ನಿರತರಾಗಿದ್ದರು. ವಿಶ್ವವ್ಯಾಪಿಯಾದ ಶ್ರೀ ಕೃಷ್ಣಮೂರ್ತಿಯ ಅಖಂಡ ಆರಾಧಕರಾಗಿದ್ದ ಅವರಿಗೆ ಭಕ್ತ್ಯಾಧಿಕ್ಯದಿಂದ ಜಾತಿಮತಗಳ ಹದ್ದು ಅಡ್ಡ ವೆನಿಸುತ್ತಿರಲಿಲ್ಲ. ಶಾಸ್ತ್ರಪುರಾಣಗಳು ವಿವಿಧ ಕರ್ಮಾಚರಣೆಗಳು ಈ ಎಲ್ಲ ವೂ ಅವರ ದೃಷ್ಟಿಯಿಂದ ಮರೆಯಾದುವು. ಅವರು ಶ್ರೀ ಕೃಷ್ಣಸ್ವಾಮಿ ಯು ಶಿಶುರೂಪಿಯಾಗಿ ಅವತರಿಸಿದಾಗಿನಿಂದ ಪರಂಧಾಮಕ್ಕೆ ನಡೆದವರೆಗೆ ತೋರಿಸಿದ ಸಮಸ್ತಲೀಲೆಗಳ ಪ್ರತ್ಯಕ್ಷ ದೃಶ್ಯಗಳನ್ನೂ ಸ್ವತಃ ಕಂಡು ಆನಂದಬಾಷ್ಪಗಳನ್ನು ಸುರಿಸುವರು. ಯಾವ ಪ್ರಾಣಿಯನ್ನೂ ಎಂದೂ ನೋಯಿಸದೆ, ಅತಿಶಯ ಕಠಿಣದ ವ್ರತ-ಉಪವಾಸಾದಿಗಳಿಂದ ಶೀತ ಉಷ್ಣ ಸುಖದುಃಖ-ಮಾನಅಪಮಾನ ಹಿತಶತ್ರು ಮುಂತಾದ ದ್ವಂದ್ವಗಳನ್ನು ಮೀರಿ ಪರಮಪರಿಶುದ್ಧಾತ್ಮರೂ ದಿವ್ಯತೇಜಃಪುಂಜರೂ ಆದರು.

ಮನುಷ್ಯನಿಗೆ ದುಷ್ಕಾರ್ಯದ ಫಲವಾಗಿ ದೂಷಣೆ ಅಪಮಾನಗಳು ಉಂಟಾಗುವಂತೆಯೇ, ಸತ್ಕಾರ್ಯದ ಫಲವಾಗಿ ಸ್ತೋತ್ರಬಹುಮಾನಾದಿ ಗಳೂ ಪ್ರಾಪ್ತವಾಗುವುವು. ಕೇವಲ ಪಾರಮಾರ್ಥಿಕ ಭಾವನೆಯಿಂದ ಸತ್ಕಾರ್ಯಗಳನ್ನು ಮಾಡುವವನು ಈ ಸಂದರ್ಭದಲ್ಲಿ ಬಹು ಎಚ್ಚರದಿಂದ ನಡೆಯಬೇಕು. ಹಾಗಲ್ಲದಿದ್ದರೆ, ಅಹಂಕಾರವೆಂಬ ಶತ್ರುವು ಅವನ ಹೃದ ಯವನ್ನು ಪ್ರವೇಶಿಸಿ ಅವನನ್ನು ನಿರ್ಮೂಲಿಸಿಬಿಡಬಹುದು. ಪರರು ತನ್ನ

ವಿಷಯದಲ್ಲಿ ಮಾಡುವ ಸ್ತೋತ್ರವನ್ನು ವಿವೇಕಿಯಾದವನು ವಿಷದಂತೆ ತ್ಯಜಿಸುವನು. ಸ್ತೋತ್ರಕ್ಕೆ ಉಬ್ಬುವಿಕೆಯು ಮನುಷ್ಯರಲ್ಲಿರುವ ಅಲ್ಪತನವನ್ನು ತೋರಿಸುವ ಚಿಹ್ನೆಯಾಗಿದೆ. ಇದು ಪಾರತ್ರಿಕ ಸಾಧನೆಯಲ್ಲಿ ಒದಗುವ ದೊಡ್ಡದೊಂದು ವಿಘ್ನವಾಗಿದೆ. ಇಂತಹ ಪರೀಕ್ಷೆಗಳು ಅನೇಕರಿಗೆ ಉಂಟಾಗುತ್ತವೆ. ಬುದ್ಧಿವಂತರು ಸತ್ಕಾರ್ಯದ ಫಲಾಫಲಗಳೆರಡನ್ನೂ ಭಗವತ್ಪಾದಕ್ಕೆ ಒಪ್ಪಿಸಿನಿಶ್ಚಿಂತರಾಗಿರುವರು. ಅಲ್ಪರು ಹೊಗಳಿಕೆಗೆ ಮರುಳಾಗಿ ಪಾರತ್ರಿಕ ಅಭಿವೃದ್ಧಿ ಮಾರ್ಗದಲ್ಲಿ ಮುಳ್ಳುಕಲ್ಲುಗಳನ್ನು ಹಾಕಿಕೊಳ್ಳುವರು.

ಇಂತಹ ಪರೀಕ್ಷೆಯು ನಮ್ಮ ಕಥಾನಾಯಕರಿಗೂ ಪ್ರಾಪ್ತವಾಯಿತು. ಅವರ ಕೀರ್ತಿಯು ದಿನದಿನಕ್ಕೆ ದೇಶದೇಶಗಳಲ್ಲಿ ಹಬ್ಬಿ ಅವರ ಭಕ್ತರ ಸಂಖ್ಯೆಯು ಅಸಂಖ್ಯವಾಯಿತು. ಭಕ್ತರ ಕಣ್ಣೆದುರಿನಲ್ಲಿ ಶ್ರೀ ಕೃಷ್ಣ ಚೈತನ್ಯರೇ ಸಾಕ್ಷಾತ್ ಭಗವದವತಾರವೆಂಬ ಭಾವನೆಯು ಮೂಡಿತು. ಅವರನ್ನು ಉನ್ನತ ಪೀಠದಲ್ಲಿ ಕೂರಿಸಿ ಷೋಡಶೋಪಚಾರಗಳಿಂದ ಆರಾಧಿಸುವರು. 'ನರಾವತಾರವನ್ನೆತ್ತಿದ ಪುರುಷೋತ್ತಮನು ನೀನೇ ಎಂದು' ಹೊಗಳುವರು. ಆದರೆ ಕೇವಲ ವಿರಾಗಿಗಳೂ ಶ್ರೀ ವಾಸುದೇವನ ಅನನ್ಯ ಭಕ್ತರೂ ಆದ ಅವರಾದರೋ-"ಅಪ್ಪಾ ಹಾಗಲ್ಲ. ಮೋಸಹೋಗಬೇಡಿ. ನಾನೂ ಮನುಷ್ಯನೇ! ನಾನು ಸನ್ಯಾಸವ್ರತವನ್ನು ಧಾರಣಮಾಡಿದ ಒಬ್ಬ ವಿರಾಗಿಯು. ಮನಸ್ಸು ವಾಕ್ಕು ಕಾಯ ಎಲ್ಲದರಲ್ಲೂ ನಾನು ನಿರ್ವಂಚನೆಯಿಂದ ನಡೆಯಬೇಕು. ನಿರ್ದೋಷಿಯಾಗಿರಬೇಕಾದುದು ನನ್ನ ಕರ್ತವ್ಯವು. ಶುಭ್ರವಾದ ಬಿಳಿಯ ಬಟ್ಟೆಯಲ್ಲಿರುವ ಚಿಕ್ಕದೊಂದು ಕಪ್ಪು ಚುಕ್ಕೆಯು ಹೇಗೆ ಅತಿ ಪ್ರಾಮುಖ್ಯವಾಗಿ ಕಾಣುವುದೋ ಹಾಗೆಯೇ ನಮ್ಮಂತಹವರ ಆಚರಣೆಯಲ್ಲಿನ ಅತ್ಯಲ್ಪದೋಷವೂ ಅತಿ ಮುಖ್ಯವಾಗಿ ಎದ್ದು ಕಾಣುತ್ತದೆ. ಕೊಡದ ತುಂಬ ಹಾಲನ್ನು - ಒಂದು ಬಿಂದು ಮದ್ಯವು ಹೇಗೆ ಅಪವಿತ್ರವನ್ನಾಗಿ ಮಾಡುವುದೋ ಹಾಗೆಯೇ ಲೋಕವು ಅತ್ಯಲ್ಪ ದೋಷ ಕಂಡರೂ ವಿರಕ್ತನನ್ನು ವಿಸರ್ಜಿಸುವುದು" ಎಂದು ಹೇಳುವರು.

ಶ್ರೀ ಚೈತನ್ಯರು ತಮ್ಮ ಹೃದಯಾರಾಧಕನಾದ ಶ್ರೀ ಕೃಷ್ಣಮೂರ್ತಿಯನ್ನು ಕಣ್ಣಾರೆ ಕಂಡು ಧನ್ಯತೆಯನ್ನು ಹೊಂದಬೇಕೆಂಬ ಹೃದಯವೇದನೆ

ಯಿಂದ ಅಹರ್ನಿಶಿ ಹಂಬಲಿಸತೊಡಗಿದರು. ತಾಯಿಯನ್ನು ಬಿಟ್ಟ ಕರುವಿ ನಂತೆ ತೊಳಲುವರು. ಶ್ರೀ ಕೃಷ್ಣಪ್ರಿಯೆಯಾದ ರಾಧೆಯ ಭಾವವನ್ನು ವಹಿಸಿ, ರಾಸಲೀಲೆಯಲ್ಲಿ ಶ್ರೀ ಕೃಷ್ಣನೂ ರಾಧೆಯೊಂದಿಗಿದ್ದಂತೆಯೇ ತಮ್ಮೊಂದಿಗೂ ತಮ್ಮ ನಾಥನಾದ ಶ್ರೀ ಕೃಷ್ಣಸ್ವಾಮಿಯು ಇರುವಂತೆ ಭಾವಿಸಿಕೊಳ್ಳುವರು. ರಾಧಾಕೃಷ್ಣರ ಐಕ್ಯಭಾವವನ್ನೇ ಅನುಭವಗೊಂಡು ಆನಂದಜಲಧಿಮಗ್ನರಾಗುವರು.

ಶ್ರೀ ಕೃಷ್ಣ ಚೈತನ್ಯರ ಮರ್ತ್ಯಲೋಕವಾಸದ ಅವಧಿಕಾಲವು ಮುಗಿ ಯುತ್ತಾ ಬಂದಂತೆ ತೋರಿತು. ಒಂದು ದಿನ ಅವರು ತಮ್ಮ ಶಿಷ್ಯರನ್ನು ಹತ್ತಿರಕ್ಕೆ ಕರದು—"ಕಲಿಯುಗದಲ್ಲಿ ಭವರೋಗಕ್ಕೆ ದಿವ್ಯೌಷಧವೆಂದರೆ ಶ್ರೀ ಹರಿನಾಮ ಸಂಕೀರ್ತನೆಯೊಂದೇ! ಶ್ರೀಕೃಷ್ಣಮೂರ್ತಿಯ ಪಾದ ಕಮಲಗಳಲ್ಲಿಟ್ಟ ಅನನ್ಯ ಭಕ್ತಿಯೊಂದೇ ರಾಮಬಾಣದಂತೆ ಸರ್ವ ದುರಿತ ಗಳನ್ನೂ ನಿವಾರಿಸುವುದು. ಅದು ಜೀವಿತವನ್ನು ಪಾವನ ಮಾಡುವುದು. ಶ್ರೀ ವಲ್ಲಭನ ಪಾದಭಕ್ತಿಯೇ ವ್ರತ ನೇಮ ಜಪ ಯಜ್ಞ ಯಾಗಾದಿ ಸಮಸ್ತವೂ! ಭೋಜನ ಕಾಲದಲ್ಲಿ, ಹಾಸಿಗೆಯಲ್ಲಿ ಮಲಗಿದಾಗ, ನಿಂತಲ್ಲಿ, ಕುಳಿತಲ್ಲಿ, ನಡೆವಾಗ, ಇಲ್ಲಿ ಅಲ್ಲಿ ಎಲ್ಲಿದ್ದರೂ ಹರಿನಾಮವನ್ನು ಸಂಕೀರ್ತನೆ ಮಾಡಿರಿ. ಅದಕ್ಕೆ ಸ್ಥಳ ಕಾಲಗಳ ನಿರ್ಬಂಧವೊಂದೂ ಇಲ್ಲ. ಭಕ್ತನು, ಭಗವತ್ಸನ್ನಿಧಿಯಲ್ಲಿ ತನ್ನನ್ನು ಹುಲ್ಲಿಗಿಂತಲೂ ಕಡೆಯೆಂದು ಭಾವಿಸಿ ಅಹಂ ಕಾರವನ್ನು ಖಂಡಿಸಿಕೊಳ್ಳಬೇಕು. ವೃಕ್ಷವನ್ನು ನೋಡಿ ಸಮಾಧಾನ ಶಾಂತತೆಗಳನ್ನು ಕಲಿಯಬೇಕು. ಮನುಷ್ಯನು ಲೌಕಿಕ ಅಧಿಕಾರ ಐಶ್ವರ್ಯ ಪದವಿಗಳಲ್ಲ ಎಂತಹ ಉನ್ನತ ಸ್ಥಿತಿಯಲ್ಲಿದ್ದರೂ, ಅಹಂಕಾರ ವರ್ಜಿತನಾಗಿ ಶ್ರೀ ವಲ್ಲಭನಿಗೆ ಶರಣು ಹೋಗದಿದ್ದರೆ ಜನ್ಮ ಸಾರ್ಥಕವಾಗುವುದು ಸಾಧ್ಯ ವಲ್ಲ! ನನ್ನ ಪ್ರಿಯಮಿತ್ರರೇ, ಲೌಕಿಕವಾದ ನಿಮ್ಮ ಪ್ರತಿಯೊಂದು ಕಾರ್ಯವನ್ನೂ ಶ್ರೀ ಕೃಷ್ಣ ನಾಮಪೂರ್ವಕ ಮಾಡುತ್ತಾ ಬನ್ನಿರಿ. ಆಗ ನಿಮಗೆ ಶ್ರೀ ಕೃಷ್ಣನ ಪಾದದಲ್ಲಿ ಪ್ರೇಮಭಾಗ್ಯವು ಉತ್ಪನ್ನವಾಗಿ ಬೆಳೆಯ ಸಾಗುವುದು" ಎಂದು ಉಪದೇಶಿಸಿದರು.

ಶ್ರೀ ಜಯಾನಂದ ವಿರಚಿತವಾದ ಚೈತನ್ಯಮಂಗಳ ಗ್ರಂಥದಲ್ಲಿ ಅವರ ಜೀವಮಾನ ಸಮಾಪ್ತಿಯನ್ನು ಕುರಿತು ಹೀಗೆ ಹೇಳಿದೆ. ಕ್ರಿ. ಶ.

೧೫೩೩ ನೆಯ ಸಂ|| ದಲ್ಲಿ ನಡೆದ ಜಗನ್ನಾಥಸ್ವಾಮಿಯ ರಥೋತ್ಸವಕಾಲ ದಲ್ಲಿ ಶ್ರೀ ಕೃಷ್ಣಚೈತನ್ಯರು ತಮ್ಮ ಭಕ್ತರೊಂದಿಗೆ ಸ್ವಾಮಿಯ ಸಂಕೀರ್ತನೆ ಮಾಡುತ್ತಾ ನರ್ತನದಲ್ಲಿ ತೊಡಗಿದ್ದಾಗ್ಗೆ ಅವರ ಕಾಲಿನ ಬೆರಳಿಗೊಂದು ಮೊಳೆಯು ತಗುಲಿ ಗಾಯವಾಯಿತು. ಅದೇ ಪ್ರಬಲವಾಗಿ ಕಾಲು ಬಾತು ಜ್ವರ ಬಂತು. ಚೈತನ್ಯರು ನೆಲಹಿಡಿದು ಮಲಗಿದರು. ಅಂತ್ಯಕಾಲವು ಸಮೀಪಿಸಿತೆಂದು ತೋರಿತು. ಆಗ ಅವರು ತಮ್ಮ ಶಿಷ್ಯರಲ್ಲೊಬ್ಬನನ್ನು ಹತ್ತಿರಕ್ಕೆ ಕರೆದು ತಾವು ಮೂರನೆಯ ರಾತ್ರೆ ಹತ್ತು ಗಂಟೆಗೆ ಭೂಲೋಕ ವನ್ನು ಬಿಡುವೆವೆಂದು ಹೇಳಿದರು. ಆ ವೇಳೆಗೆ ಸರಿಯಾಗಿ ಭಕ್ತರ ಭಜ ನೆಯ ಕೋಲಾಹಲವು ವಿಪರೀತವಾಗಿ ನಡೆಯಸಾಗಿತು. ಶ್ರೀ ಚೈತನ್ಯರು ಪ್ರೇಮಭರದಿಂದ ತಮ್ಮ ದೇಹದ ಸಮಸ್ತ ತಾಪಗಳನ್ನೂ ಮರೆತು ಕೈಗಳೆರ ಡನ್ನೂ ಜೋಡಿಸಿಕೊಂಡು ನಿರ್ಮಲಾಕಾಶದ ಶೂನ್ಯಸ್ಥಳದಲ್ಲಿ ಅವರ ದಿವ್ಯ ಚಕ್ಷುಗಳಿಗೆ ಮಾತ್ರ ಗೋಚರನಾಗುತ್ತಿದ್ದ ಶ್ರೀ ಕೃಷ್ಣಮೂರ್ತಿಯ ಅಲೌ ಕಿಕ ಸೌಂದರ್ಯವನ್ನು ಕಂಡು ಪುಳಕಿತರಾಗುತ್ತ–'ಶ್ರೀ ಕೃಷ್ಣಾ ದ್ವಾರಕಾ ವಾಸ ಜನ್ಮಜನ್ಮದಲ್ಲಿಯೂ ನನಗೆ ನಿನ್ನ ಪಾದಾರವಿಂದದಲ್ಲಿ ಅನನ್ಯಭಕ್ತಿ ಭಾಗ್ಯವನ್ನು ಕರುಣಿಸು' ಎಂದು ಪ್ರಾರ್ಥಿಸಿಕೊಂಡರು. ಅಂತರಿಕ್ಷದಿಂದ ಅವರ ಪುಣ್ಯದೇಹದ ಮೇಲೆ ವಿವಿಧವರ್ಣರಂಜಿತ ಪುಷ್ಪಗಳು ಉದುರಿದುವು. ಸುಮಧುರಮಂದಮಾರುತವು ಬೀಸಿತು. ದೇವಗಂಧರ್ವರ ದಿವ್ಯಗಾಯ ನವೂ ಕೇಳಿಸಿತು. 'ವಿಮಾನವನ್ನು ತನ್ನಿ-ತನ್ನಿ' ಎಂಬ ದೇವದೂತರ ವಾಕ್ಯಗಳು ಅವರಿಗೆ ಕೇಳಿಸಿದುವು. ಭಗವಾನ್ ಕೃಷ್ಣಚೈತನ್ಯರ ಭೌತಿಕ ಕಳೇಬರವು ಭೂಮಿಯಲ್ಲುಳಿಯಲು ಅವರ ಪವಿತ್ರಾತ್ಮವು ಗರುಡಧ್ವಜದ ದಿವ್ಯವಿಮಾನದಲ್ಲಿ ಕುಳಿತು ವೈಕುಂಠಲೋಕವನ್ನು ಕುರಿತು ಪ್ರಯಾಣ ಮಾಡಿತು. ವೈಕುಂಠಯಾತ್ರೆಮಾಡಿದ ಆ ಮಹಾಮಹಿಮರ ಪರಮಪಾವನ ಚರಿತ್ರೆಯ ಭಜನೆಯಲ್ಲಿ ಅವರ ಶಿಷ್ಯರೆಲ್ಲರೂ ಮಗ್ನರಾದರು.



# ಉ ಪ ಸಂ ಹಾ ರ

ಲೋಕದಲ್ಲಿ ಐಶ್ವರ್ಯ ಬುದ್ಧಿಕುಶಲತೆ ವಿದ್ಯಾಮದಾಂಧತೆ ತರ್ಕವಾದ ಮುಂತಾದುವುಗಳು ಹೆಚ್ಚಿ ನಾಸ್ತಿಕತೆಯೂ - ವಾಚಾ ವೇದಾಂತವೂ ಹಬ್ಬಿದ್ದ ದುಷ್ಕಾಲದಲ್ಲಿ, ಜನಾಂಗಕ್ಕೆ ಭಗವಂತನಾದ ಶ್ರೀ ಕೃಷ್ಣ ಪರಮಾತ್ಮನ ಪಾದಾರವಿಂದಗಳಲ್ಲಿ ಭಕ್ತಿಭಾಗ್ಯವನ್ನು ಬೋಧಿಸಿದ ಅನುಪಮ ಕೀರ್ತಿಯು ಭಗವಾನ್ ಶ್ರೀಕೃಷ್ಣ ಚೈತನ್ಯರ ಪಾದಕ್ಕೆ ಸೇರಿದುದು. ಯಾವ ಮಹಾನುಭಾವರು 'ಕಲಿಯುಗದಲ್ಲಿ ನಾಮಸಂಕೀರ್ತನೆಯೊಂದೇ ಪರಮ ಸಾಧಕವಾದುದು' ಎಂಬುದನ್ನು ತಮ್ಮ ಅದ್ವಿತೀಯ ಸಾಧುಜೀವಿತದಿಂದಲೂ, ನವವಿಧ ಭಕ್ತಿ ಪಾರವಶ್ಯತೆಯಿಂದಲೂ ಲೋಕಕ್ಕೆ ಬೋಧಿಸಿದರೋ ಆ ಶ್ರೀ ಕೃಷ್ಣ ಚೈತನ್ಯರ ದಿವ್ಯಜೀವಿತದ ಆದರ್ಶವು ಸರ್ವದಾ ಭಾರತೀಯರ ಕಣ್ಣೆದುರಿನಲ್ಲಿದ್ದು ಅವರಲ್ಲಿ ಜಾತಿಭೇದ ಮತಭೇದಗಳಿಗಾಗಿ ಬಡಿದಾಡುವ ಅಲ್ಪಭಾವಗಳನ್ನು ಹೋಗಲಾಡಿಸಲಿ.—ಸರ್ವೇಶ್ವರನಾದ ಶ್ರೀಕೃಷ್ಣಮೂರ್ತಿಯ ಪಾದಕಮಲಗಳಲ್ಲಿ ಅನನ್ಯಭಕ್ತಿಯು ಸರ್ವರಿಗೂ ಏಕಮಾತ್ರ ಗುರಿಯಾಗಿರಲಿ! ಭಾರತಸಂತಾನರು ಚೈತನ್ಯ ಪ್ರಭುವರ್ಯರ ಆಶೀರ್ವಾದಕ್ಕೂ ಶ್ರೀಕೃಷ್ಣ ಸ್ವಾಮಿಯ ಕೃಪಾಕಟಾಕ್ಷಕ್ಕೂ ಪಾತ್ರರಾಗಿ ಐಕಮತ್ಯದಿಂದ ನಡೆದು ಇಹದಲ್ಲಿ ಸ್ವಾತಂತ್ರ್ಯ ಸೌಭಾಗ್ಯವನ್ನೂ ಪರದಲ್ಲಿ ಅಮೌಲ್ಯ ಸದ್ಗತಿಯನ್ನೂ ಗಳಿಸಿ ಕೃತಕೃತ್ಯರಾಗಲಿ.

ತಥಾಸ್ತು.



-+ ಶ್ರೀರಾಮಸಹಾಯಂ +-

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## ( ಸಚಿತ್ರ ಮಾಸ ಪುಸ್ತಕಾವಳಿ )

**ಮುನ್ನುಡಿ : —**

ಸರ್ವೇಶ್ವರನಾದ ಶ್ರೀರಾಮಚಂದ್ರಮೂರ್ತಿಯ ಸಹಧರ್ಮಿಣಿಯೂ ಲೋಕಮಾತೆಯೂ ಆದ ಶ್ರೀ ಸೀತಾದೇವಿಯ ಪಾವನ ನಾಮವನ್ನು ಅರಿಯದ ಭಾರತೀಯನಾರು ! ಲೋಕದ ಪತಿವ್ರತಾ ಸಮೂಹಕ್ಕೆ ತಿಲಕ ಪ್ರಾಯಳೂ ಮಹಾಸಾಧ್ವಿಯೂ ತ್ರಿಲೋಕಪೂಜ್ಯಳೂ ಆದ ಆ ಜನಕ ಪುತ್ರಿಯ ಪವಿತ್ರ ಚರಿತ್ರೆಯನ್ನು ತಿಳಿಯದ ಸ್ತ್ರೀ ಯಾವಳು ! ಮಹಾರಾಜನ ಮಗಳಾಗಿ, ಚಕ್ರವರ್ತಿಯ ಸೊಸೆಯಾಗಿ, ನರಾವತಾರಿಯಾದ ಪುರುಷೋತ್ತಮನ ಅರ್ಧಾಂಗಿಯಾಗಿದ್ದರೂ ಎಣಿಸಲಾಗದ ಅನಂತ ಕಷ್ಟಸಂಕಟಗಳ ಅನುಭವಕ್ಕೆ ತಲೆಯೊಡ್ಡಿದ ಆ ಚಿರದುಃಖಿನಿಯ ಪರಿತಾಪಕರ ಚರಿತ್ರೆಯನ್ನು ಕೇಳಿ ಕಣ್ಣೀರುದುರಿಸದ ಕಠಿಣ ಹೃದಯನು ಪ್ರಪಂಚದಲ್ಲಾವನಿರುವನು !

ಜಗತ್ತಿನಲ್ಲಿ ಅನಾದಿ ಕಾಲದಿಂದಲೂ ಆಗಿ ಹೋದ ಅನಂತ ಸಂಖ್ಯೆಯ ಪತಿವ್ರತೆಯರಲ್ಲಿ ನಮ್ಮ ಕಥಾನಾಯಿಕೆಯು ಉನ್ನತೋನ್ನತ ಪೀಠವನ್ನು ಆಕ್ರಮಿಸಿರುವಳು. ಈ ಪುಣ್ಯಾತ್ಮಳು ಭೂಮಿಯ ಮೇಲಿದ್ದು ವಾಸಿಸಿ ಈಗ್ಗೆ ಲಕ್ಷಾಂತರ ವರ್ಷಗಳು ಕಳೆದು ಹೋಗಿದ್ದರೂ, ಈಕೆಯ ಚರಿತ್ರೆಯು ಈಗಲೂ ಅಂದಿನ ಅದೇ ಪಾರಿಶುದ್ಧ್ಯತೆಯಿಂದಲೇ ಪ್ರಕಾಶಿಸುತ್ತಿದೆ. ಈಕೆಯ ಆದ್ಯಂತ ಚರಿತ್ರೆಯನ್ನು ಶೋಧಿಸಿ ನೋಡಿದರೂ, ಪತಿವ್ರತಾ ಧರ್ಮಕ್ಕಾಗಲೀ, ಸ್ತ್ರೀಧರ್ಮಕ್ಕಾಗಲೀ ಕಳಂಕತರುವ ಸಂಗತಿಯು ಒಂದಾದರೂ ದೊರೆಯುವುದಿಲ್ಲ. ಇಷ್ಟು ಕಾಲವಾದರೂ, ಗುಣ-ಧರ್ಮಗಳಲ್ಲಿ ಸೀತಾದೇವಿಯನ್ನು ಮೀರಿದ ಅಥವ ಆಕೆಗೆ ಸಮಾನಳಾಗುವ ಸ್ತ್ರೀಯೊಬ್ಬಳಾಗಲೀ ಜನಿಸದಿರುವುದೇ ಸೀತೆಯ ಅದ್ವಿತೀಯ ಚರಿತ್ರೆಯನ್ನು ಸಹಸ್ರ ಮುಖದಿಂದ ಕೀರ್ತಿಸುತ್ತಿದೆ. ಸಕಲ ಕಲ್ಯಾಣಗುಣ ಪೂರ್ಣನಾಗಿ ಶ್ರೀರಾಮನು ಹೇಗೆ ನರಲೋಕದಲ್ಲಿ ಜನಿಸಿ ಪುರುಷೋತ್ತಮನೆಂಬ ಖ್ಯಾತಿಗೆ ಏಕಮಾತ್ರ ಪಾತ್ರನಾಗಿರುವನೋ ಆತನ ಪತ್ನಿಯಾದ ಸೀತಾದೇವಿಯೂ ಸಕಲ ವಿಷಯಗಳಲ್ಲೂ ಆತನಿಗೆ ಅನುರೂಪಳೂ ಅನುಗುಣಳೂ ಆಗಿ ಲೋಕಜನನಿಯೆನಿಸಿರುವಳು.

ಪತಿವ್ರತೆಯರ ಚರಿತ್ರ ಪಠನವು ಪಾಪನಾಶಕವೆಂಬುದೊಂದು ಆರ್ಯ ವಾಕ್ಯವುಂಟಲ್ಲವೆ! ಅದನ್ನನುಸರಿಸಿ ಸೀತೆ ಸಾವಿತ್ರಿ ಸತ್ಯವತಿ ದಮಯಂತಿ ಮುಂತಾದ ಮಹಾಪತಿವ್ರತೆಯರ ಚರಿತ್ರಪಠನವು ಇಹದಲ್ಲಿ ಮಂಗಳವನ್ನೂ ಪರದಲ್ಲಿ ಸದ್ಗತಿಯನ್ನೂ ಉಂಟುಮಾಡುವದು ಎಂಬುದು ವ್ಯರ್ಥವಾದ ಶಂಕೆಯಲ್ಲ - ಅದರಲ್ಲಿ ಒಂದು ತತ್ವವುಂಟು. ಮನುಷ್ಯನು ಅಂತಃಕರಣ ಜೀವಿಯಾಗಿದ್ದಾನೆಂಬುದು ಪ್ರಾಜ್ಞಮತವಷ್ಟೆ! ಮಹಾತ್ಮರ ಚರಿತ್ರೆಗಳ ಪಠನೆಯು ಮನಸ್ಸಿನಮೇಲೆ ಉತ್ತಮ ಪರಿಣಾಮವನ್ನುಂಟುಮಾಡಿ, ಮಹತ್ವದ ವಿಚಾರಗಳಿಗೆ ಪ್ರವೇಶವನ್ನುಂಟುಮಾಡುವುದು. ಸದಾ ಉತ್ತಮ ವಿಚಾರಗಳಲ್ಲೇ ಪ್ರವೃತ್ತಿಯುಳ್ಳ ಮನುಷ್ಯ ( ಸ್ತ್ರೀ ಅಥವ ಪುರುಷ ) ನ ಮನಸ್ಸಿನಲ್ಲಿ ಹೀನ ವಿಚಾರಗಳ ಪ್ರವೇಶಕ್ಕೆ ಅವಕಾಶವೇ ಇರುವದಿಲ್ಲ. ದೇಹದ ಇಂದ್ರಿಯಗಳನ್ನು ರೂಢಿಸಿ ಆಳುವ ಪ್ರಭು ಸಮಾನ ಶಕ್ತಿಯು ಮನಸ್ಸೇ ಆದ್ದರಿಂದ, ಅದು ಮೇಲೆ ಹೇಳಿದಂತೆ ಸದ್ವೃತ್ತಿಯಲ್ಲಿರುವಾಗ ಅದರ ಸೇವಕ ಭಾವದಲ್ಲಿರುವ ವಾಕ್ಕು ಪಾಣಿ ಪಾದ ಮುಂತಾದುವುಗಳ ಎಲ್ಲಾ ಬಗೆಯ ಕ್ರಿಯೆಗಳೂ ಅದನ್ನನುಸರಿಸಿ ನಡೆಯುವುದು ಸ್ವಾಭಾವಿಕವೇ ಆಗಿದೆ. ಹೀಗೆ ಮನಸಾ ವಚಸಾ ಕರ್ಮಣಾ ಮನುಷ್ಯನ ಸ್ಥಿತಿಯು ಉತ್ತಮಗೊಂಡಿತೆಂದರೆ, ಅವನ ಐಹಿಕ ಪಾರತ್ರಿಕಗಳ ಗತಿಯೂ ಉತ್ತಮಗೊಳ್ಳದೆ ಮತ್ತೇನು ಮಾಡೀತು!

‘ಉತ್ತಮ ಗುಣೋಪೇತರಾದ ಪುರುಷರು ಪುರುಷವರ್ಗಕ್ಕೆ ಆದರ್ಶರಾಗುವಂತೆ ಮೇಲ್ಕಂಡ ಮಹಾ ಪತಿವ್ರತೆಯರು ಸ್ತ್ರೀ ವರ್ಗಕ್ಕೆ ಉದಾಹರಣಸ್ವರೂಪರಾಗಬಹುದು,—ಅವರನ್ನು ಸ್ಮರಿಸುವುದರಿಂದ ಸ್ತ್ರೀಯರು ಪ್ರಯೋಜನ ಹೊಂದಬಹುದು. ಆದರೆ ಪುರುಷ ವರ್ಗಕ್ಕೆ ಅದರಿಂದ ಪ್ರಯೋಜನವೇನೆ’ಂದು ಒಂದು ಸಂದೇಹ ಉಳಿದೀತು! ಅದರಲ್ಲಿ ಒಂದು ಸಂಗತಿಯುಂಟು. ಸ್ತ್ರೀ ವಿರಹಿತನಾಗಿ ಪ್ರಪಂಚದಲ್ಲಿ ಜೀವಿಸುವುದು ಸಾಧ್ಯವೆಂದು ತೀವ್ರವಿರಾಗಿಯೊಬ್ಬನು ಹೇಳಬಹುದಲ್ಲದೆ ಸಾರ್ವತ್ರಿಕವಾಗಿ ಮನುಷ್ಯಸಮೂಹಕ್ಕೆ ಅದು ಸಾಧ್ಯವಿಲ್ಲ. ಸ್ತ್ರೀ ವಿರಹಿತನಾದ ವ್ಯಕ್ತಿಯು ಪೂರ್ಣಮನುಷ್ಯನಾಗಲಾರನು. ಅವನ ಗುಣಧರ್ಮಗಳು ಪ್ರಾಪಂಚಿಕವಾಗಿ ಪೂರ್ಣತೆಯನ್ನು ಹೊಂದಲಾರವು. ಲೋಕವು ಪ್ರಕೃತಿಮಯವಾದುದರಿಂದ, ಪ್ರಕೃತಿ ದೇವತೆಯ ಅಂಶಭೂತಳಾದ ಸ್ತ್ರೀ ವ್ಯಕ್ತಿಯಿಂದ ಸಹಿತನಾಗದವನು ಮಾನುಷವಾದ ಅನೇಕ ವಿಚಾರಗಳಲ್ಲಿ ಅಪೂರ್ಣನಾಗುವನು.

ಆವನು ಮಹಾಪುರುಷರ ಚರಿತ್ರ ಪಠನೆಯಿಂದ ವೀರನಾಗಬಹುದು ಧೀರನಾಗಬಹುದು ಮಹಾಪರಾಕ್ರಮಿಯಾಗಬಹುದು ಶತ್ರುಸಂಹಾರಕನಾಗಬಹುದು; ಅದ್ವಿತೀಯ ತ್ಯಾಗಿಯಾಗಬಹುದು ಎಂಬೋಣ! ಆದರೆ ಆದರಿಂದ ದಯೆ ಮಮತೆ ಪ್ರೇಮ ಮುಂತಾದ ಗುಣಗಳು ಅವನಲ್ಲಿ ಉಂಟಾಗದಿರಬಹುದು. ದುಃಖಿಗಳನ್ನು ನೋಡಿ ಕನಿಕರ ಪಡುವ ಸ್ವಭಾವವು ಅವನಲ್ಲಿ ತಲೆದೋರದಿರಬಹುದು. ಅನಾಥರನ್ನು ನೋಡಿ ಎದ ಕರಗುವ ಮರುಕಗುಣವು ಅವನಲ್ಲಿ ಮೂಡದಿರಬಹುದು. ಈ ಪತಿವ್ರತೆಯರು ಸ್ತ್ರೀ ಸಂಬಂಧ ಉತ್ತಮ ಗುಣಗಳ ಆರಾಧ್ಯ ಮೂರ್ತಿಗಳಾದುದರಿಂದ ಇವರ ನಿರಂತರ ನಾಮಸ್ಮರಣೆಯಿಂದ ಆ ಸಂಬಂಧ ಶ್ರೇಯಸ್ಸು ಹಾಗೆ ಭಜನೆ ಮಾಡುವವನಲ್ಲೂ ಮೂಡದಿರದು.—ಅಲ್ಲದೆ ಸ್ತ್ರೀಯು ಜಗನ್ಮಾತೃಸ್ವರೂಪಳು. ಮಾತೃದೇವತಾ ಸಮಾನಳಾದ ಆಕೆಗೆ ಇವರವರನ್ನದ ಎಲ್ಲರೂ ಗೌರವಿಸಬೇಕಾದುದೂ ಕರ್ತವ್ಯವು! ಆದುದರಿಂದಲೂ ಈ ಪತಿವ್ರತೆಯರು ಸರ್ವತ್ರ ಪೂಜನೀಯರೂ ಗೌರವನೀಯರೂ ಆಗಿದ್ದಾರೆ.

ನಮ್ಮ ಕಥಾನಾಯಿಕೆಯು, ಸ್ತ್ರೀಯು ತನ್ನ ಪತಿಯನ್ನು ದುಃಖದಲ್ಲೂ-ಸುಖದಲ್ಲೂ, ವಿಭವದಲ್ಲೂ- ವಿಪತ್ತಿನಲ್ಲೂ, ಸಂಪತ್ತಿನಲ್ಲೂ - ಆಪತ್ತಿನಲ್ಲೂ ಹೇಗೆ ಅನುಸರಿಸಬೇಕೆಂಬುದನ್ನು ಬಹು ಚನ್ನಾಗಿ ಪ್ರದರ್ಶಿಸಿರುವಳು ಸ್ತ್ರೀಗೆ ತಂದೆ ತಾಯಿ ಬಂಧು ಭಾಗ್ಯ ಮುಂತಾದ ಎಲ್ಲಕ್ಕಿಂತಲೂ ಪತಿಯೇ ಮುಖ್ಯವೆಂಬ ತತ್ವವನ್ನು ತನ್ನ ಆಚರಣೆಯಿಂದಲೇ ಪ್ರದರ್ಶಿಸಿರುವಳು ತನ್ನ ಸ್ತ್ರೀ ಧರ್ಮಪಾಲನೆಯಲ್ಲಿ ತನಗೆ ಆಗಾಗ್ಗೆ ಪ್ರಾಪ್ತವಾಗುತ್ತಿದ್ದ ಸಮಸ್ತ ದುಃಖಗಳನ್ನೂ ಸೆರಗೊಡ್ಡಿ ಪಡೆದು - ಆಗಲೂ ಅಂತಹ ಕಷ್ಟಗಳನ್ನು ತಂದೊಡ್ಡಿದುದಕ್ಕಾಗಿ ತನ್ನ ಪತಿಯನ್ನಾಗಲೀ ಮತ್ತಾರನ್ನಾಗಲೀ ದೂಷಿಸದೆ, ಗೊಣಗಿಕೊಳ್ಳದೆ ಕೇವಲ ಸಮಾಧಾನದಿಂದ ಅನುಭವಿಸಿರುವಳು. ಇಂತಹ ಈ ಪುಣ್ಯಾತ್ಮಳ ಚರಿತ್ರೆಯೂ ನಮ್ಮ ಕರ್ನಾಟಕ ಬಾಲಿಕಯರ ಮತ್ತು ಸ್ತ್ರೀ ವರ್ಗದ ಆದರಣೆಗೆ ಪಾತ್ರವಾಗಲೆಂದೂ - ಕರ್ನಾಟಕ ಮಹಾಜನರಾದರೂ ಯಥಾಪೂರ್ವಕವಾಗಿ ಈ ಕುಸುಮವನ್ನೂ ಆಘ್ರಾಣಿಸಿ ಗ್ರಂಥಮಾಲೆಯನ್ನು ಪ್ರೋತ್ಸಾಹಿಸುವರಾಗಲೆಂದೂ ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ,
ತಾ|| ೩೦—೧೧—೧೯೨೭.

ಇತಿ ಸುಜನ ವಿಧೇಯ,
**ಯಂ. ರಾಮರಾವ್.**

## ॥ ಭಾಮಿನಿ ಷಟ್ಪದಿ ॥

ಏಕವೇಣೀಧರೆಯು ನಶ್ರುಜ |
ಲಾಕುಲಾಯುತಲೋಚನೆಯುನು |
ದ್ರೇಕಶೋಕಾನ್ವಿತೆಯು ನಂತಸ್ತಾಪ ವಿಹ್ವಲೆಯು ||
ಶೋಕವನದಡಿಯಧಿಕ ಪುಣ್ಯ |
ಶ್ಲೋಕ ಚರಿತೆಯು ಮಲಿನ ಪಟಸರಿ |
ದಾಕೃತೆಯು ನವಿರಳ ಕೃಶಾಂಗಿಯು ಕಂಡನಾ ಹನುಮ ||

ಪದ್ಮಗಂಧಿಯು ಪದ್ಮವದನೆಯು |
ಪದ್ಮಸದ್ಮನಿವಾಸನೆಯು ಪದ |
ಪದ್ಮಕರ ಪದ್ಮಂಗಳೊಪ್ಪುವ ಪದ್ಮಲೋಚನೆಯು ||
ಪದ್ಮಜಾಂಬಕಿ ಪದ್ಮಿನಿಯು ಹೃ |
ತ್ಪದ್ಮದೊಳು ರಘುರಾಮ ಚಂದ್ರನ |
ಪದ್ಮಪಾದವ ನೆನೆವ ಸೀತೆಯು ಕಂಡನಾ ಹನುಮ ||

ಬಿಸಜಸಂಭವ ಜನಿತಜನನಿಯು |
ಕುಸುಮಶರ ನಂಬಿಕೆಯು ಭುವನ |
ಪ್ರಸರಚರಿತೆಯು ಪುಣ್ಯಾಭರಿತೆಯು ನಧಿಕಸುವ್ರತೆಯು ||
ಪಶುಪತಿ ಬ್ರಹ್ಮಾಮರೇಂದ್ರನ |
ಶಶಿವದನೆಯರ ಭಾಗ್ಯಲಕ್ಷ್ಮಿಯು |
ನಸದಳವ ಮಾಯಾವಿನೋದೆಯು ಕಂಡನಾ ಹನುಮ ||

"ಸುಂದರಕಾಂಡ"

ಲೋಕಮಾತೆ ಸಮಸ್ತ ದಿವಿಜಾ |
ನೀಕಪೂಜಿತೆ ಸುರನರೋರುಗ |
ಲೋಕವಂದಿತೆ ವಿಷ್ಣುವಲ್ಲಭೆ ಸಕಲ ಜಗಭರಿತೆ ||
ಏಕನಾಥೆ ಪುರಾಣ ಪುಣ್ಯಾ |
ಶ್ಲೋಕೆ ಪಾವನಚರಿತೆ ಮಾಯಾ |
ಶ್ರೀ ಕಮಲೆ ನಮೊಯೆನುತ ನ್ಯೆಯಿಕ್ಕಿತು ಸುರವ್ರಾತ ||

"ಯುದ್ಧಕಾಂಡ"



ಶ್ರೀ ಸೀತಾದೇವಿ — ಅಶೋಕವನ.

॥ ಶ್ರೀರಾಮಸಹಾಯಂ ॥

ಶ್ರೀರಾಮಪತ್ನಿ-ಮಹಾಪತಿವ್ರತೆ

# ಶ್ರೀ ಸೀತಾದೇವಿ



**ಅಧ್ಯಾಯ ೧** **"ಅಯೋನಿಜೆ"**

ನಮ್ಮ ಮಾತೃಭೂಮಿಯಾದ ಭಾರತದೇಶವು ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಪಡೆದು ಹಿಂದಿನಂತೆಯೇ ಇಂದೂ ಕೃತಕೃತ್ಯವೆನಿಸಬೇಕಾದರ, ಅದು ಪತಿವ್ರತೆಯರಾದ ಸ್ತ್ರೀ ವರ್ಗವನ್ನೇ ಆಶ್ರಯಿಸಬೇಕಾಗಿದೆ. ಇವುಗಳಲ್ಲಿ ಧರ್ಮ-ಅರ್ಥ-ಕಾಮಗಳ ರಕ್ಷಣೆಗಾಗಲೀ-ದುರ್ವ್ಯಯಕ್ಕಾಗಲೀ ಸ್ತ್ರೀಯರೇ ಕಾರಣರೆಂಬ ವಿಷಯದಲ್ಲಿ ಏನೂ ಸಂಶಯವಿಲ್ಲ. ಆದರೆ ಮೋಕ್ಷವೂ ಸ್ತ್ರೀಯರಿಂದಲೇ ಹೇಗೆ ಪ್ರಾಪ್ತಿಸುವುದು ಎಂಬುದು ಮಾತ್ರ ವಿಚಾರಣೀಯ ಸಂಗತಿಯಾಗಿದೆ. ಆ ವಿಚಾರದಲ್ಲಿ ನಾಲ್ಕು ಮಾತುಗಳನ್ನು ಇಲ್ಲಿ ಹೇಳುತ್ತೇವೆ.

'ಸ್ತ್ರೀಯು ಜಗನ್ಮಾತೃಸ್ವರೂಪಿಣಿ' ಯೆಂದು ಮುನ್ನುಡಿಯಲ್ಲಿ ಹೇಳಿದ್ದೇವೆ. ಪ್ರಪಂಚದಲ್ಲಿ ಸಮಸ್ತ ಮಾನುಷಜೀವಿಗಳನ್ನೂ ನವಮಾಸ ಗರ್ಭದಲ್ಲಿ ಹೊತ್ತು ಪಡಲಾಗದ ಅನಂತ ಕಷ್ಟಗಳನ್ನ ಅನುಭವಿಸಿ, ವಿಚಿತ್ರ ಸಂಕಟಗಳನ್ನು ಸಹಿಸಿ ಪ್ರಸವಿಸಿದ ತಾಯಿಯು ಸ್ತ್ರೀ ವ್ಯಕ್ತಿಯಲ್ಲವೇನು! ಮುಂದೆ, ಹಾಲಹಸುಳೆಯಾಗಿ ಕೇವಲ ಪರಾಧೀನವಾಗಿ ಅಜ್ಞಾನಿಯಾಗಿ ಮೂತ್ರ ಪುರೀಷಗಳಲ್ಲಿ ಬಿದ್ದು ಉರುಳಾಡುವಾಗಿನಿಂದ ಸ್ವಶಕ್ತಿಯಿಂದ ನಡೆದಾಡುವ ಮಗುವಾಗುವವರೆಗೆ ಎತ್ತಿ ಆಡಿಸಿ ಮೊಲೆಯೂಡಿ, ಹೊಟ್ಟೆ

ಬಟ್ಟೆಗಳನ್ನು ಕಟ್ಟಿ - ನಿದ್ರೆ ಆಯಾಸಗಳನ್ನು ಮರೆತು ಪೋಷಿಸಿದ ತಾಯಿಯು ಸ್ತ್ರೀ ವ್ಯಕ್ತಿಯಲ್ಲವೇನು! ತರುವಾಯ ಬಾಲಕನ ಹೊಟ್ಟೆ - ನೆತ್ತಿಗಳನ್ನು ಗಮನಿಸಿ, ಉಣಲಿಟ್ಟು - ಉಡಲಿತ್ತು, ತನ್ನ ಸುಖಕಷ್ಟಗಳನ್ನೆಣಿಸದ ಪೋಷಿಸಿದ ತಾಯಿಯು ಸ್ತ್ರೀ ವ್ಯಕ್ತಿಯೇ ಅಲ್ಲವೇನು!—ಆ ಮೇಲೆ ಪ್ರಬುದ್ಧನಾದ ಮಗನ ಪೋಷಣೆಯು-ತಾಯಿಯೆಂಬ ಆ ವ್ಯಕ್ತಿಯಿಂದ ಪುನಃ ಹೆಂಡತಿಯೆಂಬ ಸ್ತ್ರೀ ವ್ಯಕ್ತಿಗೇ ವರ್ಗವಾಗುವುದು ; ಆಕೆಯಾದರೂ ತನ್ನ ಪತಿಯ ದೇಹಪೋಷಣೆಯ ವಿಚಾರದಲ್ಲಿ ಮಾತೃಸ್ಥಾನವನ್ನೇ ವಹಿಸುವಳೆಂಬುದಕ್ಕೆ ಆರ್ಯ ವಾಕ್ಯವುಂಟಲ್ಲವೆ! ಹೀಗೆ ಭೂಮಿಗೆ ಬಿದ್ದ ಕ್ಷಣದಿಂದ - ಭೂಮಿಯಿಂದ ಹೊರಡುವ ಕ್ಷಣದವರೆಗಿನ ಸಮಸ್ತ ವಿಧವಾದ ಪೋಷಣಾ ಕಾರ್ಯವೂ ಪ್ರಾಣಿಗೆ ಸ್ತ್ರೀ ವ್ಯಕ್ತಿಯಿಂದಲೇ ನಡೆಯಬೇಕಾಗಿದೆ. ಇದರಿಂದ 'ಸ್ತ್ರೀಯು ಜಗತ್ತಿಗೇ ಮಾತೃಸ್ವರೂಪಿಣಿ' ಯಾದವಳು ಎಂಬುದು ಸಿದ್ಧವಾಗುವುದಲ್ಲವೆ!

ಹೀಗೆ ಶಿಶುತನ ಬಾಲ್ಯ ಯೌವನ ಕೌಮಾರ ವಾರ್ಧಕ್ಯ ಮುಂತಾದ ಸಕಲ ಅವಸ್ಥೆಗಳಲ್ಲೂ ಪ್ರಕೃತಿ ಧರ್ಮದಿಂದ ಮನುಷ್ಯನ ಪೋಷಣೆಯನ್ನು ವಹಿಸಿರುವ ಸ್ತ್ರೀ ವ್ಯಕ್ತಿಯ ನಿಕಟ ಸಂಬಂಧದಿಂದ ಅವನ ಮನಸ್ಸಿನ ಮೇಲಾಗುವ ಪರಿಣಾಮವೇನೆಂಬುದನ್ನು ಪ್ರಾಜ್ಞರು ಯೋಚಿಸಬೇಕಾಗಿದೆ. ಶಿಶುತನವು ಕೇವಲ ಅಜ್ಞಾನಾವಸ್ಥೆಯಾದುದರಿಂದ ಆಗಿನ ಅನುಭವಗಳು ಮನುಷ್ಯನಲ್ಲಿ ಚಿರಸ್ಥಾಯಿಯಾಗಿ ನಿಲ್ಲಲಾರವು. ಆದರೆ ಬಾಲ್ಯದ ಅನುಭವಗಳು ಹಾಗಲ್ಲ. ಬಾಲ್ಯದಲ್ಲಿ ಮನಸ್ಸೂ ದೇಹದ ಸಮಸ್ತ ಇಂದ್ರಿಯಗಳೂ ಬಹು ತೀವ್ರ ಗತಿಯಿಂದ ಜಾಗ್ರತಗೊಳ್ಳುತ್ತಿರುವುವು. ಆಗ ಯಾವ ಬಗೆಯ ಅನುಭವವುಂಟಾದರೂ ಅದು ವಜ್ರ ಲೇಪದಂತೆಯೂ - ಶಿಲಾ ಲೇಖನದಂತೆಯೂ ಮಾನಸಭಿತ್ತಿಯಲ್ಲಿ ಸ್ಥಿರವಾಗಿ ನಿಂತು ಹೋಗುವುದು. ಬಾಲಕರು ಸರ್ವದಾ ತಾಯಿಯರ ಅಥವ ಅಕ್ಕ ತಂಗಿ ಮುಂತಾದ ಸ್ತ್ರೀ ವ್ಯಕ್ತಿಗಳ ನಿಕಟ ಸಂಬಂಧದಲ್ಲಿರುವುದರಿಂದ ಅವರ ಗುಣ ಕರ್ಮಗಳು ತಪ್ಪದೆ ಆ ಬಾಲಕರಲ್ಲೂ ಅನಿವಾರ್ಯವಾಗಿ ಮೂಡುವುವು. ಅವರು ಧರ್ಮ ಗುಣವುಳ್ಳವರಾದರೆ, ಅವರ ಮಕ್ಕಳು ಧರ್ಮಾತ್ಮರಾಗುವರು. ಅವರು ಕಳ್ಳರಾದರೆ ಮಕ್ಕಳೂ ಕಳ್ಳರೂ,-ದುಷ್ಟರಾದರೆ ದುಷ್ಟರೂ, ನಿಷ್ಠುರಿಗಳಾದರೆ

ನಿಷ್ಠುರಿಗಳೂ ಆಗುವರು. ಅಂತೆಯೇ ಆ ಮಾತೆಯರು ದಯಾಭರಿತಚಿತ್ತವುಳ್ಳವರಾದರೆ ಮಕ್ಕಳೂ ದಯಾಮಯರಾಗುವರು. ಕೋಪಿಗಳಾದರೆ-ಅವರೂ ಕೋಪಿಗಳಾಗುವರು. ಭಗವದ್ಭಕ್ತಿಯುಳ್ಳವರಾದರೆ ಮಕ್ಕಳಾದರೂ-ಭಗವದ್ಭಕ್ತರೇ ಆಗುವರು. ಹೀಗೆ ಬಾಲ್ಯವಯಸ್ಸಿನ ಮಾನುಷ ವ್ಯಕ್ತಿಗಳ ಗುಣ ಧರ್ಮಗಳು ತಪ್ಪದೆ ಅವರ ತಾಯಿಯರನ್ನು ಅವಲಂಬಿಸಿರುವುವು ಮುಂದೆ ಯೌವನ-ಕೌಮಾರಾವಸ್ಥೆಗಳಲ್ಲಿ ಸ್ತ್ರೀಯರು ಮನುಷ್ಯನ ಅರ್ಥ-ಕಾಮಗಳ ವಿಚಾರದಲ್ಲಿ ಭಾಗಿಗಳಾಗುವರು. ಅವನ ಪ್ರಕೃತಿ ಧರ್ಮ ವಿಚಾರವು ಬಾಲ್ಯದ ಅನುಭವವನ್ನು ಅನುಸರಿಸಿರುವುದಾದರೂ, ಅರ್ಥ ಕಾಮಗಳ ವಿಚಾರದಲ್ಲಿ ಅವನು ತನ್ನ ಪತ್ನಿಯ ಆಡಳಿತಕ್ಕೆ ಒಳಪಡುವನು. ಆಕೆಯು ಉದಾರಿಯೂ ಧರ್ಮಪರಾಯಣಳೂ ಅತಿಥಿ ಸತ್ಕಾರ ನಿರತಳೂ, ನಿಷ್ಪಕ್ಷಪಾತಿಯೂ ಆಗಿದ್ದರೆ, ಅವನು ಬಡವನೇ ಆಗಿದ್ದರೂ ಅವನ ಮನೆಯು ಹತ್ತು ಜನಗಳಿಗೆ ಆಶ್ರಯವಾಗಿ ತುತ್ತು ಅನ್ನ-ಗುಟುಕು ನೀರು ದೊರವಂತಿರುವುದು ಆಕೆಯು ಲೋಭಿಯೂ ಚಂಡಿಯೂ ಕರ್ಕಶಿಯೂ ಸ್ವಾರ್ಥಪರಳೂ ಆಗಿದ್ದರೆ, ಅವನ ಮನೆಯು ಬೇಕಾದಷ್ಟು ವಿಶಾಲವಾದುದಾಗಿರಲಿ-ಐಶ್ವರ್ಯಸಂಪನ್ನವಾದುದಾಗಿರಲಿ, ನಿರ್ಜನವಾದ ಅರಣ್ಯದಂತೆಯೂ - ಘೋರ ಸ್ಮಶಾನದಂತೆಯೂ ಭೀಕರವಾಗಿ ಯಾರೊಬ್ಬರ ಪ್ರವೇಶಕ್ಕೂ ಆಸ್ಪದವಿಲ್ಲದಂತೆ ಇರುವುದು. ಆಕೆಯು ಮಿತವ್ಯಯಿಯೂ ಶುಚಿಪರಳೂ ಆಗಿದ್ದರೆ, ಇದ್ದುದರಲ್ಲೇ ಶುಚಿ ರುಚಿಯಾಗಿ ಪದಾರ್ಥಗಳನ್ನು ಮಾಡಿ - ಮಿಗಿಸಿಟ್ಟು ಜೋಪಾನಮಾಡುವಳು. ಅವಳು ಆಡಂಬರ ಪ್ರಿಯಳೂ ದುಂದುಗಾರ್ತಿಯೂ ಆದರೆ ಎಷ್ಟು ಬಂದರೂ ಲಕ್ಷ್ಯವೇ ಇಲ್ಲದೆ ಬಂದುದೆಲ್ಲವನ್ನೂ ವ್ಯಯಗೊಳಿಸಿ ಮನೆಯನ್ನು ಸದಾ ಬರಿದನ್ನಾಗಿಯೇ ಮಾಡಿರುವಳು. ಆಕೆಯು ಪತಿವ್ರತೆಯೂ ಲಜ್ಜಾವತಿಯೂ ಆಗಿದ್ದರೆ, ತನ್ನ ಪತಿ ಪುತ್ರರನ್ನು ಮನೆ ಬಿಟ್ಟು ಯಾವುದಕ್ಕೂ ಹೊರಕ್ಕೆ ಹೋಗದಂತೆ ನೋಡಿಕೊಂಡು ಸಂಸಾರವನ್ನು ಗಾಂಭೀರ್ಯದಿಂದ ನಡೆಸುಸುವಳು. ಅವಳು ವ್ಯಭಿಚಾರಿಣಿಯೂ ಮಾನಗೆಟ್ಟ ಬಾಯಾಳಿಯೂ ಆಗಿದ್ದರೆ ತಾನು ಮಾತ್ರವಲ್ಲ ಆ ಮನೆಯಲ್ಲಿ ಯಾರೂ ಸಮಾಧಾನದಿಂದ ವಾಸಿಸಲೆಡೆಯಿಲ್ಲದೆ, ... ಪುತ್ರರು ದಿಕ್ಕುಕೆಟ್ಟು ಅಲೆಸುಂತಾಗುವುದು ತಪ್ಪದು. ಹೀಗೆ

ಮನುಷ್ಯನ ಅರ್ಥವನ್ನಾಗಲೀ ಕಾಮವನ್ನಾಗಲೀ ಉತ್ತಮ ರೀತಿಯಿಂದ ವ್ಯಯಗೊಳಿಸಿ - ಊರ್ಜಿತಗೊಳಿಸಿ ರಕ್ಷಿಸುವ ಕಾರ್ಯವಾಗಲೀ, ಭ್ರಷ್ಟಗೊಳಿಸಿ ನಾಶಮಾಡುವ ಕಾರ್ಯವಾಗಲೀ ಸ್ತ್ರೀಯನ್ನೇ ಅವಲಂಬಿಸಿದೆ. ಅವನು ಬಹು ಪ್ರಬಲನಾಗಿರಬಹುದು - ವಿದ್ಯಾವಂತನಾಗಿರಬಹುದು - ಧರ್ಮಾತ್ಮನಿರಬಹುದು, ಆದರೂ ಗೃಹದಲ್ಲಿನ ಆ ಕಾರ್ಯಗಳು ಮಾತ್ರ ಗೃಹಿಣಿಯ ಇಷ್ಟದಂತಲ್ಲದೆ ಅನ್ಯಥಾ ನಡೆಯಲಾರವು. ಹಾಗೆಯೇ ಪುರುಷನು ದುಷ್ಟನೂ ದುರಾಚಾರಿಯೂ ಮೂರ್ಖನೂ ದುಂದುಗಾರನೂ ಕುಡುಕನೂ ಘಾತುಕನೂ ಆಗಿದ್ದ ಸಂದರ್ಭದಲ್ಲೂ ಅವನ ಸತಿಯು ಸದ್ಗುಣಿಯಾಗಿದ್ದರೆ, ಅವನ ಅರ್ಥಕಾಮಗಳನ್ನು ಯುಕ್ತಮಾರ್ಗದಿಂದ ರೂಢಿಸಿ ಉತ್ತಮಗೊಳಿಸುವುದಲ್ಲದೆ ಅವನನ್ನೂ ಸನ್ಮಾರ್ಗಕ್ಕೆ ತಂದ ಸಂಭವಗಳೂ ಉಂಟು.

ಮುಂದೆ ಮೋಕ್ಷವೆಂಬ ಪುರುಷಾರ್ಥವೂ ಸ್ತ್ರೀವ್ಯಕ್ತಿಯನ್ನೇ ಅನುಸರಿಸುವ ವಿಚಾರವನ್ನು ಕುರಿತು ಇನ್ನು ಯೋಚಿಸಬೇಕಾಗಿದೆ. 'ಮನವೇವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ' ಎಂಬ ಆರ್ಯವಾಕ್ಯವು ಚಿರಪರಿಚಿತವಾದುದಷ್ಟೆ! ಮೇಲ್ಕಂಡಂತೆ ಶಿಶುತನ ಬಾಲ್ಯ ಯೌವನ ಕೌಮಾರಾವಸ್ಥೆಗಳಲ್ಲಿ ಸ್ತ್ರೀಯ ನಿಕಟ ಸಂಬಂಧದಲ್ಲಿದ್ದು ಬೆಳೆದು ರೂಪಿಸಲ್ಪಡುವುದಾದುದರಿಂದ ಆ ಸ್ತ್ರೀಯರ ಮನಸ್ಸು ಉದಾರವಾದುದೂ - ಧರ್ಮಪರವಾದುದೂ ಶ್ರೇಷ್ಠಭಾವನೆಗಳನ್ನೇವುಳ್ಳುದೂ ಆದರೆ ಅವರೊಡನಿದ್ದು ಬೆಳೆವ ಪುರುಷರ ಮನಸ್ಸು ಅದಕ್ಕೆ ತಕ್ಕ ಗತಿಯುಳ್ಳುದಾಗುವುದು. ಹಾಗಲ್ಲದೆ, ಅದು ಹೇಡಿತನ ಕಾಪಟ್ಯ ಆಲಸ್ಯ ವಿಷಯಲಂಪಟತ್ವ ಮುಂತಾದ ಭಾವನೆಗಳನ್ನುಳ್ಳುದಾದರೆ ಅದನ್ನನುಸರಿಸಿ ನಡೆವ ಪುರುಷರ ಮನಸ್ಸೂ, ಅದೇ ಗತಿಯಲ್ಲೇ ಸಾಗುತ್ತದೆ. ಅದು ಧೈರ್ಯ ಸಾಹಸ, ಪರಾಕ್ರಮ, ಸ್ವಾತಂತ್ರ್ಯಾಪೇಕ್ಷೆ, ಈಶತತ್ಪರತೆ ದೇಶಾಭಿಮಾನ ಮುಂತಾದ ಭಾವನೆಗಳಿಂದ ಕೂಡಿದ್ದರೆ, ಅದೇಗುಣಗಳು ಅವರ ಮನಸ್ಸಿನಮೇಲೆ ಮೂಡುತ್ತವೆ.—ಹಾಗಲ್ಲದೆ, ಅದು ಧೈರ್ಯವಿಹೀನತೆ, ದಾಸ್ಯ ಮನೋಭಾವ, ನಾಸ್ತಿಕತೆ ಮುಂತಾದುವುಗಳನ್ನುಂಟಾಗಿದ್ದರ, ಅದೇ ಗುಣಗಳಿಂದ ಕೂಡಿ ಬೆಳೆಯುತ್ತದೆ. ಮೇಲ್ಕಂಡ ಉತ್ತಮಗುಣಗಳು, ಮನುಷ್ಯನನ್ನು ಕ್ರಮವಾಗಿ ಪ್ರಾಪಂಚಿಕ ಬಂಧನದಿಂದ ಬಿಡಿಸಲು ಸಹಾಯಕವಾ

ಗುವುದು ಮಾತ್ರವಲ್ಲ-ಅವನಲ್ಲಿ ಧೈರ್ಯ ಸಾಹಸಾದಿಗಳಿಂದ ಸ್ವಾತಂತ್ರ್ಯಾ ಪೇಕ್ಷೆಯನ್ನು ನೆಲೆಗೊಳಿಸಿ, ಇಹದಲ್ಲೂ ಅವನನ್ನು ಸ್ವತಂತ್ರನನ್ನಾಗಿಸು ವುವು. ಅಲ್ಪ ಗುಣಗಳಾದರೋ ಅವನಲ್ಲಿ ನೀಚಸ್ವಭಾವ ನೀಚಸೇವಾತತ್ಪ ರತೆ ದಾಸ್ಯ ಮನೋಭಾವ ಮುಂತಾದುವುಗಳಿಂದ ಶಾಶ್ವತ ಪರಸೇವೆಯನ್ನು ಸ್ಥಿರಗೊಳಿಸುವುವು ಇದರಿಂದ ಐಹಿಕ ಅಥವ ಪಾರತ್ರಿಕ ಮೋಕ್ಷಕ್ಕೆ ಸ್ತ್ರೀಯೇ ಕಾರಣಳಾಗುವಳೆಂಬುದನ್ನು ತಿಳಿಯಬಹುದಲ್ಲವೆ! ಇಂತು ಐಹಿಕ ಮೋಕ್ಷ (ಸ್ವಾತಂತ್ರ್ಯ) ಪಾರತ್ರಿಕ ಮೋಕ್ಷ (ಜನನ ಮರಣಗಳಿಂದ ಬಿಡುಗಡೆ) ಈ ಎರಡೂ ಸ್ತ್ರೀ ಮೂಲಕವಾಗಿಯೇ ಪ್ರಾಪ್ತಿಸುವುವೆಂಬು ದರಲ್ಲಿ ಸಂಶಯವಿಲ್ಲ.

ಹೀಗಿರುವ ಸಂದರ್ಭದಲ್ಲಿ, ಭಾರತದೇಶದ ಜನತೆಯ ಸ್ಥಿತಿಯು ಇಂದು ಉತ್ತಮವಾಗಬೇಕಾದರೆ-ಅವರು ಧೈರ್ಯಸಂಪನ್ನರೂ ಧರ್ಮಾತ್ಮರೂ ಆಗ ಬೇಕಾದರೆ-ಅವರು ದೇಶಸೇವಾತತ್ಪರರೂ, ಸಾಹಸಿಗಳೂ, ಸ್ವಾತಂತ್ರ್ಯಪ್ರಿ ಯರೂ ಆಗಬೇಕಾದರ ಅವರ ನಿತ್ಯಪೋಷಣೆಯನ್ನು ವಹಿಸಿದ ಗೃಹಾಧಿಕಾರಿಣಿ ಯರಾದ ಸ್ತ್ರೀಯರು ಆಯಾ ಗುಣಗಳಲ್ಲಿ ಉತ್ತಮಶಿಕ್ಷಕರಾಗಬೇಕು. ಉತ್ತಮ ಮಾತೆಯರೂ ಉತ್ತಮ ಪತ್ನಿಯರೂ ಹೆಚ್ಚಿದಂತೆಲ್ಲ ಜನತೆಯ ಸ್ಥಿತಿಯೂ ಉತ್ತಮಗೊಳ್ಳುವುದು.

ಹಿಂದೂ ಸ್ತ್ರೀ ಜನತೆಗೆ, ನಮ್ಮ ಪೌರಾಣಿಕ ಕಾಲದ ಅನೇಕ ಪತಿ ವ್ರತಾಶಿರೋಮಣಿಯರು ಆದರ್ಶಸ್ವರೂಪಿಣಿಯರಾಗಿದ್ದಾರೆ. ಅವರ ಆಚ ರಣೆಯು, ಸಂಸಾರದ ಸಕಲ ಅವಸ್ಥೆಗಳಲ್ಲೂ ಉತ್ತಮ ಉದಾಹರಣೆಗಳನ್ನು ಕೊಡುವಲ್ಲಿ ಅದ್ವಿತೀಯವಾದುದಾಗಿದೆ. ನಮ್ಮ ಸ್ತ್ರೀಯರು, ಪಾಶ್ಚಾತ್ಯ ನಾಗರಿಕತೆಗೂ, ಪಾಶ್ಚಾತ್ಯ ಆಚಾರ ವಿಚಾರಗಳಿಗೂ ಮರುಳಾಗಿ ಮೋಸ ಹೋಗದೆ, ಸಕಲ ವಿಷಯದಲ್ಲೂ ನಮ್ಮ ಪೂರ್ವಿಕ ಸ್ತ್ರೀಯರ ಪದಚಿಹ್ನಗ ಳಲ್ಲೇ ನಡೆಯ ತೊಡಗಿದರೆ ಅವರಿಗೂ, ಅವರ ಮೂಲಕ .. ದಂತೆ ಅದ್ಯಂತ ಜನತೆಗೂ ಸಕಲ ವಿಧ ಶ್ರೇಯಸ್ಸುಗಳೂ ಉಂಟಾಗಲು ಏನೂ ಸಂಶಯವಿಲ್ಲ. ಹಾಗೆ ಅನಾದಿಕಾಲದಿಂದಲೂ, ಮಹಾಪತಿವ್ರತೆಯೆಂದು ಪ್ರಖ್ಯಾತಳಾಗಿ ಸಮಸ್ತ ಸದ್ಗುಣ ಶಿರೋಮಣಿಯಾಗಿ 'ಸೀತೆಗೆ ಸಮಾನ ಸ್ತ್ರೀ

ಯೆಂದರೆ ಸೀತೆಯೇ' ಎಂಬ ಯಶಸ್ಸಿಗೆ ಪಾತ್ರಳಾದ ಶ್ರೀರಾಮ ಪತ್ನಿಯಾದ ಆ ಸಾಧ್ವೀಮಣಿಯ ಪವಿತ್ರ ಚರಿತ್ರೆಯನ್ನು ಈಗ ಓದೋಣ.

ಆದಿ ಕಾಲದಲ್ಲಿ ಸತ್ಕುಲ ಪ್ರಸೂತನೂ ಮಹಾ ಧಾರ್ಮಿಕನೂ ಆದ ನಿಮಿ ಎಂಬ ರಾಜನಿಗೆ ಮಿಥಿಲನೆಂಬ ಪುತ್ರನೊಬ್ಬನು ಹುಟ್ಟಿ ಮಹಾಪರಾಕ್ರಮಿಯಾಗಿ ತನ್ನ ವೀರ್ಯದಿಂದ ಅತಿ ಭಯಂಕರನಾಗಿ ತನ್ನ ಹೆಸರಿನಿಂದ ಒಂದು ಪಟ್ಟಣವನ್ನು ಕಟ್ಟಿ ಅದನ್ನು ಮಿಥಿಲಾನಗರಿಯೆಂದು ಕರೆದನು. ಆತನ ವಂಶದಲ್ಲಿ ಮುಂದೆ ಅನೇಕಮಂದಿ ಸುಪ್ರಸಿದ್ಧ ರಾಜರು ಜನಿಸಿ—ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಾ ಬಂದರು. ಮಿಥಿಲ ರಾಜನಿಗೆ ವಿದೇಹನೆಂದು ಹಸರಿದ್ದುದರಿಂದ ಆ ವಂಶದಲ್ಲಿ ಜನಿಸಿದವರಿಗೆ ಮೈಥಿಲೇಯರೆಂದೂ ವಿದೇಹ ವಂಶೀಕರರೆಂದೂ ಹೆಸರಾಯಿತು. ಆ ವಂಶಾನುಕ್ರಮದಲ್ಲಿ ಬಹು ಧಾರ್ಮಿಕನಾದ ಹ್ರಸ್ವರೋಮನೆಂಬ ಒಬ್ಬ ರಾಜನು ಹುಟ್ಟಿದನು. ಆತನಿಗೆ ಇಬ್ಬರು ಮಕ್ಕಳು. ಹಿರಿಯಾತನಿಗೆ ಜನಕನೆಂದು ಹೆಸರು, ಕಿರಿಯುವನು ಕುಶಧ್ವಜನು. ಈ ಇಬ್ಬರು ಅಣ್ಣತಮ್ಮಂದಿರೂ ಅನ್ಯೋನ್ಯತೆಯಿಂದ ರಾಜ್ಯಭಾರ ಮಾಡಿಕೊಂಡಿರಲು, ಮುಂದೆ ಕಾರಣಾಂತರದಿಂದ ಅವರಿಗೂ ಸಾಂಕಾಶ್ಯಪುರದ ರಾಜ್ಯನಾದ ಸುಧನ್ವನೆಂಬಾತನಿಗೂ ಯುದ್ಧವಾಗಿ ಸುಧನ್ವನು ಮೃತನಾಗಲು, ಜನಕರಾಜನು, ತನ್ನ ತಮ್ಮನಾದ ಕುಶಧ್ವಜನಿಗೆ ಸಾಂಕಾಶ್ಯಪುರದಲ್ಲಿ ಪಟ್ಟಾಭಿಷೇಕಮಾಡಿ, ಆ ರಾಜ್ಯವನ್ನು ಅವನ ವಶಕ್ಕೆ ವಹಿಸಿದನು. ಪಿತ್ರಾರ್ಜಿತವಾದ ಮಿಥಿಲೆಯಲ್ಲಿ ಹಿರಿಯನಾದ ಜನಕನೂ, ಸಾಂಕಾಶ್ಯಪುರದಲ್ಲಿ ಕಿರಿಯನಾದ ಕುಶಧ್ವಜನೂ ರಾಜ್ಯಭಾರ ಮಾಡಿಕೊಂಡಿದ್ದರು.

ಜನಕರಾಜನು ವೇದವೇದಾಂಗ ಪಾರಂಗತನು. ಮಹಾ ತಪಸ್ವಿ. ಅದ್ವಿತೀಯ ಕರ್ಮಯೋಗಿ. ಆತನ ಆಸ್ಥಾನವು, ಅನೇಕಮಂದಿ ವಿದ್ವಾಂಸರುಗಳಿಂದಲೂ, ಬ್ರಹ್ಮಜ್ಞಾನಿಗಳಾದ ಯಾಜ್ಞವಲ್ಕ್ಯಾದಿ ಅನೇಕಮಂದಿ ಮಹರ್ಷಿಗಳಿಂದಲೂ ಸದಾಕಾಲದಲ್ಲೂ ತುಂಬಿರುವುದು. ಆತನಿಗೆ ಒಂದಾನೊಂದು ಸಂದರ್ಭದಲ್ಲಿ ಒಂದು ಯಾಗವನ್ನು ಮಾಡಬೇಕೆಂದು ಅಪೇಕ್ಷೆಯಾಯಿತು. ಒಡನೆ ಆತನು ಮಂತ್ರಿ ಪುರೋಹಿತರೊಂದಿಗೆ ಯೋಚಿಸಿ, ಮುಹೂರ್ತವನ್ನೂ ನಿರ್ಧರಿಸಿಬಿಟ್ಟನು. ಮುಂದೊಂದು ಶುಭದಿನದಲ್ಲಿ ಯಜ್ಞ

ಮಂಟಪವನ್ನು ರಚಿಸುವ ಸ್ಥಳದಲ್ಲಿ ಭೂಶುದ್ಧಿಗಾಗಿ, ಚಿನ್ನದ ಹಿಡಿಯ ನೇಗಿಲನ್ನು ಹಿಡಿದು ರಾಜನೇ ಭೂಮಿಯನ್ನು ಉಳತೊಡಗಿದನು. ಹಾಗೆ ಉಳುತ್ತಿರುವಾಗ ಆ ನೇಗಿಲಿನ ಗುಳದ ಕೊನೆಗೆ ಏನೋ ತಡೆದಂತಾಯಿತು. ಅದೇನೆಂದು ಪರೀಕ್ಷಿಸಿ ನೋಡುವಲ್ಲಿ ಅದು ಬಹು ದೃಢವಾದ ಒಂದು ಲೋಹದ ಪೆಟ್ಟಿಗೆಯಾಗಿತ್ತು. ಅದೇನಿರಬಹುದೆಂದು ರಾಜನು, ಕೌತುಕ ಪಟ್ಟು, ಅರಮನೆಗೆ ತೆಗೆಸಿಕೊಂಡು ಹೋಗಿ, ಬಾಯಿ ತೆಗೆಸಿ ನೋಡಿದನು. ಆಶ್ಚರ್ಯವಾಶ್ಚರ್ಯವು! ಬಾಗಿಲು ತೆಗೆದೊಡನೆಯೇ ಅದರಲ್ಲಿ - ಮಹಾ ಲಕ್ಷ್ಮಿಯೇ ಆ ರೂಪವನ್ನು ಧರಿಸಿ ಬಂದಳೋ - ಎಂಬಂತೆ ಅತಿಶಯ ಸೌಂದರ್ಯದಿಂದ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದ್ದ ಒಬ್ಬ ಕನ್ಯಾ ಶಿರೋಮಣಿಯಿದ್ದಳು. ಅದನ್ನು ಕಂಡು ಪರಮ ಸಂತೋಷಪಟ್ಟ ರಾಜನು, ಆ ಕನ್ಯೆಯನ್ನು ತನ್ನ ಉದರದಲ್ಲೇ ಜನಿಸಿದವಳೆಂಬುದರ ಹತ್ತರಷ್ಟು ಪ್ರೇಮವಾತ್ಸಲ್ಯಗಳನ್ನಿಟ್ಟು ಪೋಷಿಸುತ್ತಾ ಸಕಲ ಜನರನ್ನೂ ಉಡುಗೆತ ಉತ್ಸವ ದಿವ್ಯ ಭೋಜನ ಮುಂತಾದುವುಗಳಿಂದ ಆದರಿಸಿ ಪುತ್ರೀ ಜನನ ಕ್ಕಾಗಿ ಅನೇಕ ಮಹೋತ್ಸವಗಳನ್ನು ನಡೆಸಿದನು,

ಯಜ್ಞಶಾಲೆಗಾಗಿ ಉಳಲ್ಪಟ್ಟ ಆ ಭೂಮಿಯಲ್ಲಿ ಪೆಟ್ಟಿಗೆಯು ದೊರೆತುದಕ್ಕೂ, ಆ ಪೆಟ್ಟಿಗೆಯಲ್ಲಿ ಕನ್ಯೆಯಿದ್ದುದಕ್ಕೂ ಕಾರಣವೆಂದು ತಿಳಸುವ ಪೂರ್ವಕಥೆಯೊಂದುಂಟು! ಲೋಕಮಾತಾ ಸ್ವರೂಪಿಣಿಯಾದ ಸೀತೆಯು ಅಯೋನಿಜೆ ಎಂಬ ವೃತ್ತಾಂತವನ್ನು ದಶರಥ ಚಕ್ರವರ್ತಿಗೆ ತಿಳಿಸುವುದಕ್ಕಾಗಿ ಅಹಲ್ಯಾ ಪುತ್ರರಾದ ಶತಾನಂದರು ಈ ಕಥೆಯನ್ನು ಹೇಳಿದ್ದಾರೆ. ಆನಂದ ರಾಮಾಯಣೋಕ್ತವಾದ ಆ ಕಥೆಯನ್ನು ಇಲ್ಲ ಸಂಕ್ಷೇಪವಾಗಿ ಹೇಳುತ್ತೇವೆ.

ಪೂರ್ವಕಾಲದಲ್ಲಿ ಪದ್ಮಾಕ್ಷನೆಂಬೊಬ್ಬ ರಾಜನು ಲೋಕಮಾತೆಯಾದ ಲಕ್ಷ್ಮಿಯನ್ನು ತನ್ನ ಮಗಳನ್ನಾಗಿ ಪಡೆಯಬೇಕೆಂದು ಅಪೇಕ್ಷಿಸಿ ಘೋರ ತಪಸ್ಸು ಮಾಡಿದನು. ರಾಜನ ಆ ತಪಸ್ಸಿಗೆ ಮೆಚ್ಚಿದ ಲಕ್ಷ್ಮೀದೇವಿಯು ಆತನಿಗೆ ಪ್ರತ್ಯಕ್ಷಳಾಗಿ ತನ್ನನ್ನು ಪ್ರಾರ್ಥಿಸಿದ ಕಾರಣವೇನೆಂದು ಪ್ರಶ್ನಿ ಸಿದಳು. ರಾಜನು ತನ್ನ ಅಪೇಕ್ಷೆಯನ್ನು ತಿಳಿಸಿ, ನನ್ನ ಮಗಳಾಗಿ ಅವತರಿಸ

ಬೇಕೆಂದು ಪ್ರಾರ್ಥಿಸಲು, ಲಕ್ಷ್ಮಿಯು ತಾನು ಸ್ವತಂತ್ರಳಲ್ಲವೆಂದೂ, ತನ್ನ ಪ್ರಭುವಾದ ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿ ಮೆಚ್ಚಿಸಿದರೆ ರಾಜನ ಕೋರಿಕೆಯು ನೆರವೇರಬಹುದೆಂದೂ ಹೇಳಿ ಅದೃಶ್ಯಳಾದಳು. ರಾಜನು ವಿಷ್ಣುವನ್ನು ಕುರಿತು ತಪಸ್ಸುಮಾಡಿ ಮೆಚ್ಚಿಸಿದನು. ಪ್ರತ್ಯಕ್ಷನಾದ ನಾರಾಯಣಮೂರ್ತಿಯು ಒಂದು ಮಾದಳದಹಣ್ಣನ್ನು ರಾಜನ ಕೈಗಿತ್ತು ಇದರಿಂದ ನಿನ್ನ ಆಶಯವು ಕೈಗೂಡುವುದೆಂದು ನುಡಿದು ಅಂತರ್ಧಾನವಾದನು. ರಾಜನು ಆ ಹಣ್ಣನ್ನು ಬಿಚ್ಚಲು ಅದರಲ್ಲಿ ದಿವ್ಯ ಲಾವಣ್ಯವತಿಯಾದ ಕನ್ಯಾರತ್ನವು ಇದ್ದುದು ಕಾಣಿಸಿತು. ರಾಜನು ಪರಮಾನಂದದಿಂದ ಆ ಕನ್ಯೆಯನ್ನು ತನ್ನ ಮಗಳೆಂದೇ ತಿಳಿದು ಮೋಹದಿಂದ ಕಾಪಾಡುತ್ತಿದ್ದನು. ಯುಕ್ತಕಾಲದಲ್ಲಿ ಪ್ರಬುದ್ಧಳಾದ ಆಕೆಯನ್ನು ಸ್ವಯಂವರ ವಿಧಿಯಿಂದ ಯೋಗ್ಯನಾದ ಒಬ್ಬ ವರನಿಗೆ ಕೊಟ್ಟು ಲಗ್ನಮಾಡಬೇಕೆಂದು ಯೋಚಿಸಿ ತನ್ನ ಆ ಉದ್ದೇಶವನ್ನು ಪ್ರಕಟಿಸಿದನು. ಸ್ವಯಂವರಕ್ಕಾಗಿ ಬಹುದೇಶದ ರಾಜಾಧಿರಾಜರು ನೆರೆದರು. ಅವರೆಲ್ಲರ ಎದುರಿನಲ್ಲಿ ರಾಜನು- "ನನ್ನ ಈ ಮಗಳು ಅಯೋನಿಜೆಯಾದುದರಿಂದ ಈ ರಾಜಲೋಕದಲ್ಲಿ ಯಾವನು ತನ್ನ ದೇಹವನ್ನು ಆಕಾಶದ ನೀಲ ವರ್ಣದಿಂದ ರಂಜಿತವಾದುದನ್ನಾಗಿ ಮಾಡಬಲ್ಲನೋ ಆತನನ್ನು ಈ ನನ್ನ ಕನ್ಯೆಯು ವರಿಸುವಳು" ಎಂದು ನುಡಿದನು. ಅದನ್ನು ಕೇಳಿದ ರಾಜರು ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳುತ್ತಾ, ಈ ಅಸಾಧ್ಯ ಪಣವನ್ನಿಟ್ಟು ತಮ್ಮನ್ನು ವಂಚಿಸಿದ ಆ ಪದ್ಮಾಕ್ಷನನ್ನು ತಕ್ಕಂತೆ ಶಿಕ್ಷಿಸಬೇಕೆಂದು ಆತನೊಂದಿಗೆ ಯುದ್ಧಕ್ಕೆ ತೊಡಗಿದರು. ಪದ್ಮಾಕ್ಷನೂ ಮಹಾಪರಾಕ್ರಮಿಯಾದುದರಿಂದ ಅವರೊಂದಿಗೆ ಘೋರ ಯುದ್ಧಮಾಡಿ ಕೆಲವರನ್ನು ಕೊಂದು ತಾನೂ ಮಡಿದನು. ಮಿಕ್ಕ ಹಲಕೆಲವು ರಾಜರು, ಆ ರಾಜಪುತ್ರಿಯನ್ನು ಅಪಹರಿಸಲೆಳೆಸಲು, ಆಕೆಯು ಅವರಿಗೆ ದಕ್ಕದೆ ಅಲ್ಲೇ ಇದ್ದ ಯಜ್ಞಕುಂಡದಲ್ಲಿ ಧುಮುಕಿದಳು. ಕೃದ್ಧರಾದ ರಾಜಪುತ್ರರು, ಯಜ್ಞಕುಂಡವನ್ನೆಲ್ಲ ಹುಡುಕಿದರಾದರೂ ಎಲ್ಲೂ ಆಕೆಯ ಸುಳಿವೇ ಗೋಚರಿಸದಿರಲು ಆ ನಗರವನ್ನೇ ಧ್ವಂಸಮಾಡಿದರು. ಹೀಗೆ ಲಕ್ಷ್ಮಿಯ ಸಂಪರ್ಕದಿಂದ ಪದ್ಮಾಕ್ಷನೂ ಅವನ ನಗರವೂ ಧ್ವಂಸವಾದುವು.—

ಈ ಅನಾಹುತವು ನಡೆದ ತರುವಾಯ ಲಕ್ಷ್ಮಿಯು ಒಂದುದಿನ ಯಜ್ಞಕುಂಡದಿಂದ ಹೊರಕ್ಕೆ ಬಂದು ವೇದಿಕೆಯ ಬಳಿಯಲ್ಲಿ ಕುಳಿತಿದ್ದಳು. ಆ ವೇಳೆಗೆ ಸರಿಯಾಗಿ ಪುಷ್ಪಕ ವಿಮಾನವನ್ನೇರಿ ಅಂತರಿಕ್ಷದಲ್ಲಿ ಸಂಚರಿಸುತ್ತಾ ಆ ಸ್ಥಳಕ್ಕೆ ಬಂದ ರಾಕ್ಷಸೇಶ್ವರನಾದ ರಾವಣನು, ದಿವ್ಯ ಲಾವಣ್ಯಮಯಿಯಾದ ಆಕೆಯನ್ನು ಕಂಡು, ವಿಮಾನವನ್ನು ಕೆಳಕ್ಕಿಳಿಸಿ ಆಕೆಯನ್ನು ಸಮೀಪಿಸಿ ಬರುತ್ತಿರಲು, ಅಷ್ಟರಲ್ಲಿ ಲಕ್ಷ್ಮಿಯು ಅವನಿಗೆ ಕಾಣಿಸುವಂತೆಯೇ ಆ ಯಜ್ಞಕುಂಡವನ್ನು ಪ್ರವೇಶಿಸಿದಳು. ರಾವಣನು ಅಲ್ಲಿಗೆ ಬಂದು ಆ ಕನ್ಯೆಗಾಗಿ ಅಗ್ನಿಯಲ್ಲಿ ಹುಡುಕಿನೋಡಿದನು. ಆದರಲ್ಲಿ ಐದು ರತ್ನಗಳಲ್ಲದೆ ಮತ್ತೇನೂ ದೊರೆಯಲಿಲ್ಲ. ರಾವಣನು ಅವುಗಳನ್ನು ತೆಗೆದುಕೊಂಡು ಒಂದು ಪೆಟ್ಟಿಗೆಯಲ್ಲಿಟ್ಟು, ಭದ್ರಪಡಿಸಿ ಅದನ್ನು ವಿಮಾನದಲ್ಲಿರಿಸಿಕೊಂಡು, ಲಂಕೆಗೆ ಪ್ರಯಾಣಮಾಡಿ ಆ ಪೆಟ್ಟಿಗೆಯನ್ನು ತನ್ನ ದೇವತಾ ಗೃಹದಲ್ಲಿರಿಸಿದನು.––

ತರುವಾಯ ಭೋಜನಾನಂತರ ವಿಶ್ರಾಂತಿಹೊಂದಿ ಎದ್ದು ತನ್ನ ಪತ್ನಿಯಾದ ಮಂಡೋದರಿಗೆ ತಾನು ತಂದಿರುವ ದಿವ್ಯ ರತ್ನಗಳ ವಿಚಾರವನ್ನು ತಿಳಿಸಿದನು. ಆಕೆಯು ಅವುಗಳನ್ನು ನೋಡಲಪೇಕ್ಷಿಸಲು, ರಾವಣನು ದೇವತಾ ಗೃಹದಲ್ಲಿದ್ದ ಪೆಟ್ಟಿಗೆಯನ್ನು ತಾರೆಂದನು. ರಾಕ್ಷಸೇಶ್ವರನ ಪಟ್ಟ ಮಹಿಷಿಯಾದ ಆ ಮಂಡೋದರಿಯು ಅದನ್ನು ಎತ್ತಲು ಪ್ರಯತ್ನಿಸಿದಳು. ಅದು ಬಹು ಭಾರತೋರಿ, ಆಕೆಯಿಂದ ಸಾಧ್ಯವಾಗದಿರಲು, ರಾವಣನು ತಾನೇ ಬಂದು ಪೆಟ್ಟಿಗೆಯನ್ನು ಎತ್ತಲು ಪ್ರಯತ್ನ ಮಾಡಿದನು. ಪರಮೇಶ್ವರನ ಕೈಲಾಸ ಪರ್ವತವನ್ನೇ ಎತ್ತಿ ಅಲ್ಲಾಡಿಸಿದ ಮಹಾಭುಜಬಲಶಾಲಿಯಾದ ರಾವಣೇಶ್ವರನು ಇಪ್ಪತ್ತು ಭುಜಗಳಿಂದ ಹಿಡಿದು ಎತ್ತಿನೋಡಿದನಾದರೂ ಆ ಪೆಟ್ಟಿಗೆಯು ಮೇಲಕ್ಕೇಳದಾಯಿತು. ರಾವಣನ ಕೋಪವು ಮಿತಿಮೀರಿ ಕೈಯಲ್ಲಿದ್ದ ಪರಿಘಾಯುಧದಿಂದ ಅದನ್ನು ಒಡೆದನು. ಆದರಲ್ಲಿ ಪ್ರಕಾಶಮಾನಳಾದ ಕನ್ಯೆಯೊಬ್ಬಳು ದೃಷ್ಟಿಗೋಚರಳಾದಳು. ಸಕಲರೂ ಪರಮಾಶ್ಚರ್ಯಭರಿತರಾದರು.

ಅಕಸ್ಮಾತ್ತಾಗಿ ತೋರಿದ ಮಹಾ ತೇಜಸ್ವಿಯಾದ ಆ ಕನ್ಯೆಯನ್ನು ಕಂಡು ರಾವಣನ ಪರಿವಾರದವರೂ ಬಂಧುವರ್ಗದವರೂ ಅದ್ಭುತಪಟ್ಟು

ಹೋದರು. ಆಗ ರಾವಣನು ಮಂಡೋದರಿಯನ್ನು ಕುರಿತು,—"ಪ್ರಿಯೇ ಈಕೆಯು ಸಾಮಾನ್ಯಳಲ್ಲ. ಈಕೆಗೋಸ್ಕರ ಅನೇಕ ರಾಜರು ಮೃತರಾದರು. ಈಕೆಯು ಹುಟ್ಟಿದ ನಗರವು ನಿರ್ಮೂಲವಾಯಿತು. ಈಕೆಯನ್ನು ಇಲ್ಲಿಟ್ಟು ಕೊಂಡರೆ ನಮ್ಮ ನಗರಕ್ಕೂ ಕೇಡು ತಪ್ಪದು" ಎಂದು ನುಡಿದು, ತನ್ನ ಮಂತ್ರಿಗಳನ್ನು ಕರೆದು, ಆ ಕನ್ಯೆಯನ್ನು ಪೆಟ್ಟಿಗೆ ಸಮೇತವಾಗಿ ಕರೆದೊಯ್ದು ಬಹು ದೂರದಲ್ಲೆಲ್ಲಾದರೂ ಬಿಟ್ಟು ಬನ್ನಿರೆಂದನು. ಮಂಡೋದರಿಯು, ಆ ಪೆಟ್ಟಿಗೆ ಸಹಿತವಾಗಿ ಆ ಕನ್ಯೆಯನ್ನು ಭೂಮಿಯಲ್ಲಿ ಹೂಳಬಿಡಿರೆಂದಳು. ಮಂತ್ರಿಗಳು ಪುಷ್ಪಕ ವಿಮಾನದಲ್ಲಿ ಆ ಪೆಟ್ಟಿಗೆಯನ್ನು ಇಟ್ಟು ಕೊಂಡು ಹೊರಡಲು ಸಿದ್ಧರಾದರು. ಆವರೆಗೆ ಏನೆಯಿಕ್ಕದೆ ಎಲ್ಲದನ್ನೂ ನೋಡುತ್ತಾ ಚಿತ್ರಪ್ರತಿಮೆಯಂತೆ ಮೌನವಾಗಿದ್ದ ಆ ಕನ್ಯೆಯು ಆಗ,—"ಎಲೋ ರಾವಣನೇ ನನ್ನನ್ನು ಆಗ ಕಳುಹಿಸಿಬಿಟ್ಟೆನೆಂದು ಸಂತೋಷಪಡಬೇಡ. ಮುಂದೆ ಒಂದು ಸಾರಿ ನಾನಿಲ್ಲಿಗೆ ಬಂದು ನಿನ್ನನ್ನೂ ನಿನ್ನ ಪುತ್ರ ಮಿತ್ರ ಪರಿವಾರಗಳನ್ನೂ ನಿರ್ಮೂಲಮಾಡಿಸಿ, ಈ ನಗರವನ್ನು ಧ್ವಂಸಗೊಳಿಸಿ ಹೋಗುವೆನು. ತರುವಾಯ ಮತ್ತೊಂದು ವೇಳೆ ಬಂದು ಪೌಂಡ್ರನನ್ನೂ-ಶತಮುಖ ರಾವಣನನ್ನೂ ನಾಶಗೊಳಿಸುವೆನು. ಪುನಃ ಒಂದುಸಾರಿ ಬಂದು ಕುಂಭಕರ್ಣನ ಮಗನಾದ ಮೂಲಕಾಸುರನನ್ನು ನಿರ್ಮೂಲಗೊಳಿಸುವೆನು ತಿಳಿದಿರು" ಎಂದು ನುಡಿದಳು. ಆ ಮಾತುಗಳನ್ನು ಕೇಳಿ ರಾವಣನು ಕೋಪಾಕ್ರಾಂತನಾಗಿ ಆಕೆಯನ್ನು ಕೊಂದುಬಿಡುತ್ತೇನೆಂದು ಕತ್ತಿಯನ್ನೆತ್ತಲು, ಆಪ್ತರು ಹೇಳಿ ತಡೆದು ಸುಮ್ಮನಾಗಿಸಿದರು. ಇತ್ತ ಪುಷ್ಪಕದಲ್ಲಿ ಹೊರಟ ಮಂತ್ರಿಗಳು ಮಿಥಿಲಾದೇಶದ ಪ್ರಾಂತಕ್ಕೆ ಬಂದು ಅಲ್ಲ ಭೂಮಿಯಲ್ಲೊಂದೆಡೆಯಲ್ಲಿ ಆ ಪಟ್ಟಿಗೆಯನ್ನು ಹೂಳಿದರು. ಅದೇ ಪೆಟ್ಟಿಗೆಯೇ ಜನಕರಾಯನ ನೇಗಿಲನ ಗುಳಕ್ಕೆ ಅಡ್ಡಲಾಗಿ ತಡೆದುದು. ಇಂತು ಪದ್ಮಾಕ್ಷರಾಜನ ತಪಸ್ಸಿಗೆ ಮೆಚ್ಚಿ ಅಯೋನಿಜೆಯಾಗಿ ಜನಿಸಿದ್ದ ಸಾಕ್ಷಾಲ್ಲಕ್ಷ್ಮೀದೇವಿಯೇ ಜನಕರಾಜನ ಮಗಳಾದಳು.



## ಅಧ್ಯಾಯ ೨ " ಕಲ್ಯಾಣ ಮಹೋತ್ಸವ "

ದಿನದಿನಕ್ಕೆ ಗಳಿಗೆಗಳಿಗೆಗೆ ಕ್ಷಣಕ್ಷಣಕ್ಕೆ - ಶುಕ್ಲಪಕ್ಷದ ಚಂದ್ರ ಕಾಂತಿಯಂತೆ ಸೌಂದರ್ಯ ಸೌಕುಮಾರ್ಯ ನಯ ವಿನಯ ಗಾಂಭೀರ್ಯ ಗಳಲ್ಲಿ ಅಭಿವೃದ್ಧಿಯಾಗುತ್ತಿದ್ದ ತನ್ನ ಮಗಳನ್ನು ಕಂಡು ಜನಕರಾಜನು ಸಕಲ ನಿಧಿಗಳನ್ನೂ ಪಡೆದ ಕಡುಬಡವನಂತೆ ಪರಮಾನಂದದಿಂದ ದಿನ ಗಳನ್ನು ಕ್ಷಣಗಳಂತೆಯೂ, ವರ್ಷಗಳನ್ನು ದಿನಗಳಂತೆಯೂ ಕಳೆಯು ತ್ತಿದ್ದನು. ಸೀತೆಯು ಲಭ್ಯಳಾದ ಮೇಲೆ ಆತನ ಪತ್ನಿಯ ಉದರದಲ್ಲೂ ಒಬ್ಬ ಪುತ್ರಿಯು ಉದಯಿಸಿದಳು. ರಾಜನ ಆನಂದೋತ್ಸಾಹಗಳಿಗೆ ಮೇರೆಯಿರಲಿಲ್ಲ. ಸೀತಾ ಊರ್ಮಿಳೆಯರು ತಮ್ಮ ಬಗೆಬಗೆಯ ಬಾಲ ಲೀಲೆಗಳಿಂದ ರಾಜನ ಆ ಅರಮನೆಯಲ್ಲಿ ಚಲಿಸುತ್ತಿರುವ ಮಿಂಚು ಬಳ್ಳಿ ಗಳೋ ಎಂಬಂತೆ ನೋಡುವವರ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಾ ಬೆಳೆದರು.

ಇನ್ನೂ ಚಿಕ್ಕ ವಯಸ್ಸಿನಲ್ಲೇ ಆಡುತ್ತಾಡುತ್ತಾ ಇರುವಾಗ ಒಂದು ದಿನ ಸೀತಾದೇವಿಯ ಆಟದ ವಸ್ತುವೊಂದು, ಕಣ್ಣಿಗೆ ಕಾಣದಂತೆ ಎಲ್ಲೋ ಕಳೆದುಹೋಯಿತು. ದೇವಿಯು, ಅದಕ್ಕಾಗಿ ಅಲ್ಲಲ್ಲಿ ಹುಡುಕುತ್ತಾ, ತನ್ನ ಮಾರ್ಗಕ್ಕೆ ಮರೆಯಾಗಿದ್ದ ವಸ್ತುಗಳನ್ನೆಲ್ಲ ಕಿತ್ತುಕಿತ್ತು ಬೀಸಾಡುತ್ತ ಅರಮನೆಯ ಎಲ್ಲಾ ಭಾಗದಲ್ಲೂ ಇದ್ದ ಪದಾರ್ಥಗಳನ್ನೆಲ್ಲ ಸ್ಥಳಪಲ್ಲಟ ಮಾಡಿಬಿಟ್ಟಳು. ಆದರೂ ಕಳೆದು ಹೋದ ಆ ವಸ್ತುವು ಸಿಕ್ಕಲಿಲ್ಲ. ಕೊನೆಗೆ ಜನಕರಾಜನ ಆಯುಧಾಗಾರವನ್ನು ಪ್ರವೇಶಿಸಿದಳು. ಅಲ್ಲಿ ಬಹು ದೀರ್ಘ ವಾದ ಒಂದು ಪೆಟ್ಟಿಗೆಯಿತ್ತು. ಅದರ ಕೆಳಗೆ ತನ್ನ ಆಟದ ವಸ್ತುವಿರ ಬಹುದೋ ಎಂದು ಅದನ್ನು ಹಿಡಿದು ಒಂದು ಕಡೆಯಿಂದ ಮತ್ತೊಂದೆಡೆಗೆ ಜರುಗಿಸಿದಳು. ಐದು ವರುಷದ ಆ ಸುಕುಮಾರಿ ಬಾಲಿಕೆಯು, ನೂರಾರು ಮಂದಿ ಬಲಶಾಲಿ ಸೇವಕರಿಂದಲೂ ಆಚೀಚೆಗೆ ಜರುಗಿಸಲಾಗದ ಬಹು ಭಾರವಾದ ಆ ಪೆಟ್ಟಿಗೆಯನ್ನು ಲೀಲಾಜಾಲವಾಗಿ ಜರುಗಿಸಿದ ಆ ಅಮಾ ನುಷ ಕಾರ್ಯವನ್ನು ಕಂಡು ಜನಕರಾಜನು ಆಶ್ಚರ್ಯಮಗ್ನನಾಗಿ ಹೋ ದನು.—"ಇದೇನಿದು, ನೋಡಲು ಕೇವಲ ದುರ್ಬಲಳಂತಿರುವ ಈ ಕನ್ಯೆ

ಯೆಲ್ಲಿ! ಮಹಾ ವೀರರಿಗೂ ಅಸಾಧ್ಯವೆನ್ನಿಸುವ ಈ ಕಾರ್ಯವೆಲ್ಲಿ! ಈಕೆಯ ಜನ್ಮವೆಂತು ಅಮಾನುಷವೂ ಆಶ್ಚರ್ಯಜನಕವೂ ಆದುದೋ ಈಕೆಯ ಈ ಕಾರ್ಯವೂ ಹಾಗೆಯೇ ಅಮಾನುಷವೂ ಆಶ್ಚರ್ಯಕರವೂ ಆಗಿದೆ. ಬಹು ಕಾಲದಿಂದ, ಅತಿ ಭಾರವಾದ ಶೈವ ಧನುಸ್ಸಿರುವ ಈ ಪೆಟ್ಟಿಗೆಯನ್ನು ಅದಿರುವ ಈ ಸ್ಥಳದಿಂದ ಎತ್ತಿ ಜರುಗಿಸಿದವರಿಲ್ಲ. ಇಂದು ಆ ಕಾರ್ಯವನ್ನು ಈ ಬಾಲಿಕೆಯು ಮಾಡಿರುವಳು. ಆದುದರಿಂದ, ಈ ಶೈವ ಧನುಸ್ಸನ್ನು ಎತ್ತಿ ನಾಣೇರಿಸುವ ವೀರನಾರೋ ಆತನಿಗೇ ಈಕೆಯನ್ನು ಕೊಟ್ಟು ಲಗ್ನ ಮಾಡುವೆನು" ಎಂದನು. ಆ ಪ್ರತಿಜ್ಞೆಯನ್ನು ಕೇಳಿ, ಮಂತ್ರಿ ಮುಂತಾದ ಆಪ್ತ ಜನರೂ ಅದು ಸಾಧುವೆಂದರು.

ಸಾಕ್ಷಾಲ್ಲಕ್ಷ್ಮಿಯೇ ಮನುಜರೂಪದಿಂದ ಅವತರಿಸಿರುವಳೆಂದಮೇಲೆ, ಇನ್ನು ಆಕೆಯ ಗುಣವರ್ಣನೆ ಮಾಡಬೇಕಾದುದೇನಿರುವುದು, ರೂಪ ಸಂಪತ್ತಿಯನ್ನು ಕುರಿತು ಹೇಳಬೇಕಾದುದೇನಿರುವುದು? ಜಾನಕಿಯು ಬಾಲಿಕೆಯಾಗಿದ್ದರೂ, ಆಕೆಯ ಬಾಯಿಂದ ಬರುವ ಮೃದುವೂ ಯುಕ್ತಿ ಯುಕ್ತವೂ ಆದ ಒಂದೊಂದು ವಾಕ್ಯವೂ ಶ್ರೋತೃಗಳನ್ನು ಅತಿಶಯ ಆನಂದಪಡಿಸುವುದು. ಆಕೆಯಿಂದ ಕಠಿಣವಾದ ಮಾತನ್ನು ಎಂದೂ ಯಾರೂ ಕೇಳಿ ವ್ಯಥೆಪಟ್ಟುದಿಲ್ಲ. ಆಕೆಯ ದಯಾಮಯ ಹೃದಯವು ಪ್ರಪಂಚವನ್ನೇ ಒಳಗೊಳ್ಳುವಷ್ಟು ವಿಶಾಲವಾದುದು. ಮಾತಾಪಿತೃಗಳಲ್ಲಿಯೂ ಗುರುಜನ ಸನ್ನಿಧಿಯಲ್ಲೂ ಬಂಧುಗಳಲ್ಲೂ ಆಕೆಯ ನಡೆವಳಿಕೆಯು ಅನುಕರಣೀಯವಾದುದು ತಂಗಿಯಾದ ಊರ್ಮಿಳೆಯನ್ನು ಸೀತೆಯು ತನ್ನ ಹೃದಯವೆಂಬಂತೆ ಪ್ರೀತಿಸಿ ಆದರಿಸುವಳು. ಆಕೆಯನ್ನು ಒಂದು ಕ್ಷಣವೂ ಬಿಟ್ಟಗಲದ ಸದಾ ಆಟಪಾಟಗಳಲ್ಲಿ ಕಾಲ ಕಳೆಯುತ್ತಾ, ಮಾತಾ ಪಿತೃಗಳ ಮನಸ್ಸಿಗೆ ಪರಮಾನಂದವನ್ನುಂಟುಮಾಡುವಳು.

ಹೀಗೆ ಕೆಲವರ್ಷಗಳು ಕಳೆದುವು. ಬಾಲಿಕೆಯರು ವೃದ್ಧರೂ ಸಂಪ್ರದಾಯಸ್ಥರೂ ಆದ ಶತಾನಂದರೇ ಮುಂತಾದ ಜ್ಞಾನಿಗಳನ್ನು ಆಶ್ರಯಿಸಿ ಸ್ತ್ರೀ ಜನಕ್ಕೆ ಅತ್ಯಾವಶ್ಯಕಗಳೆನಿಸುವ ಸಂಗೀತ ಸಾಹಿತ್ಯಾದಿ ಕಲೆಗಳಲ್ಲಿ ಅತಿಶಯ ಕೌಶಲವನ್ನು ಸಂಪಾದಿಸಿದರು. ಅವರ ಸದ್ಗುಣಗಳೊಂದಿಗೆ ಈ ವಿದ್ಯೆಯೂ ಸೇರಲು ಸುವರ್ಣ ಪುಷ್ಪಕ್ಕೆ ಸುವಾಸನೆಯೂ ಬೆರೆತಂತೆ

ಅವರ ತೇಜಸ್ಸು ಮತ್ತೂ ಹೆಚ್ಚಿತು. ಜನಕಮಹಾರಾಜನು ತನ್ನಾಕುವರಿಯರು ವಿವಾಹಯೋಗ್ಯ ವಯಸ್ಕರಾದುದನ್ನು ಕಂಡು, ಅವರಿಗೆ ಸಮಾನಯೋಗ್ಯತೆಯ ರಾಜವಂಶಗಳಲ್ಲಿ ವರರನ್ನು ಹುಡುಕಬೇಕೆಂದು ಯೋಚಿಸಿದನು. ಅಷ್ಟರಲ್ಲಿ, ಸೀತೆಯ ವಿವಾಹ ವಿಷಯದಲ್ಲಿ ತಾನು ಮಾಡಿದ್ದ ಪ್ರತಿಜ್ಞೆಯ ವಿಚಾರವು ಜ್ಞಾಪಕಬರಲು, ಸ್ವಯಂವರ ವಿಧಿಯಿಂದಲೇ ತನ್ನ ಮಕ್ಕಳು ತಮಗನುರೂಪ ಪತಿಗಳನ್ನು ವರಿಸಲೆಂದು ಸ್ವಯಂವರ ಮಹೋತ್ಸವಕ್ಕಾಗಿ ಪ್ರಯತ್ನಮಾಡಿದನು. ರಾಜನಿಂದ ಆಜ್ಞಪ್ತರಾದ ಮಂತ್ರಿಗಳು ಬಹು ವಿಚಕ್ಷಣೆಯಿಂದ ನಗರಶೃಂಗಾರಕಾರ್ಯವನ್ನೂ, ಸ್ವಯಂವರ ಮಂಟಪರಚನೆಯನ್ನೂ ಕೈಕೊಂಡು, ನಿದ್ರಾಹಾರಗಳನ್ನು ಗಮನಿಸದೆ ಕೆಲಸ ಮಾಡತೊಡಗಿದರು ಪಟ್ಟಣಿಗರು ತಮ್ಮ ರಾಜಪುತ್ರಿಗೆ ವಿವಾಹವೆಂಬ ಸಂಗತಿಯನ್ನು ಕೇಳಿ ಅತ್ಯುತ್ಸಾಹದಿಂದ ತಮ್ಮ ತಮ್ಮ ಮನೆಗಳನ್ನು ಸುಣ್ಣಕಾರಣೆಗಳಿಂದಲೂ ಚಿತ್ರವಿಚಿತ್ರ ರಂಗವಲ್ಲಗಳಿಂದಲೂ, ತೋರಣ ಮೇಲ್ಕಟ್ಟುಗಳಿಂದಲೂ ಸಿಂಗರಿಸಿ ನೇತ್ರಾನಂದಕರವಾಗಿ ಮಾಡಿದರು. ಒಬ್ಬರಿಗೊಬ್ಬರು ಸ್ಪರ್ಧೆಯಿಂದ ತಮ್ಮ ತಮ್ಮ ಮನೆಗಳನ್ನು ಸಿಂಗರಿಸುತ್ತಿದ್ದುದರಿಂದ ಬಹು ಶೀಘ್ರ ಕಾಲದಲ್ಲೇ ವಿಸ್ತಾರವಾದ ಆ ನಗರವೇ ಹೊಸದಂಬಂತೆ ತೋರಸಾಗಿತು. ರಾಜಮಾರ್ಗಗಳನ್ನೆಲ್ಲ ಚಪ್ಪರಗಳಿಂದಲೂ ಅಲ್ಲಲ್ಲೆ ಬಹು ವಿಚಿತ್ರರೀತಿಯಿಂದ ರಚಿಸಿದ ಮಂಟಪಗಳಿಂದಲೂ ತೋರಣ ಬಾವುಟಗಳಿಂದಲೂ ಸಿಂಗರಿಸಿದರು. ನಾನಾದೇಶದ ರಾಜರಿಗೂ ರಾಜಪುತ್ರರಿಗೂ ಮಹೋತ್ಸವಾಹ್ವಾನ ಪತ್ರಿಕೆಗಳು ಕಳುಹಿಸಲ್ಪಟ್ಟುವು. ಅನೇಕಮಂದಿ ಮಹರ್ಷಿಗಳಿಗೂ, ದೇಶವಿದೇಶಗಳಲ್ಲಿದ್ದ ವಿಪ್ರೋತ್ತಮರಿಗೂ ವಿವಾಹ ಮಹೋತ್ಸವಕ್ಕೆ ದಯೆಮಾಡಿಸಿ ಮಂಟಪಶೋಭಾಯಮಾನಂಗೊಳಿಸಿ ವಧೂವರರಿಗೆ ಆಶೀರ್ವಾದ ಮಾಡಬೇಕೆಂದು ವಿಜ್ಞಾಪಿಸಿಕೊಂಡ ಆಹ್ವಾನಪತ್ರಗಳು ದೂತಮುಖದಿಂದ ಕಳುಹಿಸಲ್ಪಟ್ಟುವು. ಆ ಪತ್ರಗಳು ತಲುಪಿದ ಒಡನೆಯೇ, ರಾಜಾಧಿರಾಜರೂ ರಾಜಪುತ್ರರೂ, ಬ್ರಾಹ್ಮಣೋತ್ತಮರೂ ಸಾವಿರಾರು ಸಂಖ್ಯೆಯಿಂದ ಬಂದು ತಮಗಾಗಿ ಏರ್ಪಡಿಸಿದ್ದ ಬಿಡಾರಗಳಲ್ಲಿ ಇಳಿದು, ನಗರಶೃಂಗಾರದ ಆಧಿಕ್ಯತೆಯನ್ನು ನೋಡಿ ಆನಂದಿಸುತ್ತಾ, ಮುಹೂರ್ತದಿನವನ್ನು ಅತಿಶಯ ಉತ್ಸುಕತೆಯಿಂದ ಎದುರು ನೋಡುತ್ತಿದ್ದರು.

ಜನಕರಾಜನು ಕಳುಹಿಸಿದ ಆಹ್ವಾನ ಪತ್ರಿಕೆಯು ಎಲ್ಲಿರಂತೆಯೇ ವಿಶ್ವಾಮಿತ್ರ ಮಹರ್ಷಿಗಳಿಗೂ ತಲುಪಿತು. ಅವರ ಆಶ್ರಮದಲ್ಲಿ ಆಗತಾನೆ ಯಜ್ಞಕಾರ್ಯವು ಮುಗಿದು ಅವಭೃತಸ್ನಾನವಾಗಿದ್ದಿತು ಯಾಗಸಂರಕ್ಷಣೆಗಾಗಿ ಮಹರ್ಷಿಗಳು ದಶರಥರಾಜ ಪುತ್ರರಾದ ಶ್ರೀ ರಾಮ ಲಕ್ಷ್ಮಣರನ್ನು ಕರೆತಂದಿದ್ದರು. ಶ್ರೀರಾಮನ ಪರಾಕ್ರಮದಿಂದ ದುರುಳರಾದ ತಾಟಕೆ ಸುಬಾಹು ಮಾರೀಚರೆಂಬ ರಾಕ್ಷಸರ ಭಾಧೆಯು ತಪ್ಪಿ ಯಜ್ಞವು ಸುಲಲಿತವಾಗಿ ನಡೆದುದಲ್ಲದೆ, ಮುಂದೆ ಆ ಋಷ್ಯಾಶ್ರಮವೂ ನಿಷ್ಕಂಟಕವಾಯಿತು. ತಮ್ಮ ತಪೋವನಕ್ಕೆ ರಾಕ್ಷಸಬಾಧೆಯು ತಪ್ಪಿ ಸುರಕ್ಷಿತವಾದುದಕ್ಕಾಗಿ ಮುನಿಗಳೂ ಋಷಿಗಳೂ ಹೇಗೆ ಆನಂದಭರಿತರಾದರೋ, ಅವರ ಯಜ್ಞಯಾಗಾದಿಗಳ ಹವಿರ್ಭಾಗದಿಂದ ತೃಪ್ತರಾಗುವ ದೇವತೆಗಳೂ ಹಾಗೆಯೇ ಸಂತುಷ್ಟರಾಗಿ ಮಹಾವೀರರೂ ಅಪ್ರತಿಮ ಧನುರ್ವಿದ್ಯಾ ವಿಶಾರದರೂ ಆದ ಆ ಕ್ಷತ್ರಿಯ ಕುಮಾರರ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ಋಷಿಮುನಿಗಳಾದರೂ ಆ ಬಾಲಕರನ್ನು ಬಗೆಬಗೆಯಿಂದ ಶ್ಲಾಘಿಸುತ್ತಾ, ಅವರು ಹಾಗೆಯೇ ದುಷ್ಟಶಿಕ್ಷಣ ಶಿಷ್ಟರಕ್ಷಣಾದಿಗಳಿಂದ ಧರ್ಮಸ್ಥಾಪನೆಗೆ ಸಹಾಯಕರಾಗುತ್ತಾ ಬಹುಕಾಲ ಜೀವಿಸಿ ಅಗಾಧ ಕೀರ್ತಿಪ್ರತಿಷ್ಠೆಗಳನ್ನು ಗಳಿಸುವವರಾಗಲೆಂದು ಆಶೀರ್ವದಿಸಿದರು. ಇದನ್ನೆಲ್ಲ ಕಂಡ ವಿಶ್ವಾಮಿತ್ರ ಮುನೀಶ್ವರರು ತಮ್ಮಾ ಶಿಷ್ಯರ ಪ್ರಾದುರ್ಭಾವಕ್ಕಾಗಿ ಮನಸ್ಸಿನಲ್ಲೇ ಪರಮಾನಂದಪಟ್ಟುಕೊಂಡರು.

ಮತ್ತೊಂದು ಶುಭದಿನದಲ್ಲಿ ವಿಶ್ವಾಮಿತ್ರರು ತಮ್ಮ ಶಿಷ್ಯಪರಿವಾರದೊಂದಿಗೂ, ಶ್ರೀ ರಾಮ ಲಕ್ಷ್ಮಣರೊಂದಿಗೂ ಮಿಥಿಲಾನಗರಿಗಾಗಿ ಪ್ರಯಾಣಹೊರಟರು. ಮಾರ್ಗದಲ್ಲಿ ಅನೇಕ ಪುರಾತನಸ್ಥಳಗಳ ವಿವರಣೆಗಳನ್ನೂ, ಕೌಶಿಕೀ ಗಂಡಕೀ ಗಂಗಾದಿ ನದಿಗಳ ಪೂರ್ವವೃತ್ತಾಂತಗಳನ್ನೂ ಕಥೆಗಳಾಗಿ ಹೇಳುತ್ತಾ ಮಾರ್ಗಕ್ರಮಣ ಮಾಡಿದರು. ಮಧ್ಯಮಾರ್ಗದಲ್ಲಿ ಒಂದು ಪಾಳುಬಿದ್ದ ವಿಶಾಲವನವೂ, ಅದರ ಮಧ್ಯದಲ್ಲೊಂದು ವಿಸ್ತಾರವಾದ ಶ್ವೇತಶಿಲೆಯೂ ಇದ್ದುದನ್ನು ಕಂಡು ರಾಮನು ಅದರ ವೃತ್ತಾಂತವೇನೆಂದು ಕೇಳಿದನು. ಆ ಮಾತನ್ನು ಕೇಳಿದ ವಿಶ್ವಾಮಿತ್ರರು,—''ರಾಮಾ, ಈ ವನದಲ್ಲಿ ಗೌತಮನೆಂಬ ಮುನಿಶ್ರೇಷ್ಠನು ತನ್ನ ಪತ್ನಿಯಾದ ಅಹಲ್ಯೆ

ಯೊಂದಿಗೆ ವಾಸಿಸುತ್ತಿದ್ದನು. ಒಂದಾನೊಂದು ದಿನ ರಾತ್ರಿ ಇಂದ್ರನು ಮೋಸದಿಂದ ಬಂದು ಆ ಮುನಿಪತ್ನಿಯ ಪಾವಿತ್ರ್ಯತೆಯನ್ನು ಭಂಗಪಡಿಸಿದನು. ಅದನ್ನು ತಿಳಿದ ಗೌತಮನು ಇಂದ್ರನಿಗೂ-ಅವನ ಪಾಪಕೃತ್ಯಕ್ಕೆ ಅನುಮತಿಸಿದ ತನ್ನ ಪತ್ನಿಗೂ ಘೋರವಾದ ಶಾಪವನ್ನು ಕೊಟ್ಟನು. ಆ ಮುನಿಯ ಶಾಪದಿಂದ ಅಹಲ್ಯೆಯು ಈ ಶಿಲೆಯಾಗಿ ಬಿದ್ದಿದ್ದಾಳೆ. ಅವಳು ನಿನ್ನ ಪಾದಸ್ಪರ್ಶದಿಂದ ಪುನಃ ಸ್ವಸ್ವರೂಪವನ್ನು ಹೊಂದಬಹುದೆಂದು ವರದಾನವಿದೆ. ರಾಮಾ—ನಿನ್ನ ಪಾದಗಳಿಂದ ಈ ಶಿಲೆಯನ್ನು ಸ್ಪರ್ಶ ಮಾಡಿ, ಆ ಸಾಧ್ವಿಗೆ ಶಾಪವಿಮೋಚನೆಯನ್ನುಂಟುಮಾಡು" ಎಂದು ಹೇಳಿದರು. ಶ್ರೀರಾಮನು ಆ ವೃತ್ತಾಂತವನ್ನು ಕೇಳಿ ಅತಿ ಕೌತುಕಪಟ್ಟು, ಹಾಗೆಯೇ ಮಾಡಲು ಒಡನೆಯೇ ಆ ಶಿಲೆಯು ಅದೃಶ್ಯವಾಗಿ, ಎದುರಿಗೆ ಒಂದು ದಿವ್ಯ ಸ್ತ್ರೀಮೂರ್ತಿಯು ದೃಷ್ಟಿಗೋಚರವಾಯಿತು. ಆ ವಿಚಿತ್ರವನ್ನು ಕಂಡ ರಾಮಲಕ್ಷ್ಮಣರೂ, ಆ ಮಹರ್ಷಿಗಳ ಶಿಷ್ಯ ಪರಿವಾರವೂ ಪರಮಾಶ್ಚರ್ಯಪಟ್ಟರು.

ಅಹಲ್ಯೋದ್ಧಾರವಾದ ತರುವಾಯ ವಿಶ್ವಾಮಿತ್ರರು ರಾಜಪುತ್ರರೊಂದಿಗೆ ಮುಂದೆ ಪ್ರಯಾಣಮಾಡಿ, ಮಿಥಿಲಾನಗರಿಯನ್ನು ಸೇರಿದರು. ಜನಕರಾಜನು, ಬ್ರಹ್ಮರ್ಷಿಶ್ರೇಷ್ಠರಾದ ವಿಶ್ವಾಮಿತ್ರಮುನೀಶ್ವರರು ಇಬ್ಬರು ರಾಜಪುತ್ರರೊಂದಿಗೆ ಆಗಮಿಸಿದ್ದಾರೆಂಬ ವರ್ತಮಾನವನ್ನು ಕೇಳಿ ಪರಮಸಂಭ್ರಮದಿಂದ ಬಂದು ಎದುರುಗೊಂಡು, ನಮಸ್ಕಾರಪೂರ್ವಕ ಗೌರವಿಸಿದನು. ವಿಶ್ವಾಮಿತ್ರರೂ ಆತನನ್ನು ಆಶೀರ್ವದಿಸಿ ಕುಶಲಪ್ರಶ್ನೆಮಾಡಿ, ತಮಗಾಗಿ ಏರ್ಪಡಿಸಿದ್ದ ಬಹುಪವಿತ್ರವಾದ ಎಲೆವನೆಯೊಂದರಲ್ಲಿ ರಾಮಲಕ್ಷ್ಮಣರೊಂದಿಗೆ ಇಳಿದುಕೊಂಡರು. ಆಮೇಲೊಂದುದಿನ ಜನಕರಾಜನು ವಿಶ್ವಾಮಿತ್ರರನ್ನು ತನ್ನ ಅರಮನೆಗೆ ಕರೆದೊಯ್ದು ಅರ್ಘ್ಯಪಾದ್ಯಾದಿಗಳನ್ನಿತ್ತು ದಿವ್ಯಪೀಠದಲ್ಲಿ ಕುಳ್ಳಿರಿಸಿ ಉಪಚರಿಸಿದನು. ಅವರೊಂದಿಗೇ ಬಂದಿದ್ದ ಇಂದ್ರಾಗ್ನಿಗಳಂತೆ ತೇಜಸ್ವಿಗಳಾದ ಆ ರಾಜಪುತ್ರರನ್ನು ಕಂಡು ಅವರ ಪರಿಚಯವನ್ನು ತನಗೆ ಮಾಡಿಕೊಡಬೇಕೆಂದು ಕೇಳಿಕೊಂಡನು. ಜನಕನ ಮಾತನ್ನು ಕೇಳಿದ ಆ ಮುನೀಶ್ವರರು ಮುಖದಲ್ಲಿ ಮುಗುಳ್ನಗೆಯು ಪ್ರಕಾಶಿಸುತ್ತಿರಲು—"ರಾಜೇಂದ್ರಾ ಕೇಳು. ಲೋಕದಲ್ಲಿ ಸುಪ್ರಸಿದ್ಧವಾದ ಸೂರ್ಯ

ವಂಶವನ್ನು ಕುರಿತು ಕೇಳಿಬಲ್ಲೆಯಲ್ಲವೆ! ಅದರಲ್ಲಿ ಅಜಮಹಾರಾಯನ ಮಗನಾದ ದಶರಥಮಹಾರಾಜನು ಪುತ್ರಕಾಮೇಷ್ಟಿಯೆಂಬೊಂದು ಯಜ್ಞದಿಂದ ದೇವಗಣವನ್ನು ತೃಪ್ತಿಪಡಿಸಿ, ನಾಲ್ಕುಮಂದಿ ಪುತ್ರರನ್ನು ಪಡೆದನು. ಅವರಲ್ಲಿ ರಾಮಲಕ್ಷ್ಮಣರೆಂಬ ಈ ಇಬ್ಬರು ಧನುರ್ವಿದ್ಯಾವಿಚಕ್ಷಣರಾಗಿ ಬಾಲಕರಾಗಿದ್ದರೂ, ಮಹಾತೇಜಸ್ವಿಗಳಾದುದರಿಂದ ನನ್ನ ಯಾಗ ಸಂರಕ್ಷಣೆಗಾಗಿ ಇವರನ್ನು ದಶರಥ ಚಕ್ರವರ್ತಿಯಲ್ಲಿ ಯಾಚಿಸಿ ನನ್ನೊಡನೆ ಕರತಂದೆನು. ಶ್ರೀರಾಮನು ನನ್ನ ಯಜ್ಞಕ್ಕೂ, ನಮ್ಮ ಆಶ್ರಮಕ್ಕೂ ಬಹು ಉಪದ್ರವಕಾರಿಗಳಾಗಿದ್ದ ತಾಟಕೆ ಸುಬಾಹು ಮಾರೀಚರೆಂಬ ರಾಕ್ಷಸರನ್ನು ನಿಗ್ರಹಿಸಿ ಆಶ್ರಮವನ್ನು ನಿಷ್ಕಂಟಕವನ್ನಾಗಿಸಿದನು. ಯಜ್ಞಕಾರ್ಯವೂ ಸಾಂಗವಾಗಿ ನೆರವೇರಿತು ಇವರಲ್ಲದೆ, ಭರತಶತ್ರುಘ್ನರೆಂಬ ಇಬ್ಬರು ಪುತ್ರರೂ ದಶರಥನಿಗುಂಟು ನಿನ್ನಲ್ಲಿ ಶೈವಧನುಸ್ಸೆಂಬ ಪುರಾತನ ಕಾಲದ ಮಹಾ ಧನುಸ್ಸೊಂದು ಇದ್ದ ವಾರ್ತೆಯನ್ನು ನಾನು ಕೇಳಿದ್ದುದುಂಟು. ಈ ಶ್ರೀರಾಮನು ಧನುರ್ಧರರಲ್ಲಿ ಅಗ್ರೇಸರನಾದುದರಿಂದ ಆ ದೇವತಾಯೋಗ್ಯವಾದ ಧನುಸ್ಸನ್ನು ನೋಡಿ ಸಾಧ್ಯವಿದ್ದರೆ ನಾಣೇರಿಸಿ ತನ್ನ ಬಲ ಪರಾಕ್ರಮಗಳ ಪ್ರಮಾಣವನ್ನು ನಿರ್ಧರಿಸಿಕೊಳ್ಳಬೇಕೆಂದು ಯೋಚಿಸಿರುವನು. ಆ ಧನುಸ್ಸನ್ನು ಈತನು ನೋಡುವಂತೆ ಅನುಕೂಲಪಡಿಸು" ಎಂದು ನುಡಿದರು.

ವಿಶ್ವಾಮಿತ್ರರ ಆ ವಾಕ್ಯವನ್ನು ಕೇಳಿ ಜನಕರಾಜನು—'ಮಹರ್ಷಿವರ್ಯರೇ, ಅದು ಬಹು ಪುರಾತನದ ಧನುಸ್ಸೆಂಬುದರಲ್ಲಿ ಸಂಶಯವಿಲ್ಲ. ಅದನ್ನು ಶ್ರೀ ಶಂಕರನು ದಕ್ಷಯಜ್ಞ ಕಾಲದಲ್ಲಿ ಧಾರಣೆಮಾಡಿದ್ದು, ತರುವಾಯ ದೇವತೆಗಳ ವಶಕ್ಕೆ ಕೊಟ್ಟಿದ್ದನು. ನಮ್ಮ ವಂಶದಲ್ಲ ನಿಮಿಚಕ್ರವರ್ತಿಯಿಂದ ಆರನೆಯವನಾದ ದೇವರಾತನೆಂಬಾತನು, ದೇವತೆಗಳಿಂದ ಅದನ್ನು ಪಡೆದನು. ಅಂದಿನಿಂದ ಆ ಧನುಸ್ಸು ನಮ್ಮಲ್ಲೇ ಇದೆ. ಅದರ ಸಂಬಂಧದ ಇನ್ನೂ ಒಂದೆರಡು ಮಾತುಗಳನ್ನು ಹೇಳಿಬಿಡುತ್ತೇನೆ ಕೇಳಿ. ಆ ಶೈವಧನುಸ್ಸನ್ನು ಎತ್ತಿ ಯಾವ ವೀರನು ನಾಣೇರಿಸುವನೋ ಆತನಿಗೆ ನನ್ನ ಪುತ್ರಿಯೂ ಅಯೋನಿಜೆಯೂ ಆದ ಸೀತಾದೇವಿಯನ್ನು ಕೊಟ್ಟು ವಿವಾಹ ಮಾಡಬೇಕೆಂದು ಸಂಕಲ್ಪಮಾಡಿದ್ದೇನೆ. ಈ ತೇಜಸ್ವಿ ರಾಜಪುತ್ರನು

ಹಾಗೆ ಇದನ್ನೆತ್ತಿ ಬಾಗಿಸಿದರೆ, ನನ್ನ ಪುತ್ರಿ-ಕಮಲಮುಖಿ ಸೀತೆಯು ಈತನ ಕೊರಳಲ್ಲಿ ಪುಷ್ಪ ಮಾಲೆಯನ್ನು ಸಮರ್ಪಿಸುವಳು'' ಎಂದು ಹೇಳಿದನು.

ತರುವಾಯ ಜನಕರಾಜನ ಆಜ್ಞೆಯಿಂದ ನೂರಾರುಮಂದಿ ಸೇವಕರು ಬಹು ಪ್ರಯಾಸಪಟ್ಟು, ಧನುಸ್ಸನ್ನಿಟ್ಟಿದ್ದ ಮಹಾ ಭಾರವಾದ ಪೆಟ್ಟಿಗೆಯನ್ನು ಚಕ್ರಗಳಮೇಲೆ ಸಾಗಿಸಿಕೊಂಡು ಬಂದು ಸಭಾಸ್ಥಳದಲ್ಲಿಟ್ಟರು. ಅಪೂರ್ವವೂ ಭಯಂಕರವೂ ಆದ ಆ ಧನುಸ್ಸನ್ನು ನೋಡಿ ಅಲ್ಲಿದ್ದ ಸಮಸ್ತರೂ ಅದನ್ನು ಕಂಡು ಭಯವಿಹ್ವಲರಾಗಿ ಪರಮಾಶ್ಚರ್ಯದಿಂದ ಮುಂದೇನಾಗುವುದೋ ಎಂದು ಎದುರು ನೋಡಿಕೊಂಡಿದ್ದರು. ಆಗ ಜನಕರಾಜನು ವಿಶ್ವಾಮಿತ್ರರ ಸನ್ನಿಧಿಗೆ ಬಂದು ಕೈಮುಗಿದು,-''ಮೌನಿವರಾ ಇದೇ ನಾನು ಹೇಳಿದ ಧನುಸ್ಸು. ಸೀತೆಯು ವೀರಶುಲ್ಕೆಯೆಂದು ನಾನು ಪ್ರತಿಜ್ಞೆಮಾಡಿದ ತರುವಾಯ ಅನೇಕಮಂದಿ ರಾಜಾಧಿರಾಜರು ಬಂದು ಇದನ್ನು ಎತ್ತುವುದರಲ್ಲಿ ತಮ್ಮ ಶಕ್ತಿಸಾಹಸಗಳನ್ನು ಬೆಳ ಮಾಡಿಕೊಂಡು ಭಗ್ನಮನೋರಥರಾಗಿ ಹೊರಟುಹೋಗಿದ್ದಾರೆ. ಇದನ್ನು ಮನುಷ್ಯರು ಮಾತ್ರವಲ್ಲ, ದೇವ ದಾನವ ಯಕ್ಷರಾಕ್ಷಸರು ಸಹ ಎತ್ತಿ ಬಾಗಿಸಲರಿಯರು. ಮಹಾತ್ಮಾ ಇದೋ ಈ ಧನಸ್ಸನ್ನು ತಮ್ಮ ತೇಜಸ್ವಿ ಶಿಷ್ಯನು ಎತ್ತಿ ಬಾಗಿಸಿ ಇದರ ನಾರಿಯನ್ನು ಬಿಗಿದು ಕಟ್ಟುವನಾದರೆ, ನಾರೀಶಿರೋಮಣಿಯಾದ ನನ್ನೀ ಕುವರಿಯನ್ನು ಈತನಿಗೆ ಒಪ್ಪಿಸುವೆನೆಂದು ಇನ್ನೊಂದುಸಾರಿ ಪ್ರತಿಜ್ಞೆ ಮಾಡುತ್ತೇನೆ'' ಎಂದನು. ಆ ಮಾತುಗಳನ್ನು ಕೇಳಿದೊಡನೆಯೇ ವಿಶ್ವಾಮಿತ್ರರು ಶ್ರೀರಾಮನಿಗೆ ಕಣ್ಣುಸಂಜ್ಞೆಯಿಂದ ಆಜ್ಞಾಪಿಸಲು ರಾಮನು ಎದ್ದು ವಿಶ್ವಾಮಿತ್ರರಿಗೂ-ಮನಸ್ಸಿನಲ್ಲೇ ತನ್ನ ಮಾತಾಪಿತೃಗಳಿಗೂ ವಂದಿಸಿ, ಧಿಟ್ಟವೂ ಗಾಂಭೀರ್ಯವೂ ಆದ ನಡಿಗೆಯಿಂದ ಆ ಪೆಟ್ಟಿಗೆಯ ಸಮೀಪಕ್ಕೆ ಬಂದು, ಬಹುಮಂದಿ ರಾಜರ ವೀರ್ಯವನ್ನು ಭಂಗಗೊಳಿಸಿದ ಆ ಧನುಸ್ಸು ಎಂತಹುದೋ ನೋಡಬೇಕೆಂದು ಕೌತುಕದಿಂದ ಪೆಟ್ಟಿಗೆಯೊಳಕ್ಕೆ ಬಗ್ಗಿ ನೋಡಿದನು. ಘಟಸರ್ಪದಂತೆ ಭಯಂಕರವಾಗಿದ್ದಿತಾದರೂ, ಆ ಧನುಸ್ಸು, ಇತರ ಅನೇಕಮಂದಿ ಕ್ಷುದ್ರ ಜೀವಿಗಳನ್ನು ಅಂಜಿಸಿದಂತೆ ಮಹಾಪ್ರತಾಪಿಯಾದ ಶ್ರೀರಾಮನನ್ನೂ ಅಂಜಿಸಲಾರದೆ ಹೋಯಿತು. ಆಗ ರಾಮನು ಅಷ್ಟು ಕೌತುಕಕ್ಕೆಡೆಯಾಗಿದ್ದ ಆ ಧನುಸ್ಸಿನ ಮಧ್ಯಭಾಗಕ್ಕೆ ತನ್ನ ಎಡಗೈಯನ್ನು

ನೀಡಿ ಲೀಲಾಮಾತ್ರದಿಂದ ಅದನ್ನು ಮೇಲಕ್ಕೆತ್ತಿಬಿಟ್ಟನು. ಮಹಾ ಬಲ ಶಾಲಿಯಾದ ರಾವಣನಿಗೂ ಎತ್ತಲಸಾಧ್ಯವಾಗಿದ್ದ ಆ ಧನುಸ್ಸನ್ನು ಸುಲಭ ವಾಗಿ ಎತ್ತಿಬಿಟ್ಟ ಆ ಯುವಕನ ಶಕ್ತಿಸಾಮರ್ಥ್ಯಗಳನ್ನು ಕುರಿತು ನೆರೆದ ಸಮಸ್ತ ಜನರೂ ಪರಮಾಶ್ಚರ್ಯಪಟ್ಟುಹೋದರು. ಮುಂದೇನಾಗುವು ದೋ ನೋಡಬೇಕೆಂಬ ಲವಲವಿಕೆಯು ಎಲ್ಲರನ್ನೂ ಆವರಿಸಿರಲು ಯಾರೂ ಎವೆಯಿಕ್ಕದೆ—ಗಟ್ಟಿಯಾಗಿ ಉಸಿರನ್ನು ಸಹ ಬಿಡದೆ—ಶ್ರೀರಾಮನನ್ನೂ ಧನುಸ್ಸನ್ನೂ ಆತನ ಕ್ರಿಯೆಗಳನ್ನೂ ಗಮನಿಸಿನೋಡುತ್ತಾ, ಕ್ಷಣಕ್ಷಣ ಗಳನ್ನೂ ಎಣಿಸುತ್ತಾ ಅತಿಶಯ ಆತುರದಿಂದ ಗಮನಿಸುತ್ತಿದ್ದರು. ಅಷ್ಟ ರಲ್ಲಿ ಶ್ರೀರಾಮನು ಹಾಗೆ ಎತ್ತಿದ ಧನುಸ್ಸಿನ ನಾಣನ್ನು ಹಿಡಿದೆಳೆದು ಇನ್ನೊಂದು ಕೊನೆಗೆ ತಗುಲಿಸಿಬಿಟ್ಟನು. ಕ್ಷಣಮಾತ್ರದಲ್ಲಿ ನಡೆದುಹೋದ ಬಹು ಪ್ರಯಾಸಸಾಧ್ಯವಾದ ಆ ಕಾರ್ಯವು ಸರ್ವರನ್ನೂ ಅದ್ಭುತಗೊಳಿ ಸಿತು. ಅಷ್ಟುಮಾತ್ರವಲ್ಲ, ಉತ್ತರ ಕ್ಷಣದಲ್ಲೇ ಶಿಡಿಲು ಹೊಡದಂತೆ ಭಯಂಕರ ಶಬ್ದವೊಂದು ಸಕಲರ ಕಿವಿಗಳನ್ನೂ ಕಿವುಡಾಗಿಸಿತು. ಅದೇ ನೆಂದು ನೋಡುವಷ್ಟರಲ್ಲಿ ಆ ಮಹಾಧನುಸ್ಸು ಮಧ್ಯಭಾಗಕ್ಕೆ ಮುರಿದು ಎರಡು ತುಂಡಾಗಿ ಒಂದು ತುಂಡು ಭೂಮಿಯಲ್ಲಿ ಬಿದ್ದಿತು, ಇನ್ನೊಂದು ತುಂಡನ್ನು ಕೈಯ್ಯಲ್ಲಿ ಹಿಡಿದಿದ್ದ ಆ ರಾಜಕುಮಾರನು, ಆ ಪುರಾತನ ಧನುಸ್ಸು ತನ್ನ ಅಚಾತುರ್ಯದಿಂದ ಮುರಿದುಹೋಯಿತೋ ಎಂದು ಗಾಬರಿಪಟ್ಟಂತೆ ಕ್ಷಣಕಾಲ ಸುಮ್ಮನೆ ನಿಂತನು. ಶ್ರೀರಾಮನ ಆ ಕಾರ್ಯವು ಜನಕರಾಜನ ಆಸ್ಥಾನದಲ್ಲಿದ್ದವರನ್ನು ಆಶ್ಚರ್ಯಜಲಧಿಯಲ್ಲಿ ಮುಳುಗಿಸಿತು. ಜನಕ ರಾಜನು ತಾನು ಕನಸಿನಲ್ಲೂ ಎಣಿಸಿರದ ಆ ಸಂಭವವನ್ನು ಕಂಡು ಮಹ ದಾಶ್ಚರ್ಯದಿಂದ, ವಿಶ್ವಾಮಿತ್ರರ ಸನ್ನಿಧಿಯಲ್ಲಿ, ರಾಜಪುತ್ರನ ಪರಾಕ್ರಮ ವನ್ನು ವಿಶೇಷವಾಗಿ ಹೊಗಳಿ—"ಮುನಿವರರೆ ಸಾಕ್ಷಾತ್ ಶಿವನಿಂದ ಮಾತ್ರ ಧರಿಸಲು ಸಾಧ್ಯವೆನಿಸುವ ಈ ಮಹಾ ಧನುಸ್ಸನ್ನು ಎತ್ತಿ ಭಂಗಿ ಸಿದುದರಿಂದ ಈ ವೀರರಾಜಪುತ್ರನು ವೀರಶುಲ್ಕವಾದ ನಮ್ಮ ಸೀತೆಗೆ ಯೋಗ್ಯವರನೆಂಬುದು ನಿಶ್ಚಯವಾಯಿತು. ಈ ಮೂಲಕ, ಪ್ರಸಿದ್ಧವೂ ಯಶಸ್ವಿಯೂ ಆದ ಸೂರ್ಯವಂಶದವರೊಂದಿಗೆ ಸಂಬಂಧ ಬೆಳೆದುದಕ್ಕಾಗಿ ಯೂ ಬಹು ಸಂತೋಷವೆನಿಸುತ್ತದೆ. ತಾವು ಸಮ್ಮತಿಸುವುದಾದರೆ, ಬಂಧು

ಮಿತ್ರಪರಿವಾರಗಳೊಂದಿಗೆ ಹೊರಟುಬಂದು ಕನ್ಯಾ ಸ್ವೀಕಾರಮಾಡ ಬೇಕೆಂದು ದಶರಥಚಕ್ರವರ್ತಿಗೆ ಲಗ್ನಪತ್ರಿಕೆಯನ್ನು ಕಳುಹಿಸುತ್ತೇನೆ" ಎಂದು ಕೇಳಿಕೊಂಡನು.

ಜನಕರಾಜನ ಆ ಮಾತಿಗೆ ವಿಶ್ವಾಮಿತ್ರರು ಒಡನೆ ಸಮ್ಮತಿಸಿದರು. ಉತ್ತರ ಕ್ಷಣದಲ್ಲೇ ಬೇಹಿನವರು ಶೀಘ್ರಗತಿಯ ತುರಗಗಳನ್ನೇರಿ ಹೊರಟು, ಅಯೋಧ್ಯಾ ರಾಜಧಾನಿಯನ್ನು ಸೇರಿ, ಜನಕರಾಜನು ಕೊಟ್ಟ ಲಗ್ನಪತ್ರಿಕೆಯನ್ನು ದಶರಥ ಸಾರ್ವಭೌಮನ ಸನ್ನಿಧಿಯಲ್ಲಿ ಒಪ್ಪಿಸಿದರು. ಆದರ ಒಕ್ಕಣೆಯನ್ನು ಓದಿಸಿ ಕೇಳಿದ ಸಾರ್ವಭೌಮನು, ವಿಶ್ವಾಮಿತ್ರ ಮಹರ್ಷಿಗಳೊಂದಿಗೆ ನಡೆದ ತನ್ನ ಮಕ್ಕಳ ಅಭಿವೃದ್ಧಿಯನ್ನು ಕುರಿತು ಪರಮೋತ್ಸಾಹ - ಆನಂದಗಳಿಂದ ತನ್ನನ್ನೇ ತಾನು ತಿಳಿಯದವನಾಗಿ, ಆ ವಿಚಾರವನ್ನು ತನ್ನ ಮಂತ್ರಿ ಸಾಮಂತರು, ಕುಲಗುರುಗಳಾದ ವಸಿಷ್ಠರು, ತನ್ನ ಪತ್ನಿಯರು ಮುಂತಾದ ಎಲ್ಲರಿಗೂ ತಿಳಿಸಿ ಮಾರನೆಯ ದಿನವೇ ಮಿಥಿಲಾನಗರಿಗೆ ಪ್ರಯಾಣವೆಂದು ಪ್ರಕಟಿಸಿದನು. ಸಮಸ್ತ ವಿವಾಹ ಸಾಮಗ್ರಿಗಳೂ ರಾಜಾಜ್ಞೆಯಿಂದ ಕೂಡಲೆ ಸಿದ್ಧಗೊಳಿಸಲ್ಪಟ್ಟುವು. ಮಾರನೆಯ ದಿನದ ಒಂದು ಶುಭಲಗ್ನದಲ್ಲಿ ಪುರೋಹಿತರಾದ ವಸಿಷ್ಠರು ಮಾರ್ಗದರ್ಶಕರಾಗಲು, ಕಲಶ ಕನ್ನಡಿಗಳನ್ನೂ-ಅರಿಸಿನ ಕುಂಕುಮ ಗಂಧಪುಷ್ಪ ಅಕ್ಷತಾದಿ ಮಂಗಳದ್ರವ್ಯಗಳನ್ನೂ ಹಿಡಿದು ಮುತ್ತೈದೆಯರು ಮುಂದೆ ನಡೆದರು. ಹಸ್ತಿ ಅಶ್ವ ರಥ ಪದಾತಿ ಸೈನ್ಯವು ಪ್ರಚಂಡ ಕೋಲಾಹಲದಿಂದ ಭೂಮ್ಯಂತರಿಕ್ಷಗಳನ್ನು ಒಂದಾಗಿಸುತ್ತ ಹೊರಟು ಪ್ರಯಾಣಮಾಡಿದರು. ದಶರಥ ಸಾರ್ವಭೌಮನು ತನ್ನ ಮೂರುಮಂದಿ ರಾಜ ಮಹಿಷಿಯರೊಂದಿಗೂ ಭರತಶತ್ರುಘ್ನರೊಂದಿಗೂ ಮಹಾಗಜಗಳನ್ನೇರಿ ಮಂಗಳವಾದ್ಯಗಳು ಭೋರಿಡುತ್ತಿರಲು, ಅಯೋಧ್ಯೆಯನ್ನು ಸುಮಂತ್ರಾದಿ ಮಂತ್ರಿಗಳ ಪಾಲನೆಗೆ ವಹಿಸಿ, ಪ್ರಯಾಣಮಾಡಿದನು.

ದಶರಥರಾಜೇಂದ್ರನು ತನ್ನ ರಾಜಧಾನಿಯನ್ನು ಸಮೀಪಿಸಿದ ವಾರ್ತೆಯು ಜನಕರಾಜನಿಗೆ ತಿಳಿಯಿತು. ಒಡನೆ ಆತನು ಯುಕ್ತಪರಿವಾರದೊಂದಿಗೂ ಪುರೋಹಿತರೊಂದಿಗೂ ಎದುರುಬಂದು ರಾಜಯೋಗ್ಯವಾದ ಸ್ವಾಗತವನ್ನಿತ್ತು ಮನ್ನಿಸಿದನು. ಎಲ್ಲರೂ ತಮ್ಮ ತಮ್ಮ ಬಿಡದಿಗಳಲ್ಲಿಳಿದು ವಿಶ್ರ

ಮಿಸಿಕೊಂಡನಂತರ, ಜನಕರಾಜನು ಪುರೋಹಿತರಾದ ಶತಾನಂದರನ್ನು ಮುಂದಿಟ್ಟುಕೊಂಡು ಬಂದು,—“ರಾಜೇಂದ್ರಾ ನಿನ್ನ ವೀರ ಕುಮಾರನಾದ ಶ್ರೀರಾಮಚಂದ್ರನು ಅದ್ಭುತವಾದ ಶೈವ ಧನುಸ್ಸನ್ನು ಭಂಗಿಸಿ ನಾನು ಪ್ರತಿಜ್ಞೆ ಮಾಡಿದ್ದಂತೆ ವೀರಶುಲ್ಕೆಯಾದ ಅಯೋನಿಜ-ಸೀತೆಯನ್ನು ಗೆದ್ದಿರುವನಷ್ಟೆ! ನನ್ನ ತನುಸಂಭವಳಾದ ಊರ್ಮಿಳೆಯನ್ನು ಶ್ರೀರಾಮಾನುಜನೂ ಸುಮನೋಹರನೂ ಆದ ಲಕ್ಷ್ಮಣನಿಗೆ ಕೊಟ್ಟು ವಿವಾಹಮಾಡಬೇಕೆಂದು ಸಂಕಲ್ಪಿಸಿರುವೆನು. ಮತ್ತು ನನ್ನ ತಮ್ಮನಾದ ಕುಶಧ್ವಜನಿಗೆ ಮಾಂಡವಿ ಶ್ರುತಕೀರ್ತಿಯರೆಂಬ ಇಬ್ಬರು ಕನ್ಯೆಯರಿರುವರು. ನೀನು ಸಮ್ಮತಿಸುವುದಾದರೆ ಆ ಇಬ್ಬರನ್ನೂ ನಿನ್ನ ಮತ್ತಿಬ್ಬರು ಮಕ್ಕಳಾದ ಭರತಶತ್ರುಘ್ನರಿಗೆ ಕೊಟ್ಟು ವಿವಾಹಮಾಡುವ ಇಷ್ಟವೂ ಉಂಟು” ಎಂದು ತನ್ನ ಹೃದಯದಲ್ಲಿದ್ದ ಅಪೇಕ್ಷೆಯನ್ನು ತಿಳಿಸಿದನು. ಆ ಮಾತುಗಳನ್ನು ಕೇಳಿದ ದಶರಥನು ತನ್ನ ಆನಂದವನ್ನು ಮಾತುಗಳಿಂದ ತಿಳಿಸಲಾರದೆ, ಸಾರೋದ್ಧಾರವಾಗಿ ಆನಂದಬಾಷ್ಪಗಳನ್ನು ಸುರಿಸುತ್ತಾ ಆ ಮೂಲಕವೇ ತನ್ನ ಸಮ್ಮತಿಯನ್ನು ಸೂಚಿಸಲು ಮುಂದೆ ಜಯ ಜಯ ಧ್ವಾನಗಳಿಂದ ಉಭಯ ಗೃಹಗಳಲ್ಲೂ ವಿವಾಹ ಮಂಗಳ ಕಾರ್ಯಕ್ಕೆ ಉಪಕ್ರಮವಾಯಿತು.

ಮಾರನೆಯ ಪ್ರಾತಃಕಾಲ ಮಂಗಳವಾದ್ಯಗಳು ಭೋರ್ಗರೆಯುತ್ತಿರುವಾಗ್ಗೆ, ದಶರಥಚಕ್ರವರ್ತಿಯು, ಪ್ರಾರಂಭದಲ್ಲಿ ನಡೆಯಬೇಕಾದ ಶುಭಕಾರ್ಯಗಳನ್ನು ವಸಿಷ್ಠಮಹರ್ಷಿಗಳ ಸೂಚನೆಯನ್ನನುಸರಿಸಿ ನೆರವೇರಿಸಿದನು. ಕ್ರಮವಾಗಿ ನಾಂದೀ ಶ್ರಾದ್ಧಾದಿಗಳು ನಡೆದು ಸಮಾವರ್ತನಾ ವಿಧಿಯೂ ನಡೆಯಿತು. ಸಮಾವರ್ತನೆಯ ಕಾಲದಲ್ಲಿ ದಶರಥನು ತನ್ನ ನಾಲ್ಕುಮಂದಿ ಮಕ್ಕಳಹೆಸರಿನಲ್ಲೂ ಒಬ್ಬೊಬ್ಬರಿಗೊಂದೊಂದು ಲಕ್ಷದಂತೆ ನಾಲ್ಕುಲಕ್ಷ ಗೋವುಗಳನ್ನು ಬ್ರಾಹ್ಮಣವರ್ಗಕ್ಕೆ ದಾನಮಾಡಿದನು ಅನೇಕಸಹಸ್ರ ಬ್ರಾಹ್ಮಣಸುವಾಸಿನೀಜನಗಳು ದಿವ್ಯ ಭಕ್ಷ್ಯಭೋಜ್ಯಗಳಿಂದ ತೃಪ್ತಿಗೊಳಿಸಲ್ಪಟ್ಟರು. ಮೂರನೆಯ ದಿನ ಅರುಣೋದಯ ಕಾಲಕ್ಕೇ ವಿವಾಹಕ್ಕಾಗಿ ಏರ್ಪಡಿಸಿದ್ದ ಭವ್ಯ ಮಂಟಪವು ಜನಸಮೂಹದಿಂದ ತುಂಬಿಹೋಯಿತು. ಋಷಿಮುನಿಗಳೊಂದುಕಡೆ ವಿಪ್ರೋತ್ತಮರೊಂದುಕಡೆ ಮುತ್ತೈದೆಯರೊಂದುಕಡೆ, ದೇಶವಿದೇಶದ

ರಾಜವರ್ಗದವರೊಂದುಕಡೆ, ರಾಜಸ್ತ್ರೀಯರೊಂದುಕಡೆ ಹೀಗೆ ಅವರವರಿಗೆ ಯುಕ್ತಸ್ಥಾನಗಳಲ್ಲಿ ಯುಕ್ತಪೀಠಗಳಲ್ಲಿ ಕುಳಿತು ಧಾರಾಮುಹೂರ್ತವನ್ನು ಎದುರು ನೋಡುತ್ತಿದ್ದರು. ಆ ವೇಳೆಗೆ ದಶರಥರಾಜೇಂದ್ರನು, ದಿವ್ಯಾಭರಣ ಭೂಷಿತರಾದ ತನ್ನ ಪತ್ನಿಯರೊಂದಿಗೆ ತನ್ನ ನಾಲ್ಕುಮಂದಿ ಮಕ್ಕಳನ್ನು ಕರೆದುಕೊಂಡು, ಸಕಲರೂ ಜಯಜಯವೆಂದು ಹೊಗಳುತ್ತಿರಲು ವಿವಾಹ ಮಂಟಪವನ್ನು ಹೊಕ್ಕನು. ಜನಕರಾಜನೂ, ತತ್ಪೂರ್ವದಲ್ಲೇ ನಡೆಯಬೇಕಾದ ತನ್ನ ಪುತ್ರಿಯರ ಗೌರೀಪೂಜೆ ಲಕ್ಷ್ಮೀಪೂಜೆ ಮುಂತಾದುವುಗಳನ್ನು ನೆರವೇರಿಸಿ ಪುರೋಹಿತರಾದ ಶತಾನಂದರು ಮುಂದೆ ಬರುತ್ತಿರಲು ತನ್ನ ಪ್ರಿಯಪುತ್ರಿಯರನ್ನೂ, ತನ್ನ ತಮ್ಮನ ಪುತ್ರಿಯರನ್ನೂ ಕರೆದುಕೊಂಡು ಸಭಾಪ್ರವೇಶ ಮಾಡಿದನು. ಕಾಲೋಚಿತ ಕೃತ್ಯಗಳನ್ನು ಆರಿತ ವಸಿಷ್ಠಾದಿ ಮಹರ್ಷಿಗಳು, ಮಂತ್ರೋಕ್ತವಾಗಿ ಅಗ್ನಿಯನ್ನು ಪ್ರತಿಷ್ಠಿಸಿ ಅದರಲ್ಲಿ ಹೋಮವನ್ನು ಮಾಡಿಸಿದರು. ಆಗ ದಿವ್ಯ ಮುಹೂರ್ತವು ಒದಗುತ್ತಿರಲು, ಜನಕನು ಭೂಪುತ್ರಿಯಾದ ಸೀತೆಯನ್ನು ಶ್ರೀರಾಮನ ಮುಂದೆ ನಿಲ್ಲಿಸಿ,— "ಎಲೈ ಕುಮಾರನೇ ಇದೋ ನೋಡು, ಇಲ್ಲಿ ನಿಂತಿರುವ ಈ ಸೀತೆಯು ನನ್ನ ಮಗಳು ಈಕೆಯು ನಿನಗೆ ಧರ್ಮಪತ್ನಿಯಾಗಲುಳ್ಳವಳು. ಇವಳನ್ನು ಪರಿಗ್ರಹಿಸು ನಿನಗೆ ಮಂಗಳವಾಗುವುದು ಈಕೆಯ ಕೈಯನ್ನು ನಿನ್ನ ಶುಭ ಹಸ್ತದಿಂದ ಹಿಡಿ. ಈಕೆಯು ಮಹಾಪತಿವ್ರತೆಯೂ ಭಾಗ್ಯಶಾಲಿನಿಯೂ ಆಗಿದ್ದು ನಿನ್ನನ್ನು ನೆಳಲಿನಂತೆ ಅನುಸರಿಸುವಳು" ಎಂದು ನುಡಿದು ಮಂತ್ರಪೂರ್ವಕವಾದ ದಾನ ಜಲವನ್ನು ಶ್ರೀರಾಮನಹಸ್ತದಲ್ಲಿ ಬಿಟ್ಟನು. ಊರ್ಮಿಳೆ ಮಾಂಡವಿ ಶ್ರುತಕೀರ್ತಿಯರನ್ನು ಕ್ರಮವಾಗಿ ಲಕ್ಷ್ಮಣ ಭರತ ಶತ್ರುಘ್ನರಿಗೂ ಧಾರಯೆರೆದುದಾಯಿತು. ನಾಲ್ಕುಮಂದಿ ಕನ್ಯೆಯರೂ ದಿವ್ಯಪರಿಮಳ ಪುಷ್ಪಹಾರಗಳನ್ನು ತಮ್ಮ ತಮ್ಮ ಪತಿಗಳ ಕೊರಳುಗಳಲ್ಲಿ ಸಮರ್ಪಿಸಿದರು. ಆಗ ದಿವ್ಯಮಂಗಳ ವಾದ್ಯಗಳು ಘೋರ್ಗರೆದುವು. ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿದರು. ಮಹರ್ಷಿಗಳು ವೇದೋಕ್ತ ಆಶೀರ್ವಚನಗಳನ್ನು ನುಡಿದರು. ನೆರೆದ ಸಕಲರೂ ಜಯಜಯಕಾರ ಮಾಡಿದರು. ಜಯಘೋಷವು ಮುಗಿಲು ಮುಟ್ಟಿತು. ಸಕಲ ಬ್ರಾಹ್ಮಣ ಸುವಾಸಿನಿಯರೂ - ದಾನ ದಕ್ಷಿಣೆ ತಾಂಬೂಲ ಭೂರಿ ಭೋಜನಾದಿ ಉಪ

ಚಾರಗಳಿಂದ ತೃಪ್ತಿಗೊಳಿಸಲ್ಪಟ್ಟರು. ನಾಲ್ಕುಮಂದಿ ಕನ್ಯೆಯರೂ ತಮಗೆ ಅನುರೂಪರಾದ ವರಶ್ರೇಷ್ಠರ ರೂಪಸಂಪತ್ತಿಯಿಂದಲೂ, ಅವರ ಮಾತೆಯರು ಮಹದೈಶ್ವರ್ಯಸಂಪನ್ನನಾದ ದಶರಥ ಚಕ್ರವರ್ತಿ ಪುತ್ರರಾದ ಅವರ ಐಶ್ವರ್ಯ ವೈಭವಾದಿಗಳಿಂದಲೂ, ಜನಕ ಕುಶಧ್ವಜರು ಸಕಲ ಶಾಸ್ತ್ರಪಾರಂಗತರೂ, ಧನುರ್ವಿದ್ಯಾವಿಶಾರದರೂ, ಸದ್ಗುಣ ಭರಿತರೂ ಆದ ತಮ್ಮ ಅಳಿಯಂದಿರ ಕೀರ್ತಿಪ್ರತಾಪಾದಿಗಳಿಂದಲೂ, ಬಂಧುವರ್ಗದವರು ಪರಮಪವಿತ್ರವಾದ ಸೂರ್ಯ ವಂಶದೊಂದಿಗೆ ತಮ್ಮ ಮಿಥಿಲ ರಾಜವಂಶಕ್ಕೆ ನಡೆದ ಆ ಸಂಬಂಧದಿಂದಲೂ ಹೀಗೆ ಸಕಲರೂ ತಮತಮಗೆ ಅಪೇಕ್ಷಿತವಾದ ಕೋರಿಕೆಗಳನ್ನು ಪಡೆದು ಸಂತುಷ್ಟರಾದರು. ಇತ್ತ ದಶರಥ ಚಕ್ರವರ್ತಿಯೂ ಕೌಸಲ್ಯಾ ಸುಮಿತ್ರೆ ಕೈಕೇಯಿಯರೂ ತಮ್ಮ ವಂಶಕ್ಕೆ ಬಂದ ಸ್ಫುರದ್ರೂಪಿಗಳೂ ಸಕಲ ಸದ್ಗುಣ ಮಂಡಿತರೂ ವಿನಯ ಸಂಪನ್ನರೂ ಆದ ಆ ನಾಲ್ಕುಮಂದಿ ಸೊಸೆಯರನ್ನೂ ಬಹುಮಟ್ಟಿಗೆ ಮೆಚ್ಚಿಕೊಂಡರು. ಕಲ್ಯಾಣ ಮಹೋತ್ಸವಕ್ಕಾಗಿ ನೆರೆದ ಸಮಸ್ತರೂ ಆ ನಾಲ್ಕುಮಂದಿ ವಧೂವರರ ಅನುಕೂಲ ದಾಂಪತ್ಯವನ್ನು ಕುರಿತು ಸಂತುಷ್ಟಿಯಿಂದ ಮನದಣಿಯೆ ಶ್ಲಾಘಿಸಿದರು. ಆ ಕಲ್ಯಾಣಮಹೋತ್ಸವದಲ್ಲಿ ಯಾವ ಲೋಪವೂ ಇಲ್ಲದೆ, ಸಮಸ್ತ ಕಾರ್ಯಗಳೂ ಸರ್ವೋತ್ತಮ ರೀತಿಯಿಂದ ನಡೆದು ಉಭಯಪಕ್ಷದ ರಾಜವಂಶದವರೂ ಪರಮ ಸಂತೋಷದಿಂದ ಒಂದುಗೂಡಿದರು.



## ಅಧ್ಯಾಯ ೩ "ದಂಡಕಾವನ ವಾಸ"

ವಿವಾಹ ಮಹೋತ್ಸವದ ಕಾರ್ಯಕಲಾಪಗಳೆಲ್ಲವೂ ನಡೆದ ತರುವಾಯ ದಶರಥರಾಜನು ತನ್ನ ಬಿಯ್ಯಗನಾದ ಜನಕಮಹಾರಾಜನ ಅನುಮತಿಯನ್ನು ಪಡೆದು ಮಕ್ಕಳೊಂದಿಗೂ ಸೊಸೆಯರೊಂದಿಗೂ ಪತ್ನೀಪರಿವಾರಗಳೊಂದಿಗೂ ಅಯೋಧ್ಯಾಭಿಮುಖವಾಗಿ ಪ್ರಯಾಣಮಾಡಿದನು. ಜನಕ

ರಾಜನು ಮಹಾಜ್ಞಾನಿಯೇ ಆಗಿದ್ದರೂ, ತಾನು ಜನ್ಮಾರಭ್ಯ ಪ್ರೀತಿ ವಾತ್ಸಲ್ಯಗಳಿಂದ ಬೆಳೆಸಿದ್ದ ಮೋಹದ ಕುವರಿಯರನ್ನು ಕಳುಹಿಸಿಕೊಡ ಬೇಕಾಗಿ ಬಂದಾಗ-ಲೌಕಿಕ ಸಾಮಾನ್ಯವಾಗಿ ಆತನ ಕಣ್ಣುಗಳಿಂದಲೂ ಎರಡು ಹನಿ ನೀರು ಉದುರದಿರಲಿಲ್ಲ. ಆದರೆ ಪ್ರಾಜ್ಞನಾದ ಆತನು ಆ ವ್ಯಸನವನ್ನು ತಡೆದುಕೊಂಡು ತನ್ನ ಆ ಮಕ್ಕಳಿಗೆ ಯೋಗ್ಯ ಬುದ್ಧಿವಾದ ಗಳನ್ನು ಹೇಳಿ, ದಾಸದಾಸೀ ಜನಗಳನ್ನೂ ವಿಶೇಷ ಧನಕನಕ ರತ್ನಗಳನ್ನೂ ಕೊಟ್ಟು ತೃಪ್ತಿಪಡಿಸಿ ಕಳುಹಿಸಿದನು. ದಶರಥರಾಜನ ಪ್ರಯಾಣವು ಕೆಲ ದೂರ ಸುಖವಾಗಿ ಕಳೆಯಿತು. ಮಾರ್ಗಮಧ್ಯದಲ್ಲಿ ಪ್ರಾಪ್ತನಾದ ಭಾರ್ಗವ ರಾಮನನ್ನು ಶ್ರೀರಾಮನು ಭಂಗಪಡಿಸಿ-ಆತನ ಬಳಿಯಲ್ಲಿದ್ದ ವೈಷ್ಣವ ಧನು ಸ್ಸನ್ನೂ ಮುರಿದು, ಹದರಿ ಕಂಗೆಟ್ಟಿದ್ದ ದಶರಥ ಮಹಾರಾಜನಿಗೂ ಪರಿವಾರ ಕ್ಕೂ ಪರಮಾನಂದವನ್ನುಂಟುಮಾಡಿದನು. ಸೀತೆಯು ಲೋಕೈಕವೀರ ನಾದ ತನ್ನ ಪತಿಯ ಕೀರ್ತಿಯು ಮೇಲೆಮೇಲೆ ಅಭಿವೃದ್ಧಿಯಾಗುತ್ತಿದ್ದು ದನ್ನು ಕುರಿತು ಒಳಗೊಳಗೇ ಆನಂದಿಸುತ್ತಿದ್ದಳು. ಎಲ್ಲರೂ ಸುಖವಾಗಿ ಅಯೋಧ್ಯಾನಗರಿಯನ್ನು ಸೇರಿದರು. ಪುರಜನ ಪರಿಜನ-ಮಂತ್ರಿ ಸಾಮಂ ತರು ತಮ್ಮ ಚಕ್ರವರ್ತಿಯನ್ನೂ ನೂತನ ವಧೂವರರನ್ನೂ ಯುಕ್ತ ಮರ್ಯಾದೆಯಿಂದ ಎದುರುಗೊಂಡು ಕಾಣಿಕೆಗಳನ್ನರ್ಪಿಸಿದರು. ದಶರಥ ನು ತನ್ನ ನಾಲ್ಕುಮಂದಿ ಮಕ್ಕಳನ್ನೂ ಅವರವರ ಪತ್ನಿಯರೊಂದಿಗೆ ಬಹು ವಿಸ್ತಾರವೂ ಶೃಂಗಾರವೂ ಭವ್ಯವೂ ಆದ ನಾಲ್ಕು ಬೇರೆ ಬೇರೆ ಅರಮನೆ ಗಳಲ್ಲಿ ಇಳಿಸಿದನು. ಧೀರರೂ ಸುಕುಮಾರರೂ ಸುಂದರರೂ ಆದ ನಾಲ್ಕು ಮಂದಿ ರಾಜಕುಮಾರರೂ ತಮ್ಮ ಭಾರ್ಯೆಯರಲ್ಲಿ ಸಕಲ ವಿಧ ಭೋಗ ಗಳನ್ನೂ ಅನುಭವಿಸುತ್ತ, ತಂದೆಗೂ ಮೂರುಮಂದಿ ತಾಯಿಯರಿಗೂ ಪ್ರಜೆ ಪರಿವಾರಗಳಿಗೂ ಸಂತೋಷಪ್ರದರಾಗಿ ಸುಖವಾಗಿದ್ದರು.

ಶ್ರೀ ಸೀತಾರಾಮರಲ್ಲಿದ್ದ ಪ್ರಣಯ-ಪ್ರೇಮಗಳನ್ನು ಕುರಿತು ವರ್ಣಿ ಸಬೇಕಾದುದೇ ಇಲ್ಲ. ಸೀತಾದೇವಿಯು ಮಹಾರಾಜ ಪುತ್ರಿಯಾದುದರಿಂದ ಯಾವ ಕೊರತೆಯೂ ಇಲ್ಲದೆ ಅಕ್ಷಯಭೋಗಸಾಮಗ್ರಿಗಳಿಂದ ತನ್ನ ಪ್ರಿಯ ಭರ್ತನ ಮನರಂಜನೆಗಾಗಿ ಏನೇನುಬೇಕೋ ಆ ಎಲ್ಲವನ್ನೂ ಸಿದ್ಧಪಡಿಸಿಕೊಂ ಡು ಸದಾ ಸೇವಾತತ್ಪರಳಾಗಿರುವಳು. ಆತನು ಅಂತಃಪುರಕ್ಕೆ ಬಂದೊಡ

ಸೆಯೇ ಶುಭ್ರಜಲದಿಂದ ಪಾದಗಳನ್ನು ತೊಳೆದು ಯೋಗ್ಯಾಸನವನ್ನಿತ್ತು ಮಗ್ಗುಲಲ್ಲಿ ನಿಂತು ಹಸನ್ಮುಖವೂ ಸೌಮ್ಯದೃಷ್ಟಿಯೂ ಮೃದುನುಡಿಯೂ ಚಿತ್ತಾಪಹಾರಕವಾಗಿರಲು ಗಾಳಿ ಬೀಸಿ ಆಯಾಸವನ್ನು ಪರಿಹರಿಸುವಳು. ಆತನ ದೇಹಪೋಷಣೆಯನ್ನು ನೋಡಿಕೊಳ್ಳಲು ನೂರಾರುಮಂದಿ ದಾಸ ದಾಸೀಜನಗಳಿದ್ದರೂ, ಅತ್ಯಂತ ಪ್ರೇಮ-ಆದರಗಳಿಂದ ಆಯಾ ಕೆಲಸಗಳನ್ನು ತಾನೇ ಮಾಡುವಳು. ಭುವನಮನೋಹರನಾದ ಆತನ ದಿವ್ಯಮಂಗಳ ವಿಗ್ರಹವನ್ನು ನೋಡಿನೋಡಿದಂತೆ ಆಕೆಯ ಮನಸ್ಸಿನಲ್ಲಿ ಉಂಟಾಗುತ್ತಿದ್ದ ಆನಂದದ ತೆರೆಗಳನ್ನು ಎಣಿಸಲಳವಲ್ಲ. ಶ್ರೀರಾಮನ ದಿವ್ಯರೂಪವು ನಖಶಿಖಾಂತವಾಗಿ ಆ ಸಾಧ್ವಿಯ ಕಣ್ಣುಗಳ ಮೂಲಕ ಪ್ರವೇಶಿಸಿ ಆಕೆಯ ಹೃದಯಭಿತ್ತಿಯಲ್ಲಿ ಸ್ಥಿರವಾಗಿ ಚಿತ್ರಿತವಾಗಿಹೋಯಿತು. ರಾಮನು ತನ್ನೊಂದಿಗೆ ಅರಮನೆಯಲ್ಲಿಲ್ಲದಿದ್ದ ಕಾಲದಲ್ಲಿ, ಸೀತೆಯು ತನ್ನ ಹೃದಯಸ್ಥ ಶ್ರೀರಾಮಮೂರ್ತಿಯನ್ನು ಕಂಡು ಆನಂದಿಸುತ್ತ ಇರುವಳು. ಸೀತೆಯಂತೆಯೇ ಶ್ರೀರಾಮನಾದರೂ ಚಕ್ರವರ್ತಿ ಪುತ್ರನಾದ್ದರಿಂದ ಆತನೂ ಆಯಾ ಋತು ಧರ್ಮವನ್ನನುಸರಿಸಿ ವಿವಿಧ ಭೋಗಸಾಮಗ್ರಿಗಳನ್ನೊದಗಿಸಿ ತನ್ನ ಪತ್ನಿಯ ಮನರಂಜನೆಮಾಡಿ ಆಕೆಯೊಂದಿಗೆ ಸಕಲವಿಧ ಭೋಗಗಳನ್ನೂ ಅನುಭವಿಸುವನು. ಸೀತೆಯು ತನ್ನ ಮನಸ್ಸಿನಲ್ಲಿ ಅಂಕುರಿಸುತ್ತಿದ್ದ ಅನುರಾಗಾದಿಗಳನ್ನು ಸಂಕೋಚ-ಲಜ್ಜೆಗಳಿಂದ ಸ್ಪಷ್ಟವಾಗಿ ಪ್ರಕಟಪಡಿಸಲು ಹಿಂದೆಗೆಯುತ್ತಿದ್ದುದರ ಸೂಕ್ಷ್ಮವನ್ನು ರಸಿಕನಾದ ಶ್ರೀರಾಮನು ಕಂಡು ಹಿಡಿದು, ಆಕೆಯ ಮನೋಭಾವಕ್ಕನುಸಾರವಾಗಿ ವರ್ತಿಸಿ ಆಕೆಯ ಮನಸ್ಸಿಗೆ ಸಂತೋಷವನ್ನುಂಟುಮಾಡುವನು. ಹೀಗೆಯೇ ಸೀತೆಯಾದರೂ ಶ್ರೀರಾಮನ ಇಷ್ಟವನ್ನು ಆತನ ಇಂಗಿತಗಳಿಂದಲೇ ತಿಳಿದು ಅದಕ್ಕನುಸಾರವಾಗಿ ನಡೆಯುವಳು, ಹೀಗೆ ಕೆಲಕಾಲ ಆ ಪತಿ ಪತ್ನಿಯರು ಬಹು ಪರಿಯ ಲೌಕಿಕ ಭೋಗಭಾಗ್ಯಗಳನ್ನನುಭವಿಸಿದರು.

ವಿವಾಹವಾದ ತರುವಾಯ ಹೀಗೆ ಎಂಟು ವರ್ಷಗಳು ಕಳೆಯುವುದರೊಳಗಾಗಿ ಸೀತೆಯ ಸುಖಾನುಭವದ ದಿನಗಳು ಮುಗಿಯುತ್ತಾ ಬಂದುವು. ದಶರಥರಾಜನು ತನ್ನ ಜ್ಯೇಷ್ಠ ಪುತ್ರನಿಗೆ ಯೌವರಾಜ್ಯಾಭಿಷೇಕ ಮಾಡಬೇಕೆಂದು ಮಾಡಿದ ಪ್ರಯತ್ನವು ವ್ಯರ್ಥವಾಯಿತು. ಕೈಕೇಯಿಯು ತನ್ನ

ಮಗನಾದ ಭರತನಿಗೆ ರಾಜ್ಯವನ್ನು ಕೊಡಬೇಕೆಂದೂ, ಶ್ರೀರಾಮನು ಹದಿನಾಲ್ಕು ವರ್ಷಕಾಲ ಮುನಿಗಳಂತೆ ಜಟೆಯನ್ನೂ ನಾರುಬಟ್ಟೆಗಳನ್ನೂ ಧರಿಸಿ ವನವಾಸಮಾಡಬೇಕೆಂದೂ ವರವನ್ನು ಕೇಳಿದಳು. ದಶರಥನು ಧರ್ಮಬಂಧಕಕ್ಕೆ ಸಿಕ್ಕು ಕೆಸರಿನಲ್ಲಿ ಸಿಗಿಬಿದ್ದ ಮಹಾ ಗಜದಂತೆ ತಪ್ಪಿಸಿಕೊಳ್ಳಲರಿಯದೆ ಕಂಗೆಟ್ಟು ಕುಳಿತನು. ಸತ್ಯವಾಕ್ಯಬದ್ಧನಾದ ತನ್ನ ತಂದೆಯ ಮಾತನ್ನು ಸಾರ್ಥಕಗೊಳಿಸಿ ಆತನನ್ನು ಸತ್ಯಪ್ರತಿಜ್ಞನನ್ನಾಗಿ ಮಾಡಲು ಶ್ರೀರಾಮನು, ಕೈಗೆ ಬಂದ ಚಕ್ರವರ್ತಿಪದವನ್ನೂ ಮಹದೈಶ್ವರ್ಯವನ್ನೂ ತ್ಯಾಗಮಾಡಿ ವನವಾಸಮಾಡಲು ಸಿದ್ಧನಾದನು-ಮತ್ತು, ತನ್ನ ಆ ನಿರ್ಧಾರವನ್ನು ತಿಳಿಸಿ ವನವಾಸಕ್ಕೆ ಅನುಮತಿ ಪಡೆಯುವುದಕ್ಕಾಗಿ ಸೀತೆಯ ಅಂತಃಪುರಕ್ಕೆ ಬಂದನು.

ತನ್ನ ಅರಮನೆಗೆ ಬಂದ ಪ್ರಿಯಪತಿಯನ್ನು ಸೀತೆಯು ಎಂದಿನಂತೆ ಪಾದಾಭಿವಾದನಮಾಡಿ, ನವರತ್ನಮಯ ಪೀಠದಲ್ಲಿ ಕುಳ್ಳಿರಿಸಿ ಗಾಳಿಬೀಸುತ್ತಾ ಉಪಚರಿಸಿದಳು. ಅಂದು ಶ್ರೀರಾಮನ ಮುಖವು ಎಂದಿನಂತೆ ಪ್ರಸನ್ನವಾಗಿರದಿದ್ದುದು, ಪತಿಪ್ರಾಣೆಯಾದ ಆ ಸಾಧ್ವಿಯ ಮನಸ್ಸಿನ ಉತ್ಸಾಹವನ್ನು ಕುಂದಿಸಿತು. ಅದರ ಕಾರಣವನ್ನು ತಿಳಿಯುವ ಆತುರವು ಆಕೆಗೆ ಉಂಟಾದರೂ, ಮಹಾ ಗಾಂಭೀರ್ಯಶಾಲಿನಿಯಾದುದರಿಂದ ಆಕೆಯು ಪತಿಯಬಾಯಿಂದ ಏನು ಮಾತು ಹೊರಡುವುದೋ ಕೇಳಲು ಕಾದಿದ್ದಳು. ಆಗ ಶ್ರೀರಾಮನು—'ದೇವಿ, ನನಗೆ ನಾಳೆಯ ದಿನ ಯೌವರಾಜ್ಯ ಪಟ್ಟಾಭಿಷೇಕವಾಗುತ್ತದೆಂಬ ವಾರ್ತೆಯನ್ನು ನೀನು ಈವರೆಗೇ ಕೇಳಿದ್ದೆಯಲ್ಲವೆ! ಈ ದಿನ ಅದಕ್ಕೆ ವಿರೋಧವಾದ ವಾರ್ತೆಯನ್ನು ಕೇಳಬೇಕಾಗಿದೆ. ನನ್ನ ತಂದೆಯು ನಮ್ಮ ಬಲತಾಯಿಗೆ ಕೊಟ್ಟ ವಾಗ್ದಾನದ ಪಾಲನೆಗಾಗಿ ನನ್ನನ್ನು ಹದಿನಾಲ್ಕು ವರ್ಷಕಾಲ ವನವಾಸಕ್ಕೆ ಕಳುಹಿಸಲು ಇಷ್ಟಪಟ್ಟಿದ್ದಾನೆ. ಆತನನ್ನು ಸತ್ಯ ಪ್ರತಿಜ್ಞನನ್ನಾಗಿಸುವುದಕ್ಕಾಗಿ ಹಾಗೆ ಹೊರಡಲು ನಾನಾದರೂ ಸಮ್ಮತಿಸಿದ್ದೇನೆ. ಈ ವಾರ್ತೆಯನ್ನು ನಿನಗೆ ತಿಳಿಸಿ ಹೋಗೋಣವೆಂದು ಬಂದೆನು. ನೀನು ರಾಜರ್ಷಿಯಾದ ಜನಕಮಹಾರಾಜನ ಮಗಳು. ಸಮಸ್ತ ಧರ್ಮಸೂಕ್ಷ್ಮಗಳನ್ನೂ ಚೆನ್ನಾಗಿ ಬಲ್ಲವಳು. ಸಮಸ್ತ ನೀತಿ ವಿಚಾರಗಳೂ ನಿನಗೆ ತಿಳಿದಿವೆ. ಆದರೂ ಸೀತೆ, ನಾನಿಲ್ಲದಿರು

ವಾಗ ನಮ್ಮ ಜನಗಳೊಂದಿಗೆ ವಾಸಿಸಿ ಇರಬೇಕಾದ ನಿನಗಾಗಿ ಕೆಲವು ಮಾತುಗಳನ್ನು ಹೇಳುತ್ತೇನೆ; ಕೇಳು. ನಿನ್ನ ಅತ್ತೆಯಾದ ಕೌಸಲ್ಯಾದೇವಿಯನ್ನೂ, ಇತರ ಅತ್ತೆಯರನ್ನೂ ಸಮಾನ ಭಯಭಕ್ತಿಗಳಿಂದ ಸೇವಿಸುತ್ತಿರು. ವೃದ್ಧನಾದ ದಶರಥರಾಜನ ಮನಸ್ಸಿಗೆ ಯಾವ ವಿಷಯದಲ್ಲೂ ಆಯಾಸ ತೋರದಂತೆ ನಯ ವಿನಯ ಭಯ ಭಕ್ತಿಗಳಿಂದ ನಡೆದುಕೋ! ನಾನು ಕಾಡಿಗೆ ಹೋಗುವುದಕ್ಕೂ ನನ್ನ ಸ್ಥಾನದಲ್ಲಿ ಭರತನು ರಾಜ್ಯವಾಳಲಿಕ್ಕೂ ನಮ್ಮ ಪಿತೃವಿನ ಆಜ್ಞೆಯೇ ಮುಖ್ಯ ಕಾರಣವಾದುದರಿಂದ ಈ ಭಾಗದಲ್ಲಿ ಮರೆತಾದರೂ ಭರತನನ್ನು ಕ್ಷುದ್ರವಾಕ್ಯಗಳಿಂದ ದೂಷಿಸದಂತೆ ಜಾಗರೂಕಳಾಗಿರು. ನಾನು ಹದಿನಾಲ್ಕು ವರ್ಷಗಳನ್ನು ಹದಿನಾಲ್ಕು ದಿನಗಳೋ ಎಂಬಂತೆ ಕಳೆದು ಶೀಘ್ರದಲ್ಲೇ ಬಂದುಬಿಡುವೆನು. ಪಿತೃವಾಕ್ಯಬದ್ಧನಾದ ನನ್ನ ಪ್ರಯಾಣಕಾಲದಲ್ಲಿ ಶೋಕಿಸದೆ ಉದಾರ ಮನಸ್ಕಳಾಗಿ ನಿನ್ನ ಅನುಮತಿಯನ್ನು ಕೊಡು" ಎಂದು ಸುಮ್ಮನಾದನು.

ಅಷ್ಟುಹೊತ್ತೂ ತಲೆಯನ್ನು ತಗ್ಗಿಸಿದ್ದು ತನ್ನ ಭರ್ತನು ಹೇಳಿದ ಮಾತುಗಳನ್ನೆಲ್ಲ ಸಾವಧಾನದಿಂದ ಕೇಳುತ್ತಿದ್ದ ಆ ಸಾಧ್ವಿಯು ಆತನ ಮಾತು ಮುಗಿಯಲು—"ನಾಥಾ ಇದೇನು ನೀನು ಹೇಳುತ್ತಿರುವ ಮಾತುಗಳು. ಇಂತಹ ಮಾತುಗಳಿಂದ ನಾನು ವಂಚಿತಳಾಗತಕ್ಕವಳೆಂದು ತಿಳಿದಿರುವೆಯಾ? ಲೋಕದಲ್ಲಿ ಸ್ತ್ರೀಗೆ ತಂದೆ ತಾಯಿ ಸಹೋದರ ಸಹೋದರಿಯರು ಬಂಧುಗಳು ಮುಂತಾದ ಎಲ್ಲರಿಗಿಂತಲೂ ಪತಿಯು ಅತ್ಯಂತ ಸಮೀಪದ ಬಂಧುವೆಂಬುದನ್ನು ನೀನು ಅರಿಯೆಯಾ! ಅಷ್ಟು ಮಾತ್ರವಲ್ಲ, ಪತ್ನಿಯು ಪತಿಯ ಅರ್ಧ ಶರೀರವೇ ಅಲ್ಲವೆ! ಹೀಗಿರುವಲ್ಲ ಅಗ್ನಿಸಾಕ್ಷಿಯಾಗಿ ಕೈಹಿಡಿದು ನಿನ್ನ ಅರ್ಧ ದೇಹಿಯಾಗಿರುವ ನನ್ನನ್ನು ಇಲ್ಲಿ ಯಾರ ವಶದಲ್ಲಿ -ಯಾರ ಸೇವೆಗಾಗಿ ಬಿಟ್ಟು ನೀನೊಬ್ಬನೇ ಕಾಡಿಗೆ ಹೋಗಬೇಕೆಂದು ಹೊರಟಿರುವೆ! ನನ್ನ ಪ್ರಾಣೇಶ್ವರನಾದ ನೀನು ಕಾಡಿನಲ್ಲಿ ಕಲ್ಲುಮುಳ್ಳುಗಳನ್ನು ತುಳಿದು ಗೆಡ್ಡೆಗೆಣಸುಗಳನ್ನು ತಿಂದು ಕಷ್ಟಪಡುತ್ತಿರುವಾಗ ನಾನು ಅರಮನೆಯಲ್ಲಿದ್ದು ಮೃದುವಾದ ರತ್ನಕಂಬಳಿಗಳಮೇಲ ನಡೆದಾಡಿ, ರುಚಿಕರವಾದ ಭಕ್ಷ್ಯಭೋಜ್ಯಗಳನ್ನುಂಡು, ಹಂಸತೂಲಿಕಾತಲ್ಪದಲ್ಲಿ ಹೊರಳಾಡಿ ಸುಖಪಡಲು ಆಸಿಸುವೆನೆಂದು ಎಣಿಸಿರುವೆಯಾ! ನಾನು ಅಂತಹ ಕ್ಷುದ್ರ

ಮನಸ್ಸಿನವಳಲ್ಲ. ನೀನು ನನ್ನೊಂದಿಗಿದ್ದರೆ, ಆ ಕಾಡಿನಲ್ಲೇ ನಾನು ಹಣ್ಣು ಹಂಪಲುಗಳನ್ನು ತಿಂದಾದರೂ ಕೊನೆಗೆ ಜಲಪಾನ ಮಾಡಿಯಾದರೂ ಸಂತೋಷದಿಂದಿರುವೆನು. ರಾಜಧಾನಿಯಲ್ಲಿನ ಅರಮನೆಗೆ ಬದಲಾಗಿ ಕಾಡಿನ ಎಲೆ ಮನೆಯಲ್ಲಿ ವಾಸಿಸಿ, ಇಲ್ಲಿಯ ಷಡ್ರಸೋಪೇತವಾದ ಪಂಚಭಕ್ಷ್ಯಪರಮಾನ್ನಾದಿಗಳಿಗೆ ಬದಲಾಗಿ ಅಲ್ಲಿ ಕಸುಗಾಯಿಗಳನ್ನು ತಿಂದು, ಬಹು ಮೆತ್ತನೆಯ ಸುಪ್ಪತ್ತಿಗೆಗಳಿಗೆ ಬದಲಾಗಿ-ತರಗೆಲೆಗಳಮೇಲೆ ಮಲಗಿರುವುದನ್ನು-ನನ್ನ ಪ್ರಿಯಭರ್ತನ ಬಳಿಯಲ್ಲಿದ್ದರೆ ಸ್ವರ್ಗಸುಖವೆಂದೇ ತಿಳಿಯುವೆನು. ಇಷ್ಟೇ ಅಲ್ಲ-ನಾನು ಕೇವಲ ನಿನ್ನ ಮೇಲಿನ ಮೋಹದಿಂದ-ಬಿಟ್ಟಿರಲಾರದೆ ಹೀಗೆ ಹೇಳುತ್ತಿದ್ದೇನೆಂದು ತಿಳಿಯಬೇಡ. ಸ್ತ್ರೀಧರ್ಮವೇ ಹಾಗಿದೆ. ನಾನು ಎಂತೂ ನಿನ್ನನ್ನೂ ಬಿಟ್ಟಿರಲಾರೆನು. ನನ್ನನ್ನು ಇಲ್ಲಿ ನಿಲ್ಲೆನ್ನಬೇಡ" ಎಂದು ತನ್ನ ನಿರ್ಧಾರವನ್ನು ತಿಳಿಸಿದಳು. ಆ ಮಾತುಗಳನ್ನು ಕೇಳಿ ರಾಮನು-ಕಾಡಿನಲ್ಲಿ ಹುಲಿ ಸಿಂಹ ಆನೆ ಮುಂತಾದ ದುಷ್ಟ ಮೃಗಗಳಿಂದಲೂ ಮಹಾ ದುರುಳರೂ ಘಾತುಕರೂ ಆದ ರಾಕ್ಷಸರ ಬಾಧೆಯಿಂದಲೂ ಸುಕುಮಾರಿಯಾದ ಆಕೆಯನ್ನು ಕಾಪಾಡುವ ಮಾರ್ಗವೇನೆಂದು ಸಂದೇಹಿಸಿದನು. ಆ ಮಾತನ್ನು ಕೇಳಿಮಾತ್ರ ಮಹಾಸಾಧು ಸ್ವಭಾವದ ಆಕೆಗೂ ಕ್ಷಣಕಾಲ ಕೋಪ ಬಂದಂತಾಯಿತು.—"ಪ್ರಾಣಪ್ರಿಯಾ, ಇದೇನೀವಾರ್ತೆಯು. ನೀನು ಧನುರ್ಧರರಲ್ಲಿ ಅಗ್ರೇಸರನಲ್ಲವೆ! ಮಹಾ ಪರಾಕ್ರಮಿಯಲ್ಲವೆ! ನಿನ್ನ ವಿಕ್ರಮಕ್ಕೆ ಮೂರು ಲೋಕಗಳೂ ನಡುಗುತ್ತಿರುವುವೆಂದು ಸಕಲರೂ ತಿಳಿದಿರುವುದು ಸುಳ್ಳಲ್ಲವಷ್ಟೆ! ಇಂತಹ ಅದ್ವಿತೀಯ ಪರಾಕ್ರಮಿಯಾದ ನೀನು ನಿನ್ನ ಪತ್ನಿಯಾದ ನನ್ನನ್ನು ಕಾಪಾಡಲು ಶಕ್ತಿಯಿಲ್ಲದವನೆಂದರೆ, ಈ ಮಾತಿಗೆ ಏನು ಹೇಳಬೇಕೋ ತಿಳಿಯದಾಗಿದೆ. ಕಾಡಿನಲ್ಲಿನ ದುಷ್ಟ ಮೃಗಗಳಿಗೂ ರಾಕ್ಷಸರಿಗೂ ಹೆದರಿ ತನ್ನ ಹೆಂಡತಿಯನ್ನು ಕರೆದೊಯ್ಯಲಾರದೆ ಪರರ ವಶದಲ್ಲಿ ಬಿಟ್ಟು ದಶರಥಪುತ್ರನು ಕಾಡಿಗೆ ಹೊರಟನೆಂಬ ವಾರ್ತೆಯನ್ನು ನಮ್ಮ ತಂದೆಯು ಕೇಳಿದರೆ ನಿನ್ನ ವಿಷಯದಲ್ಲಿ ಏನೆಂದು ಅಭಿಪ್ರಾಯಪಡುವನೆಂಬುದನ್ನು ಯೋಚಿಸಿರುವೆಯಾ! ತನ್ನ ಹೆಂಡತಿಯನ್ನೇ ಕಾಪಾಡಲರಿಯದ ರಾಮನು ಪುರುಷವೇಷವನ್ನು ಧರಿಸಿಕೊಂಡು ಬಂದ ಸ್ತ್ರೀಯೆಂದು ತಿಳಿಯದೆ ಮೋಸಹೋದೆನೆಂದುಕೊ

ಳ್ಳುವನಲ್ಲವೆ! ನಾಥಾ ವ್ಯಸನಭರದಿಂದ ಆಡಿದ ಈ ಮಾತಿನಲ್ಲಿ ಅಪರಾಧ ವಿದ್ದರೆ ಕ್ಷಮಿಸು. ನಾನು ನಿನ್ನ ಪಾಲಿಗೆ ಬಂದವಳು. ನಿನ್ನ ಸುಖಗಳಲ್ಲಿ ಹೇಗೆ ಸಮಭಾಗಿಯಾಗಿದ್ದೆನೋ-ಕಷ್ಟಗಳಲ್ಲೂ ಹಾಗೆಯೇ ಜೊತೆಗಿದ್ದು ಅನುಭವಿಸಲು ಸಮ್ಮತಿಸು. ನನ್ನನ್ನು ನಿನ್ನೊಂದಿಗೆ ಕಾಡಿಗೆ ಕರೆದೊಯ್ಯಲು ಅನುಮತಿಸು! ಎಂದು ಪಾದಕ್ಕೆರಗಿ, ಎರಡು ತೋಳುಗಳಿಂದಲೂ ತನ್ನ ಮನೋವಲ್ಲಭನನ್ನು ಬಿಗಿದಪ್ಪಿಕೊಂಡು-'ನಾಥ ನನ್ನನ್ನು ಬಿಟ್ಟು ಹೋಗಬೇಡ' ಎಂದು ಎಳೆಯ ಮಗುವಿನಂತೆ ಕಣ್ಣೀರು ಸುರಿಸುತ್ತಾ ಪುನಃ ಪುನಃ ಬೇಡಿಕೊಂಡಳು.

ಆಗ ಶ್ರೀರಾಮನು, ಆಕೆಯ ಕಣ್ಣೀರನ್ನು ತನ್ನ ಕರವಸ್ತ್ರದಿಂದ ಒರೆಸಿ ಕಣ್ಣೀರಿನಿಂದ ನೆನೆದು ತಣುವಾಗಿದ್ದ ನುಣುಪಾದ ಆಕೆಯ ಕೆನ್ನೆಗಳಿಗೆ ಮುತ್ತಿಟ್ಟು, ಪುನಃ ಪುನಃ ಆಲಂಗಿಸುತ್ತಾ,-ಪ್ರಿಯೇ ಸೀತಾ ಕಾತರಳಾಗ ಬೇಡ. ಖಂಡಿತವಾಗಿ ನಿನ್ನನ್ನು ಕರೆದೊಯ್ಯುವೆನು. ಕಾಡಿನಿಂದಲೂ ದುಷ್ಟ ಮೃಗ ಪಕ್ಷಿಗಳಿಂದಲೂ, ದುಷ್ಟರಾಕ್ಷಸರಿಂದಲೂ ನಾವು ಭಯಪಟ್ಟವರಲ್ಲ. ಬೆದರದಿರು' ಎಂದು ಸಮಾಧಾನಪಡಿಸಿದನು.

ತರುವಾಯ ಶ್ರೀ ಸೀತಾರಾಮರ ಸೇವೆಗಾಗಿ ತಾನೂ ಜೊತೆಗೆ ಬರುತ್ತೇನೆಂದು ಲಕ್ಷ್ಮಣನೂ ಬೇಡಿಕೊಳ್ಳಲಾರಂಭಿಸಿದನು. ರಾಮನು ಆತನಿಗೂ ಅನೇಕ ಸಮಾಧಾನಗಳನ್ನು ಹೇಳಿ ನೋಡಿದನಾದರೂ, ಸಾರ್ಥಕವಾಗಲಿಲ್ಲ. ಕೊನೆಗೆ ಸೀತಾರಾಮ ಲಕ್ಷ್ಮಣರು ಮೂವರೂ ದಂಡಕಾರಣ್ಯಕ್ಕೆ ಹೊರಡತಕ್ಕುದೆಂದು ನಿಶ್ಚಯವಾಯಿತು. ಸೀತೆಯು ತನ್ನ ಪತಿಯಾಜ್ಞೆಯನ್ನು ಪಡೆದು ಪರಮ ಸಂಭ್ರಮದಿಂದ ತನ್ನ ಬಹುಬೆಲೆಯ ವಸ್ತ್ರಾಭರಣಗಳನ್ನು, ಕುಂಕುಮ ಅರಿಶಿನ ಗಂಧ ಪುಷ್ಪಾದಿ ಮಂಗಳದ್ರವ್ಯಗಳನ್ನೂ, ತನ್ನ ಸ್ವಂತ ಧನಕನಕಾದಿಗಳನ್ನೂ ಬ್ರಾಹ್ಮಣ ಮುತ್ತೈದೆಯರಿಗೆ ದಾನವಿತ್ತು ಹೊರಡಲು ಸಿದ್ಧವಾದಳು. ರಾಮಲಕ್ಷ್ಮಣರೂ ತಮ್ಮ ಧನಕನಕ ವಸ್ತು ವಿಶೇಷಗಳನ್ನೆಲ್ಲ ಭೂಸುರವರ್ಗಕ್ಕೆ ದಾನವಿತ್ತು ಕೈಕೆಯಿತ್ತ ನಾರು ಮಡಿಗಳನ್ನು ಧರಿಸಿ-ತಮ್ಮ ತಾಯಂದಿರಾದ ಕೌಸಲ್ಯಾ ಸುಮಿತ್ರೆಯರಿಗೂ ನಮಸ್ಕರಿಸಿ ಅನುಮತಿಗೊಂಡು ವನವಾಸಕ್ಕೆ ಹೊರಟರು.



**ಅಧ್ಯಾಯ ೪ "ಅಶೋಕವನ ವಾಸ"**

ಪಿತೃವಾಕ್ಯ ಪರಿಪಾಲನೆಗಾಗಿ ವನಕ್ಕೆ ಹೊರಟ ಸೀತಾರಾಮ ಲಕ್ಷ್ಮಣರನ್ನು, ದಶರಥನಮಂತ್ರಿಯಾದ ಸುಮಂತ್ರನು ರಥವನ್ನೇರಿ ಸಿಕೊಂಡು ಹೊರಟನು. ಶ್ರೀರಾಮನು ತನ್ನ ಮಿತ್ರನೂ ಭಕ್ತನೂ ಆದ ಗುಹನ ಸಹಾಯದಿಂದ ಗಂಗಾನದಿಯನ್ನು ದಾಟಿ ಭರದ್ವಾಜಾಶ್ರಮವನ್ನು ಸೇರಿ ಅವರಿಂದ ಉಪಚರಿಸಲ್ಪಟ್ಟು ಮುಂದೆ ಹೊರಟು, ಯಮುನಾನದಿಯನ್ನು ದಾಟಿ ಚಿತ್ರಕೂಟ ಆಶ್ರಮವನ್ನು ಸೇರಿದರು. ಅಲ್ಲಿ ಲಕ್ಷ್ಮಣನು ಶ್ರೀರಾಮನ ಆಜ್ಞೆಯಿಂದ ಒಂದು ಎಲೆಮನೆಯನ್ನು ರಚಿಸಲು ಅದರಲ್ಲಿ ಸೀತಾರಾಮರು ವಾಸವಾಗಿದ್ದರು. ದಿನವೂ ಲಕ್ಷ್ಮಣನು ಅರಣ್ಯದಲ್ಲಿ ತಿರುಗಿ ಗೆಡ್ಡೆ ಗೆಣಸು ಹಣ್ಣು ಹಂಪಲುಗಳನ್ನು ತಂದು ಒಪ್ಪಿಸುವನು. ಅದನ್ನು ಸೀತೆಯು ಶುದ್ಧಿಗೊಳಿಸಿ ಶ್ರೀರಾಮನಿಗೆ ಊಣಲಿಟ್ಟು ಮಿಕ್ಕುದನು ತಾನು ತಿನ್ನುವಳು. ಹೀಗೆ ಶ್ರೀರಾಮನು ಕೇವಲ ಇಪ್ಪತ್ತೈದು ವರ್ಷಗಳ ಪ್ರಾಯಸ್ಥನೂ ಸೀತೆಯು ಹದಿನೆಂಟು ವರ್ಷಗಳ ಯುವತಿಯೂ ಆಗಿದ್ದರೂ, ವಾನಪ್ರಸ್ಥರಂತೆ ವ್ರತನಿಷ್ಠರಾಗಿ ಆ ವನದಲ್ಲಿ ವಾಸಮಾಡಿಕೊಂಡಿದ್ದರು

ಇತ್ತ ಸೀತಾರಾಮ ಲಕ್ಷ್ಮಣರು ತಪಸ್ವಿಗಳಂತೆ ಚಿತ್ರಕೂಟ ಆಶ್ರಮದಲ್ಲಿರುತ್ತಿರಲು ಅತ್ತ ಅಯೋಧ್ಯೆಯಲ್ಲಿ ದಶರಥನು ಪುತ್ರವಿಯೋಗ ದುಃಖವನ್ನು ಸಹಿಸಲಾರದೆ ಪ್ರಾಣಗಳನ್ನು ಬಿಟ್ಟನು. ತರುವಾಯ ಕೈಕೇಯಿಯ ಪುತ್ರನಾದ ಭರತನೂ ಶತ್ರುಘ್ನನೂ ಕೇಕಯರಾಜಧಾನಿಯಿಂದ ಕರೆಯಿಸಲ್ಪಟ್ಟರಾದರೂ, ಅವರು ಆಕೆಯ ದುರಾಲೋಚನೆಗೆ ಎಷ್ಟು ಮಾತ್ರವೂ ಸಮ್ಮತಿಸಲಿಲ್ಲ ಭರತನು ವಂಶಕ್ಕೆ ಹಿರಿಯಮಗನಾದ ಶ್ರೀರಾಮನಲ್ಲದೆ ಸಿಂಹಾಸನಕ್ಕೆ ತಾನು ಎಷ್ಟುಮಾತ್ರವೂ ಬಾಧ್ಯನಲ್ಲವೆಂದೂ, ಆತನನ್ನು ಕರೆತಂದು ಪುನಃ ರಾಜ್ಯಸ್ವೀಕಾರ ಮಾಡುವಂತೆ ಪ್ರಾರ್ಥಿಸುವುದೇ ತನ್ನ ಪ್ರಥಮ ಕಾರ್ಯವೆಂದೂ ಎಣಿಸಿ ಗುರುಗಳಾದ ವಸಿಷ್ಠರನ್ನು ಮುಂದಿಟ್ಟುಕೊಂಡು ತಾಯಿಯರೊಂದಿಗೂ ಸಕಲ ಪರಿವಾರಗಳೊಂದಿಗೂ ಚಿತ್ರಕೂಟಕ್ಕೆ ಬಂದನು. ಅಲ್ಲಿ ಮುನಿವೇಷಧಾರಿಗಳಾಗಿದ್ದ ಶ್ರೀರಾಮಲಕ್ಷ್ಮಣ

ರನ್ನು ಕಂಡು ದುಃಖವನ್ನು ತಡೆಯಲಾರದೆ, ಹೇಗಾದರೂ ಹಿಂದಿರುಗಿ ಅಯೋಧ್ಯೆಗೆ ಬಂದು ರಾಜ್ಯವನ್ನು ಸ್ವೀಕರಿಸಬೇಕೆಂದು ಕಾಲಮೇಲೆ ಬಿದ್ದು ಬಹು ಬಗೆಯಿಂದ ಬೇಡಿಕೊಂಡನು. ವಸಿಷ್ಠರೂ ಜಾಬಾಲಿಮುನಿಯೂ ಹಾಗೆ ಮಾಡತಕ್ಕದ್ದು ಯುಕ್ತವೆಂದು ಹೇಳಿದರಾದರೂ ಶ್ರೀರಾಮನು ತಾನು ತಂದೆಗೆ ಕೊಟ್ಟ ವಾಕ್ಯಕ್ಕೆ ವಿರೋಧವಾಗಿ ನಡೆಯಲಾರೆನೆಂದು ಹೇಳಿಬಿಟ್ಟನು. ಕೊನೆಗೆ ಭರತನು ವಿಧಿಯಿಲ್ಲದೆ ಆತನ ಪಾದುಕೆಗಳನ್ನು ಬೇಡಿ ತೆಗೆದುಕೊಂಡು ಅವುಗಳ ದಾಸನಾಗಿ ರಾಜ್ಯಭಾರಮಾಡಿಕೊಂಡಿರಲು ಸಮ್ಮತಿಸಿ ಎಲ್ಲರೊಂದಿಗೆ ಹೊರಟು ನಂದಿಗ್ರಾಮಕ್ಕೆ ಬಂದನು.

ಭರತನು ಹೊರಟ ತರುವಾಯ ಶ್ರೀರಾಮನು, ಚಿತ್ರಕೂಟವು ಅಯೋಧ್ಯೆಗೆ ಸಮೀಪದಲ್ಲಿರುವುದರಿಂದ ಅಯೋಧ್ಯೆಯ ಜನರು ಆಗಾಗ್ಗೆ ಬಂದು ತೊಂದರೆಕೊಡುತ್ತಾರೆಂದು ಭಾವಿಸಿ, ಮುಂದೆ ಹೊರಟರು. ದಂಡಕಾರಣ್ಯವಾಸಿಗಳಾದ ಅನೇಕಮಂದಿ ಋಷಿಗಳು ಪತ್ನೀ ಸೋದರ ಸಮೇತನಾದ ಶ್ರೀರಾಮನಿಗೆ ಆತಿಥ್ಯಮಾಡಿ ಆದರಿಸಿದರು. ಹೀಗೆ ಆತನು, ಮುಂದೆ ಮುಂದೆ ಪ್ರಯಾಣಮಾಡುತ್ತಿರಲು ಮಾರ್ಗದಲ್ಲಿ ಅತ್ರಿಮಹರ್ಷಿಗಳ ಆಶ್ರಮವು ಸಿಕ್ಕಿತು. ಮಹಾಮಹಿಮರಾದ ಅತ್ರಿಮಹರ್ಷಿಗಳೂ, ಪತಿವ್ರತೆಯೂ ತಪಸ್ವಿನಿಯೂ ಆದ ಅನಸೂಯೆಯೂ, ಅಷ್ಟು ಚಿಕ್ಕ ವಯಸ್ಸಿನಲ್ಲೇ ವನವಾಸಿಗಳಾಗಿ ಬಂದ ಆ ರಾಜಪುತ್ರರನ್ನೂ ಸಾಧ್ವೀ ಸೀತಾದೇವಿಯನ್ನೂ ಕಂಡು ಅವರನ್ನು ಮನಸಾರೆ ಆಶೀರ್ವದಿಸಿದರು. ಮಹಾಪತಿವ್ರತಾ ಶಿರೋಮಣಿಯಾದ ಅನಸೂಯೆಯು ಸೀತೆಗೆ ಅನೇಕ ಪಾತಿವ್ರತ್ಯ ಧರ್ಮ ಸೂಕ್ಷ್ಮಗಳನ್ನು ತಿಳಿಯ ಹೇಳಿದಳು. ಮುನಿಗಳ ಅಪ್ಪಣೆಯನ್ನು ಪಡೆದು ಮುಂದೆ ಹೊರಟ ಅವರಿಗೆ ಆಗಿನಿಂದ ರಾಕ್ಷಸಬಾಧೆಗೆ ಆರಂಭವಾಯಿತು. ವಿರಾಧನೆಂಬ ರಾಕ್ಷಸನು ಸೀತೆಯನ್ನೆತ್ತಿ ಭುಜದ ಮೇಲಿಟ್ಟುಕೊಂಡು ಓಡತೊಡಗಿದನು. ಆಗ ಸೀತೆಯು ಅತ್ಯಂತ ಭಯದಿಂದ ಚೀರಿ ಕಾತರಳಾಗಲು ಶ್ರೀರಾಮಲಕ್ಷ್ಮಣರು ಆಕೆಗೆ ಧೈರ್ಯ ಹೇಳುತ್ತಾ, ಆ ರಾಕ್ಷಸಾಧಮನನ್ನು ಸಂಹರಿಸಿದರು. ತರುವಾಯ ಶರಭಂಗಾಶ್ರಮ ಸುತೀಕ್ಷ್ಣಾಶ್ರಮಗಳನ್ನು ದರ್ಶನಮಾಡಿ ಅಲ್ಲಲ್ಲಿ ಮುನಿಗಳಿಂದ ಸತ್ಕೃತನಾಗಿ ಶ್ರೀರಾಮನು ಸೀತಾ ಲಕ್ಷ್ಮಣರೊಂದಿಗೆ ಅಗಸ್ತ್ಯಾಶ್ರಮಕ್ಕೆ

ಬಂದನು. ಅಲ್ಲಿ ಅಗಸ್ತ್ಯಮಹರ್ಷಿಗಳು ರಾಕ್ಷಸಸಂಹಾರಕ್ಕೆ ಅನುಕೂಲವಾಗಿರಲೆಂದು, ಶ್ರೀರಾಮನಿಗೆ ತಮ್ಮಲ್ಲಿದ್ದ ವೈಷ್ಣವಧನುಸ್ಸನ್ನೂ ಬಾಣಬತ್ತಳಿಕೆಗಳನ್ನೂ ಕೊಟ್ಟು ಜಯಶಾಲಿಯಾಗೆಂದು ಆಶೀರ್ವದಿಸಿದರು. ಆಗಸ್ತ್ಯಾಶ್ರಮದಿಂದ ಹೊರಟ ಶ್ರೀರಾಮಾದಿಗಳು ಪಂಚವಟಿಗೆ ಬಂದರು. ಅಲ್ಲಿಯ ಪ್ರಕೃತಿಸೌಂದರ್ಯವೂ ಕಂದಮೂಲ ಪುಷ್ಪಫಲಾದಿಗಳ ಸಮೃದ್ಧಿಯೂ ಶ್ರೀರಾಮನಿಗೆ ಸಂತೋಷವನ್ನುಂಟುಮಾಡಲು, ಆತನು ಅಲ್ಲೊಂದು ಆಶ್ರಮವನ್ನು ರಚಿಸುವಂತೆ ಲಕ್ಷ್ಮಣನಿಗೆ ಆಜ್ಞಾಪಿಸಿದನು. ಭ್ರಾತೃವತ್ಸಲನಾದ ಲಕ್ಷ್ಮಣನು ಹಾಗೆಯೇ ಎಳೆದಳಿರುಗಳಿಂದ ಒಂದು ಆಶ್ರಮವನ್ನು ಸಿದ್ಧಗೊಳಿಸಲು ಶ್ರೀರಾಮನು ಪತ್ನೀಸಮೇತನಾಗಿ ಅಲ್ಲಿ ಮೂರು ವರ್ಷಕಾಲ ವಾಸಿಸಿದನು.

ಹುಟ್ಟಿದಾಗಿನಿಂದ ಚಕ್ರವರ್ತಿ ಸಾರ್ವಭೌಮನ ಮನೆಯಲ್ಲಿ ಸಾವಿರಾರು ಮಂದಿ ದಾಸದಾಸಿಯರ ಸೇವೆಯಲ್ಲಿ ಬೆಳೆದ ಶ್ರೀರಾಮಾದಿಗಳೂ ಅಂತಃಪುರದಲ್ಲಿ ಬೇಕೆಂದು ಅಪೇಕ್ಷಿಸಿದ ಸಮಸ್ತ ಭೋಗ ಸಾಮಗ್ರಿಗಳನ್ನೂ ತಡೆಬಡೆಯಿಲ್ಲದೆ ಪಡೆದು ಆನಂದಿಸುತ್ತಿದ್ದ ಸೀತಾದೇವಿಯೂ ಅರಣ್ಯವಾಸದಲ್ಲಿ ಆವರೆಗೆ ಹನ್ನೆರಡು ವರ್ಷಗಳನ್ನು ಕಳೆದರು. ಆದರೂ ಅರಣ್ಯವಾಸವು ಅವರಿಗೆ ಬೇಸರು ತೋರಲಿಲ್ಲ. ಶ್ರೀರಾಮನು ಆರ್ತರಕ್ಷಣೆಗಾಗಿ ಮಹರ್ಷಿಗಳಿಗೆ ಉಪದ್ರವಕಾರಿಗಳಾಗಿದ್ದ ದುಷ್ಟ ಮೃಗಗಳನ್ನೂ ಕ್ರೂರ ರಾಕ್ಷಸರನ್ನೂ ಸಂಹರಿಸಿ, ಅವರ ಸಂತೋಷದೊಂದಿಗೆ ತಾನೂ ಸಂತೋಷಗೊಳ್ಳುವನು. ತನ್ನ ಪ್ರಾಣಮನೋಹರನಾದ ಶ್ರೀರಾಮನ ಬಳಿಯಲ್ಲಿದ್ದುದರಿಂದ ಸೀತೆಯೂ ಸದಾ ಸಂತುಷ್ಟಳಾಗಿರುವಳು ಲಕ್ಷ್ಮಣನು ತನ್ನ ಅಣ್ಣ ಅತ್ತಿಗೆಯರ ಸೇವೆಯಲ್ಲೇ ಪರಮಸಂತುಷ್ಟನಾಗಿರುವನು. ಶ್ರೀರಾಮನು ವನಕುಸುಮಗಳನ್ನು ತಂದು ತನ್ನ ಪತ್ನಿಯ ಮುಡಿಯನ್ನು ಅಲಂಕರಿಸುವನು. ಸೀತೆಯು ಮೊಲ್ಲೆ ಮಲ್ಲಿಗೆ ಜಾಜಿಸಂಪಿಗೆ ಮುಂತಾದ ಸುಗಂಧಿತ ಪುಷ್ಪಗಳಿಂದ ದಂಡೆಗಳನ್ನು ಕಟ್ಟಿ ಪ್ರೇಮ ಪೂರ್ಣನೋಟದಿಂದಲೂ-ಹಸನ್ಮುಖದಿಂದಲೂ ತನ್ನ ಪ್ರಿಯನ ಮನಸ್ಸಿಗಾನಂದವನ್ನುಂಟುಮಾಡುತ್ತಾ, ಆ ಪುಷ್ಪಹಾರವನ್ನು ಆತನ ಕಂಠದಲ್ಲಿ ಸಮರ್ಪಿಸುವಳು. ಹೀಗೆ ಅವರು ಧನಕನಕವಸ್ತುವಾಹನ ವಿರಹಿತರಾಗಿ ನಿರ್ಜನಾರಣ್ಯದಲ್ಲೇ

ವಾಸವಾಗಿದ್ದರೂ ಎಂದೂ ವ್ಯಥೆ ಪಟ್ಟುದಿಲ್ಲ. ಕೊರಗಿದುದಿಲ್ಲ. ಕಾತರ ರಾದುದಿಲ್ಲ. ತೃಪ್ತಿಯು ಅವರ ಮನಸ್ಸಿನಲ್ಲಿ ಸಂಪೂರ್ಣ ರೀತಿಯಿಂದ ನೆಲೆಗೊಂಡು ಇದ್ದಿತಾದುದರಿಂದ ಅವರಿಗೆ ಬಾಹ್ಯವಸ್ತುಗಳಿಂದ ಉಂಟಾಗಬೇಕಾದ ಯಾವ ಬಗೆಯ ಆನಂದದ ಅಪೇಕ್ಷೆಯಾಗಲೀ ಇರಲಿಲ್ಲ !

ಪಂಚವಟಿಯಲ್ಲಿ ಸುಖವಾಗಿ ಮೂರು ವರುಷಕಾಲ ವಾಸಿಸಿರಲಾಗಿ ಕೊನೆಯಲ್ಲಿಒಂದು ಆತಂಕವೊದಗಿತು. ಲಂಕೆಯ ಅರಸನಾದ ರಾವಣನ ತಂಗಿ ಶೂರ್ಪನಖಿಯೆಂಬುವಳು ಆಹಾರಾರ್ಥವಾಗಿ ಅಲ್ಲಲ್ಲೆ ಸಂಚರಿಸುತ್ತಾ ಒಂದುದಿನ ಶ್ರೀರಾಮನ ದಿವ್ಯಸುಂದರ ಶರೀರವನ್ನು ನೋಡಿ ಮೋಹಿತಳಾಗಿ ರೂಪದಿಂದ ಬಂದು ತನ್ನನ್ನು ವರಿಸೆಂದು ಯಾಚಿಸಿದಳು. ಅವಳ ಚರ್ಯೆಗಳಿಂದ ಅವಳು ರಾಕ್ಷಸಸ್ತ್ರೀಯೆಂದು ತಿಳಿದ ರಾಮಲಕ್ಷ್ಮಣರು ಸೀತಾ ಸಮ್ಮುಖದಲ್ಲಿ ಕೆಲಹೊತ್ತು ಅವಳೊಂದಿಗೆ ನೀತಿವಿರೋಧವಲ್ಲದ ವಿನೋದ ನಡಿಸಿ, ಕೊನೆಗೆ ಬಲವಂತಪಡಿಸುತ್ತಾ-ತನ್ನನ್ನು ವರಿಸದಿದ್ದರೆ ಸೀತೆಯನ್ನು ತಿಂದುಬಿಡುತ್ತೇನೆಂದು ಬಂದ ಆ ಧೂರ್ತಳನ್ನು ತಕ್ಕಂತೆ ಶಿಕ್ಷಿಸುವಂತೆ ರಾಮನು ಲಕ್ಷ್ಮಣನಿಗೆ ಆಜ್ಞಾಪಿಸಿದನು. ಒಡನೆ ಲಕ್ಷ್ಮಣನು ಅವಳ ಕಿವಿ ಮೂಗುಗಳನ್ನು ಕೊಯಿದು ಆಶ್ರಮದಿಂದ ಆಚೆಗೆ ನೂಕಿಬಿಟ್ಟನು. ಅಲ್ಲಿಂದ ಹೊರಬಿದ್ದ ಆ ರಾಕ್ಷಸಿಯು ಭೂಮ್ಯಂತರಿಕ್ಷಗಳು ಅದುರುವಂತೆ ಕೂಗಿ ಆರ್ಭಟಿಸುತ್ತಾ-ಕಲ್ಮರಗಳು ಕರಗುವಂತೆ ಮೊರೆಯಿಡುತ್ತಾ ಜನಸ್ಥಾನಕ್ಕೆ ಬಂದು ಅಲ್ಲಿದ್ದ ತನ್ನ ಅಣ್ಣಂದಿರಾದ ಖರದೂಷಣ ತ್ರಿಶಿರರೆಂಬ ರಾಕ್ಷಸರಲ್ಲಿ ದೂರಿಕೊಂಡಳು. ಆ ರಾಕ್ಷಸರು ಹದಿನಾಲ್ಕು ಸಹಸ್ರ ಸಂಖ್ಯೆಯಿಂದ ಹೊರಟು ಶ್ರೀರಾಮನನ್ನು ಎದುರಿಸಿದರು. ಆದರೇನು ! ತ್ರಿಲೋಕ ವೀರನಾದ ಶ್ರೀರಾಮನು ಸೀತಾಸಂರಕ್ಷಣೆಗೆ ಲಕ್ಷ್ಮಣನನ್ನು ನಿಯಮಿಸಿ ತಾನೊಬ್ಬನೇ ಧನುರ್ಧಾರಿಯಾಗಿ ವಿಜೃಂಭಿಸಿ ಅಷ್ಟುಮಂದಿ ರಾಕ್ಷಸರನ್ನೂ ಯಮಾಲಯಕ್ಕೆ ನೂಕಿದನು. ಅದನ್ನು ಕಂಡ ಹತಭಾಗ್ಯಳಾದ ಶೂರ್ಪನಖಿಯು ಓಡಿ ಲಂಕೆಯನ್ನು ಸೇರಿ. ತಮ್ಮಣ್ಣನಾದ ರಾಕ್ಷಸರಾಜ ರಾವಣನದಲ್ಲಿ ತನ್ನ ದುರ್ವಿಧಿಯನ್ನು ಮೊರೆಯಿಟ್ಟುಕೊಂಡಳು. ಆ ದುಷ್ಟ ಸ್ತ್ರೀಯ ದುರ್ಬೋಧನೆಗಳಿಂದ ಮರುಳಾದ ರಾವಣನು ತ್ರಿಲೋಕಸುಂದರಿಯೂ ನವಯೌವನಸ್ಥಳೂ ಆದ ಸೀತಾದೇವಿಯನ್ನು ಅಪಹರಿಸಬೇಕೆಂದು

ಯೋಚಿಸಿದವನಾಗಿ ತನ್ನ ಮಾವನಾದ-ತಾಟಕಾಪುತ್ರ ಮಾರೀಚನ ಸಹಾಯದೊಡನೆ ಪುಷ್ಪಕವಿಮಾನಾರೂಢನಾಗಿ ಪಂಚವಟಿಯ ಸಮೀಪಕ್ಕೆ ಬಂದನು.

ಅಲ್ಲಿ ಮಹಾಮಾಯಾವಿಯಾದ ಮಾರೀಚನು ಮಧ್ಯೆಮಧ್ಯೆ ಕಪ್ಪುಚುಕ್ಕೆಗಳಿಂದ ಕೂಡಿ ಸುವರ್ಣದಂತೆ ಮನೋಹರವಾದ ಚರ್ಮದ ಕಾಂತಿಯಿಂದ ಅಪೂರ್ವವಾದ ಒಂದು ಜಿಂಕೆಯ ರೂಪನ್ನು ಧರಿಸಿ ಆಶ್ರಮದಲ್ಲಿ ವಿನೋದಕರ ಸಂಭಾಷಣೆಯಲ್ಲಿ ಕುಳಿತಿದ್ದ ಸೀತಾರಾಮರ ಎದುರಿನಲ್ಲಿ ಸುಳಿದಾಡಲಾರಂಭಿಸಿದನು. ಸೀತೆಯು ತಮ್ಮ ವನವಾಸದ ಹದಿಮೂರು ವರ್ಷಗಳಲ್ಲಿ ಆವರಗೆ ಎಂದೂ ಕಾಣದಿದ್ದ ಆ ವಿಚಿತ್ರ ಮೃಗವನ್ನು ಕಂಡು ಅದನ್ನು ತನಗೆ ತಂದುಕೊಡೆಂದು ತನ್ನ ಪತಿಯನ್ನು ಬಹುಬಗೆಯಿಂದ ಯಾಚಿಸಿದಳು. ಶ್ರೀರಾಮನು ಸೀತೆಯ ಇಷ್ಟಕ್ಕೆ ಒಡಂಬಟ್ಟು ಧನುರ್ಬಾಣಗಳನ್ನು ಧರಿಸಿ ಸಿದ್ಧನಾಗುತ್ತಿರುವಲ್ಲಿ, ಲಕ್ಷ್ಮಣನು ವಿನಯದಿಂದ, ಅದು ರಾಕ್ಷಸರ ಮಾಯೆಯೆಂದೂ ಅದರಿಂದ ಏನಾದರೊಂದು ಬಗೆಯ ಅಪಾಯವುಂಟಾಗದಿರದೆಂದೂ ಸೂಚಿಸಿದನು. ಆದರೂ ಏನೂ ಪ್ರಯೋಜನವಾಗಲಿಲ್ಲ. ಶ್ರೀರಾಮನು—"ಲಕ್ಷ್ಮಣಾ ಹಾಗಿದ್ದರೂ ಮಾಯಾವಿಗಳಾಗಿ ಸಜ್ಜನರನ್ನು ಬಾಧಿಸುತ್ತಿರುವ ಈ ದುರುಳ ರಾಕ್ಷಸನನ್ನು ಸಂಹರಿಸತಕ್ಕುದೂ ನಮ್ಮ ಕರ್ತವ್ಯವೇ ಅಲ್ಲವೆ! ಚಿಂತೆಯಿಲ್ಲ. ಇಲ್ಲಿ ಸೀತೆಗೆ ಅಪಾಯವಾಗದಂತೆ ನೋಡಿಕೊಂಡು ಇರು. ಕ್ಷಣಮಾತ್ರದಲ್ಲಿ ಈ ವಿಚಿತ್ರ ಪ್ರಾಣಿಯನ್ನು ಸಂಹರಿಸಿ ಅದರ ಚರ್ಮವನ್ನು ತಂದು ಸೀತೆಯನ್ನು ಸಂತೋಷಪಡಿಸುವೆನು" ಎಂದು ಅದರ ಬೆನ್ನಟ್ಟಿದನು. ಆ ಮಾಯಾಮೃಗವು ರಾಮನನ್ನು ಸೀತೆಯಬಳಿಯಿಂದ ಅಗಲಿಸಿ ದೂರಕ್ಕೆ ಸೆಳೆದೊಯ್ಯಬೇಕೆಂದು ಕೈಗೆ ಸಿಕ್ಕಂತೆ ಬಹು ಸಮೀಪಕ್ಕೆ ಬರುತ್ತಾ, ಹಿಡಿಯಲು ಕೈನೀಡಿದರೆ ದೂರಕ್ಕೆ ನೆಗೆಯುತ್ತಾ, ರಾಮನನ್ನು ಆಶ್ರಮದಿಂದ ಬಹುದೂರಕ್ಕೆ ಎಳೆದೊಯ್ದಿತು. ಕೊನೆಗೆ ರಾಮನು ಬೇಸತ್ತು ತೀಕ್ಷ್ಣವಾದ ಒಂದು ಬಾಣವನ್ನು ಆ ಮೃಗದ ಎದೆಗೆ ಗುರಿಯಿಟ್ಟು ಬಿಡಲು ಆ ಮೃಗರೂಪದಿಂದ ಇದ್ದ ಮಾರೀಚನು ಗತಪ್ರಾಣನಾಗಿ ಭೂಮಿಯಲ್ಲಿ ಬಿದ್ದನು. ಹಾಗೆ ಬೀಳುವಾಗಲೂ ಆ ನೀಚನು ಆಶ್ರಮದಲ್ಲಿದ್ದ ಸೀತೆಯನ್ನು ವಂಚಿಸಲೆಳಸಿ, ಪ್ರಾಣೋತ್ಕ್ರಮಣಕಾಲದ ವಿಕಾರಸ್ವರದಿಂದ—"ಹಾ ಸೀತೇ ಹಾ ಲಕ್ಷ್ಮಣಾ' ಎಂದು

ರಾಮನ ಧ್ವನಿಯಂತೆ ಒದರಿ ಪ್ರಾಣಬಿಟ್ಟನು. ಮಾರೀಚನ ಆ ಮಾತು ಗಳು ಸೀತೆಯ ಕಿವಿಗೆ ವಿಷವನ್ನು ಸವರಿದ ಬಾಣಗಳಿಂದ ಚುಚ್ಚಿದಂತೆ ಬಹು ತೀಕ್ಷ್ಣವಾಗಿ ಕೇಳಿಸಿದುವು. ಆಗ ಸೀತೆಯು-'ಲಕ್ಷ್ಮಣಾ ಕೇಳಿದೆಯಾ, ನಿಮ್ಮಣ್ಣನು ರಾಕ್ಷಸರ ಮಾಯೆಗೆ ಸಿಕ್ಕಿ ಅಪಾಯದಲ್ಲಿದ್ದಾನೆ. ಸಹಾಯ ಕನಾಗಿ ಹೋಗಿ ನನ್ನಾಪ್ರಾಣವಲ್ಲಭನನ್ನು ಶೀಘ್ರವಾಗಿ ಕರೆದುಕೊಂಡುಬಾ! ಆತನನ್ನು ಅಗಲಿದ ಒಂದೊಂದು ನಿಮಿಷವೂ ನನಗೆ ಒಂದೊಂದು ಯುಗ ದಂತೆ ತಾಪದಾಯಕವಾಗಿದೆ' ಎಂದು ಆತುರಪಡಿಸಿದಳು. ಆ ಮಾತುಗಳನ್ನು ಕೇಳಿದ ಲಕ್ಷ್ಮಣನು—'ಆರ್ಯೇ ಶ್ರೀರಾಮನಿಗೆ ಅಪಾಯವೆಂದ ರೇನು! ತ್ರಿಭುವನೈಕವೀರನಾದ ಶ್ರೀರಾಮನನ್ನು ದೇವದಾನವ ಯಕ್ಷ ರಾಕ್ಷಸರಲ್ಲಿ ಎದುರಿಸಿ ಬದುಕುವನಾರು! ಕ್ಷಣಮಾತ್ರ ಸಮಾಧಾನ ಮಾಡು. ಇದೆಲ್ಲವೂ ರಾಕ್ಷಸರ ಮಾಯೆಯು' ಎಂದು ಎಷ್ಟೋಬಗೆ ಯಲ್ಲಿ ಸಮಾಧಾನ ಹೇಳಿದನಾದರೂ ಪ್ರಯೋಜನವಾಗಲಿಲ್ಲ. ಸೀತೆಯು ಆ ಆಲಸ್ಯವನ್ನು ತಡೆಯಲಾರದೆ-'ಇದೇನು ಲಕ್ಷ್ಮಣಾ, ನಿಮ್ಮಣ್ಣನು ಪ್ರಾಣಾಪಾಯದಲ್ಲಿದ್ದರೂ ನೀನು ಸಹಾಯಕ್ಕೆ ಹೋಗದೆ ಹೀಗೆ ಉದಾ ಸೀನವಾಗಿರುವೆ? ಇದನ್ನು ನೋಡಿದರೆ, ನೀನು ದಾಯಾದಿಯಾಗಿ ರಾಜ್ಯವ ನ್ನಪಹರಿಸಿದ ಆ ಭರತನ ಪ್ರತಿನಿಧಿಯಾಗಿ ಇಲ್ಲಿ ನಮ್ಮಬಳಿ ಇದ್ದು ಸಮಯಾ ನುಸಾರ ರಾಮನನ್ನು ಅಪಾಯಕ್ಕೆ ಸಿಕ್ಕಿಸಿ ನನ್ನನ್ನು ಅಪಹರಿಸಬೇಕೆಂದು ಪ್ರಯತ್ನಿಸಿರುವಂತೆ ತೋರುತ್ತದೆ' ಎಂಬ ಮುಂತಾದ ನಿಷ್ಠುರೋಕ್ತಿ ಗಳನ್ನು ನುಡಿದಳು. ಆ ಮಾತುಗಳನ್ನುಕೇಳಿ ಲಕ್ಷ್ಮಣನು 'ರಾಮ-ರಾಮ' ಎಂದು ಕಿವಿಗಳನ್ನು ಮುಚ್ಚಿಕೊಂಡು-' ತಾಯಿ ನಾನು ಹೇಳಿದ ನ್ಯಾಯ ವಾದ ಮಾತಿಗೆ ಹೀಗೆ ಅಪಾರ್ಥಮಾಡಿಕೊಂಡುದರಿಂದ ಮುಂದೆ ವಿಧಿಯಿ ದ್ದಂತಾಗಲಿ' ಎಂದು ಬಹು ಬೇಸರಗೊಂಡು-ಸೀತೆಯ ಸುತ್ತಲೂ ಏಳು ಗೆರೆಗಳನ್ನೆಳೆದು, ಅವುಗಳನ್ನು ದಾಟಿ ಹೊರಕ್ಕೆ ಬರಕೂಡದೆಂದು ವಿಜ್ಞಾಪಿಸಿ ಕೊಂಡು ರಾಮಾನ್ವೇಷಣಕ್ಕಾಗಿ ಹೊರಟನು.

ಲಕ್ಷ್ಮಣನು ಆಶ್ರಮದಿಂದ ಹೊರಬಿದ್ದ ಉತ್ತರಕ್ಷಣದಲ್ಲೇ ಮುನಿ ವೇಷದಿಂದ - ರಾವಣನು ಸೀತೆಯೊಬ್ಬಳೇ ಇದ್ದ ಆ ಆಶ್ರಮದ ಸಮೀಪಕ್ಕೆ ಬಂದನು. ಮಾಯಾವಿಗಳಾದ ರಾಕ್ಷಸರ ತಂತ್ರವನ್ನರಿಯದ ಸೀತೆಯು

ಆ ಕಪಟಿಯನ್ನು ನಿಜವಾದ ಸನ್ಯಾಸಿಯೆಂದೇ ಭಾವಿಸಿ, ಒಳಕ್ಕೆ ಕರೆದು ಕುಳಿತುಕೊಳ್ಳೆಂದು ಹೇಳಿ ಪೀಠವನ್ನಿತ್ತು ಆತನ ಕುಲಶೀಲಸ್ಥಳ ದೇಶಗಳನ್ನು ಕುರಿತು ವಿಚಾರಿಸಿದಳು. ಒಡನೆ ರಾವಣನು ಸಾವಕಾಶಮಾಡಲು ಇಷ್ಟ ಪಡದೆ,–'ಎಲೆ ರಾಜೀವನೇತ್ರೆ ನಾನು ತ್ರಿಲೋಕಾಧೀಶ್ವರನಾದ ರಾವಣನು–ಲಂಕೆಗೆ ರಾಜನು. ರಾಕ್ಷಸಾಧಿಪನು. ನನ್ನ ಐಶ್ವರ್ಯಾಧಿಕಾರಗಳು ದೇವೇಂದ್ರನನ್ನೂ ನಾಚಿಸುತ್ತಿರುವುವು. ನನ್ನ ಬಳಿ ದೇವ ಗಂಧರ್ವ ಯಕ್ಷ ಅಪ್ಸರಾದಿಗಳ ಸುಂದರಿಯರಿರುವರು. ಆದರೇನು ! ಸೀತೆ–ನೀನು ನನ್ನ ಪಟ್ಟದರಾಣಿಯಾಗು. ಅವರೆಲ್ಲರನ್ನೂ ನಿನ್ನ ವಶಮಾಡುವೆನು. ತುಂಬು ಯೌವನದಲ್ಲಿ ಈ ವನಚಾರಿಯೂ ಕ್ಷುದ್ರದರಿದ್ರನೂ ಆದ ಈ ಮನುಷ್ಯನನ್ನು ಕಟ್ಟಿಕೊಂಡು ನಿನ್ನೀ ಸೌಂದರ್ಯ ಸೌಕುಮಾರ್ಯಾದಿಗಳನ್ನು ಕಾಡಿನಲ್ಲಿನ ಬೆಳದಿಂಗಳಂತೆ ಏಕೆ ವ್ಯರ್ಥಗೊಳಿಸುವೆ? ನನ್ನ ಪಟ್ಟಮಹಿಷಿಯಾಗಿ ಇಷ್ಟವಾದ ಕಾಮೋಪಭೋಗಗಳನ್ನು ಅನುಭವಿಸು ? ' ಎಂದು ಮುಂತಾಗಿ ಹೇಳತೊಡಗಿದನು. ಕರ್ಣ ಕಠೋರವಾದ ಆ ಮಾತುಗಳನ್ನು ಕೇಳಿದ ಸೀತೆಯು, ರಾಮನಾಮಗಳನ್ನುಚ್ಚರಿಸುತ್ತ ಕಿವಿಗಳನ್ನು ಮುಚ್ಚಿಕೊಂಡು–' ಎಲೋ ದುರುಳನೇ ರಾಮಾಶ್ರಮವನ್ನು ಪ್ರವೇಶಿಸಿ ಎಂತಹ ದುಷ್ಟ ಯೋಚನೆ ಮಾಡುತ್ತಿರುವೆ ! ನಾನು ಶ್ರೀರಾಮನ ಭಾರ್ಯೆಯು. ಕ್ಷುದ್ರ ನರಿಯು ಮೃಗೇಂದ್ರನ ಭಾರ್ಯೆಯನ್ನು ಕಾಮಿಸಿದಂತೆ ನೀಚನಾದ ನೀನು ಚತುರ್ದಶ ಭುವನಾಧಿಪನೂ ಲೋಕೇಶನೂ ಆದ ಶ್ರೀರಾಮಪತ್ನಿಯನ್ನು ಯಾಚಿಸುವೆಯೆಂದಮೇಲೆ ನಿನ್ನ ಕೊನೆಗಾಲವು ಸಮೀಪಿಸಿತೆಂದೇ ತಿಳಿ. ಶ್ರೀರಾಮನು ಬರುವ ವೇಳೆಯಾಯಿತು. ನಿನಗೆ ಬದುಕಿರಬೇಕೆಂದಾಸೆಯಿದ್ದರೆ ಈಗಲೇ ಇಲ್ಲಿಂದಹೊರಟು ಓಡಿಹೋಗು. ಹಾಗಿಲ್ಲವಿದ್ದರೆ ಶ್ರೀರಾಮನ ತೀಕ್ಷ್ಣ ಬಾಣಗಳಿಗೆ ತುತ್ತಾಗಿ ಪ್ರಾಣ ಬಿಡಬೇಕಾಗುವುದು ' ಎಂದು ನುಡಿದಳು.

ಸೀತೆಯಾಡಿದ ಆ ಮಾತುಗಳನ್ನು ಕೇಳುತ್ತಿದ್ದಂತೆಯೇ ರಾವಣನು ತನ್ನ ಭಯಂಕರ ರೂಪನ್ನು ಪ್ರಕಟಿಸಿ, ಆಕೆಯನ್ನು ಅಂಜಿಸುತ್ತಾ ಹಾರಿ ಮುಂದಕ್ಕೆ ಬಂದು, ಒಂದು ಕೈಯಿಂದ ಆಕೆಯ ಎರಡು ಪಾದಗಳನ್ನೂ ಮತ್ತೊಂದು ಕೈಯಿಂದ ತುರುಬನ್ನೂ ಹಿಡಿದೆತ್ತಿ ರಥದಲ್ಲಿಟ್ಟುಕೊಂಡು

ಅಂತರಿಕ್ಷಕ್ಕೆ ಹಾರಿಬಿಟ್ಟನು. ಸೀತೆಯು ಅಕಸ್ಮಾತ್ತಾಗಿ ಒದಗಿದ ಆ ಆಪತ್ತಿನಿಂದ ಮುಂಗಾಣದೆ-'ಹಾ ರಾಮಾ-ಹಾ ಲಕ್ಷ್ಮಣಾ, ಈ ದುರುಳ ರಾಕ್ಷಸನು ನನ್ನನ್ನು ಕದ್ದೊಯ್ಯುತ್ತಿರುವನು ನನ್ನನ್ನು ರಕ್ಷಿಸಿರಿ-ರಕ್ಷಿಸಿರಿ" ಎಂದು ಪ್ರಲಾಪಿಸುತ್ತಿದ್ದಳು. ರಾವಣನ ಕೈಯಲ್ಲಿ ಸಿಕ್ಕಿ ಮೊರೆಯಿಡುತ್ತಿದ್ದ ಸೀತಾದೇವಿಯ ಆರ್ತಧ್ವನಿಯು ಅಲ್ಲೇ ಇದ್ದ ಜಟಾಯುವಿಗೆ ಕೇಳಿಸಿತು ಆತನು ರಾವಣನಿಗೆದುರಾಗಿ ಅವನ ಮಾರ್ಗಕ್ಕೆ ಅಡ್ಡಕಟ್ಟಿ ಪರಸ್ತ್ರೀಯನ್ನು-ಅದರಲ್ಲೂ ಶ್ರೀರಾಮಭಾರ್ಯೆಯನ್ನು ಅಪಹರಿಸತಕ್ಕದ್ದು ನ್ಯಾಯವಲ್ಲವೆಂದು ಎಷ್ಟೋ ಬಗೆಯಿಂದ ಅವನಿಗೆ ಹಿತೋಕ್ತಿಗಳನ್ನು ಹೇಳಿದರೂ, ಕೇಳದಿದ್ದ ಆ ದುರುಳನೊಂದಿಗೆ ಯುದ್ಧಕ್ಕೆ ತೊಡಗಿದನು. ರಾವಣನು ಆ ಪಕ್ಷಿರಾಜನ ರೆಕ್ಕೆ ಕೊಕ್ಕುಗಳ ಹೊಡೆತಕ್ಕೆ ಸಿಕ್ಕು ಕೆಲಹೊತ್ತು ತೊಂದರೆಪಟ್ಟನಾದರೂ ಮುಂದೆ ಸ್ವಲ್ಪಹೊತ್ತಿನ ಯುದ್ಧದಲ್ಲೇ ತನ್ನ ಕೈಕತ್ತಿಯಿಂದ ಆ ಜಟಾಯುವಿನ ರೆಕ್ಕೆ ಕಾಲುಗಳನ್ನು ಕತ್ತರಿಸಿ ಮುಂದೆ ಮುಂದೆ ಹೊರಟನು. ಸೀತೆಯು ಕೇವಲ ನಿಸ್ಸಹಾಯಳಾಗಿ ಕಲ್ಲುಮರಗಳನ್ನು ಕುರಿತು ತನ್ನ ದುರ್ವಿಧಿಯನ್ನು ಶ್ರೀರಾಮನಿಗೆ ತಿಳಿಸಿರೆಂದು ಕೂಗುತ್ತಾ, ಸುಂಟರಗಾಳಿಗೆ ಸಿಕ್ಕಿ ಹಾರಿ ಹೋಗುತ್ತಿರುವ ತರಗೆಲೆಯಂತೆ ಆ ರಾವಣನ ನಿರ್ಬಂಧದಲ್ಲಿ ಸಿಕ್ಕಿ ಒಯ್ಯಲ್ಪಡುತ್ತಿದ್ದಳು. ಅಷ್ಟರಲ್ಲೇ ಋಷ್ಯಮೂಕಪರ್ವತಶಿಖರದಲ್ಲಿ ಕೆಲಮಂದಿ ವಾನರರು ಕುಳಿತಿದ್ದುದನ್ನು ಕಂಡು, ತನ್ನನ್ನು ಹುಡುಕುತ್ತಾ ಬಂದರೆ ಶ್ರೀರಾಮಾದಿಗಳಿಗೆ ಗುರುತು ಕೊಡಲೆಂದು, ತನ್ನ ಕೆಲವು ಆಭರಣಗಳನ್ನು ತೆಗೆದು, ಸೀರೆಯ ಸೆರಗನ್ನು ಹರಿದು, ಅದರಲ್ಲಿ ಗಂಟು ಕಟ್ಟಿ ಅವರಲ್ಲಿಗೆ ಎಸೆದಳು.

ರಾವಣನು ಹಿಂದೆ ರಾಮಾದಿಗಳು ತನ್ನನ್ನು ಅಟ್ಟಿ ಬರುವರೋ ಎಂಬ ಶಂಕೆಯಿಂದ ಹಿಂದಿರುಗಿ ಹಿಂದಿರುಗಿ ನೋಡುತ್ತಾ, ವೇಗದಿಂದ ಪ್ರಯಾಣ ಮಾಡಿ ಲಂಕೆಯನ್ನು ಸೇರಿ, ಅಶೋಕವನವೆಂಬ ತನ್ನ ಉದ್ಯಾನದಲ್ಲಿ, ಶಿಂಶುಪಾ ವೃಕ್ಷದಡಿಯಲ್ಲಿ ಸೀತೆಯನ್ನು ಇರಿಸಿ, ಕಾವಲಗೆ ವಿಕಾರರೂಪಿಗಳಾದ ಅನೇಕಮಂದಿ ರಾಕ್ಷಸ ಸ್ತ್ರೀಯರನ್ನು ನಿಯಮಿಸಿದನು. ಸೀತಾ ದೇವಿಯು ಹುಲಿಗಳ ಮಧ್ಯದಲ್ಲಿ ಸಿಕ್ಕಿ ಬಿದ್ದ ಹುಣ್ಣಹುಲ್ಲೆಯಂತೆ ಕಾಮರೂಪಿಗಳೂ ಭಯಂಕರಾಕಾರಿಗಳೂ ಆದ ಆ ರಾಕ್ಷಸ ಸಮೂಹದ ಮಧ್ಯೆ ಸಿಕ್ಕಿ

ಏಕವಸ್ತ್ರಧಾರಿಣಿಯಾಗಿ-ಉತ್ಸಾಹಹೀನಳಾಗಿ ಅಹರ್ನಿಶಿ - ' ಹಾ ರಾಮಾ ರಘುನಾಥಾ, ಪ್ರಾಣೇಶ್ವರಾ ' ಎಂದು ಪ್ರಲಾಪಿಸುತ್ತ ಆ ಅಶೋಕವನದಲ್ಲಿ ಶೋಕಾಕುಲಿತಚಿತ್ತಳಾಗಿ ವಾಸಿಸುತ್ತ ಕಾಲಯಾಪನೆ ಮಾಡುತ್ತಾ ಇದ್ದಳು.



**ಅಧ್ಯಾಯ ೫** **"ಅಯೋಧ್ಯಾವಾಸ"**

ಪ್ರಾಣಪ್ರಿಯನಾದ ಶ್ರೀರಾಮನನ್ನು ಪುನಃ ಕಾಣುವ ಆಶಯವು ಸೀತೆಗೆ ಲೇಶಾಂಶವೂ ಉಳಿಯಲಿಲ್ಲ. ತನ್ನ ದುಃಖಕ್ಕೆ ಕೊನೆಯೇ ತೋರಲಿಲ್ಲ. ಮಹಾ ಪಾಪಿಯಾದ ಆ ರಾವಣನ ನಿರ್ಬಂಧದಲ್ಲಿ ಸಿಲುಕಿದ ಆ ಸಾಧ್ವಿಯು ತನ್ನ ಸ್ವಜನಗಳ ಮತ್ತು ಮನುಷ್ಯಲೋಕದ ಸಂಬಂಧದಿಂದಲೇ ಸಂಪೂರ್ಣವಾಗಿ ಬೇರ್ಪಡಿಸಲ್ಪಟ್ಟಂತಾದಳು. ಅಂತ್ಯಪಾರಗಳಿಲ್ಲದ ಶೋಕಸಾಗರದಲ್ಲಿ ಮುಳುಗಿದ ಆಕೆಯು-' ಅಕ್ಕಟಾ ನನಗಿನ್ನೇನುಗತಿ ! ನನ್ನ ಪ್ರಾಣನಾಥನ ಪಾದಕಮಲಗಳನ್ನು ಈ ಜನ್ಮದಲ್ಲಿ ಪುನಃ ದರ್ಶಿಸುವ ಭಾಗ್ಯವು ಈ ಅದೃಷ್ಟಹೀನಳಿಗೆ ಪ್ರಾಪ್ತವಾದೀತೇ ! ಅಯ್ಯೋ ಆ ಜಿಂಕೆಯಲ್ಲಿ ನನ್ನ ಭಾಗದ ಮೃತ್ಯುವಾಗಿ ನನ್ನ ಕಣ್ಣಿಗೆ ಬಿದ್ದಿತು ! ನಾನೇಕೆ ಅದನ್ನು ಅಪೇಕ್ಷಿಸಿದೆನು ? ಅಪೇಕ್ಷಿಸಿದರೂ ಹಲುಬಿಕೊಂಡು ಸುಮ್ಮನಾಗದೆ, ಶ್ರೀರಾಮನನ್ನು, ಅದನ್ನು ತಂದುಕೊಡೆಂದು ನಿರ್ಬಂಧಿಸಿದೆನೇಕೆ ! ಹಾಗೆ ಬಲವಂತಪಡಿಸಿ ರಾಮನನ್ನು ಕಳುಹಿಸಿದರೂ - ನನ್ನ ರಕ್ಷಣೆಗಾಗಿ ನಿಯಮಿತನಾಗಿದ್ದ ಆಪದ್ಬಾಂಧವನಾದ ಲಕ್ಷ್ಮಣನನ್ನು ನಿಷ್ಠುರೋಕ್ತಿಗಳನ್ನಾಡಿ ಅಟ್ಟುವಂತಹ ದುರ್ಬುದ್ಧಿಯಾದರೂ ನನಗೇಕೆ ಪ್ರಾಪ್ತವಾಯಿತು? ಹಾ ನನಗಿನ್ನೇನುಗತಿ ! ಮಹಾ ಬಲಾಢ್ಯನೂ ಲೋಕೈಕವೀರನೂ ಖರಾದಿ ಹದಿನಾಲ್ಕು ಸಹಸ್ರ ರಾಕ್ಷಸರನ್ನೂ ಮೂರುಗಳಿಗೆಯ ಕಾಲದೊಳಗಾಗಿ ಯಮಾಲಯಕ್ಕೆ ನೂಕಿದ ಅದ್ವಿತೀಯ ಪರಾಕ್ರಮಶಾಲಿಯೂ ಆದ ಶ್ರೀರಾಮನ ಬಾಹುಗಳ ರಕ್ಷಣೆಯಿಂದ ಚ್ಯುತಳಾದ ನನಗಿನ್ನು ಶಾಶ್ವತ ಪರಾಭವವಲ್ಲದೆ ಮತ್ತೇನು ಲಭಿಸೀತು ! ಹಾ ರಾಮಾ, ಚಂದ್ರಬಿಂಬಕ್ಕೆ ಸಮಾನವಾದ ನಿನ್ನ ತೇಜಸ್ವಿಮುಖವನ್ನು ಈ ಜನ್ಮದಲ್ಲಿ ಪುನಃ ಕಾಂಬೆನೇ ! ಸುದೃಢವೂ

ಮಾಂಸುಲವೂ ಆದ ನಿನ್ನ ಆಜಾನುಬಾಹುಗಳಿಂದ ಆಲಂಗಿಸಲ್ಪಡುವ ಭಾಗ್ಯವು ನನಗೆ ಈ ಜನ್ಮದಲ್ಲೇ ಪುನಃ ಲಭಿಸುವುದೇ! ಮೇರುಪರ್ವತದಂತೆ ಉನ್ನತವೂ ವಜ್ರಪಂಜರದಂತೆ ಕಠಿಣವೂ ಆದ ನಿನ್ನ ವಿಶಾಲ ವಕ್ಷಸ್ಥಲವನ್ನು ಅಪ್ಪಿಕೊಂಡು ಆನಂದಿಸುವ ಭಾಗ್ಯವು ಈ ನಿರ್ಭಾಗ್ಯಳಿಗೆ ಇನ್ನು ಲಭಿಸುವುದೆಂದರೇನು! ಛೆ ನನ್ನ ಜನ್ಮವು ಬಹು ಹೀನವಾದದು! ನನ್ನ ಬುದ್ಧಿಯೇ ನನಗೆ ಈ ವಿಧಿಯನ್ನು ತಂದಿಟ್ಟಿತು. ಸಕಲ ಸ್ವಜನ ಸಂಸರ್ಗದಿಂದಲೂ ಕತ್ತರಿಸಲ್ಪಟ್ಟ ನನಗೆ ಇನ್ನು ಸ್ವಜನ ದರ್ಶನವೆಂದರೇನು! ಅಕ್ಕಟಾ-ಹಾ, ಮುಂದೇನುಗತಿ!' ಎಂದು ಹಲವು ಬಗೆಯಲ್ಲಿ ಪ್ರಲಾಪಿಸುತ್ತಿರುವಳು. ಆಕೆಯ ದುಃಖ ಸಂಕಟಗಳು ಅಷ್ಟರಿಂದಲೇ ಕೊನೆಯಾಗಲಿಲ್ಲ! ದುರುಳ ರಾವಣನು ಮಹಾ ಕಾಮಿಯಾದುದರಿಂದ, ತನಗೆ ವಶರಾದ ದೇವ ಯಕ್ಷ ಗಂಧರ್ವ ನಾಗಕನ್ನಿಕೆಯರು ಸಹಸ್ರಾರು ಸಂಖ್ಯೆಯಿಂದ ಅಂತಃಪುರದಲ್ಲಿದ್ದು ಅವನ ದುಷ್ಟ ಕಾಮವಾಸನೆಗೆ ತಮ್ಮ ದೇಹಗಳನ್ನು ತೆತ್ತಿದ್ದರೂ, ತೃಪ್ತನಾಗದೆ ಆಗಾಗ ಸೀತೆಯ ಜ್ಞಾಪಕ ಬಂದೊಡನೆಯೇ ರಾತ್ರಿಯೆನ್ನದೆ ಹಗಲೆನ್ನದೆ ಪ್ರಾತಃಕಾಲವೆನ್ನದೆ ಮುಸ್ಸಂಜೆಯೆನ್ನದೆ ನೇರವಾಗಿ ಅಶೋಕವನಕ್ಕೆ ಬಂದುಬಿಡುವನು. ಸೀತೆಯ ಎದುರಿಗೆ ತನ್ನ ವಿಕ್ರಮವನ್ನೆಲ್ಲಾ ಬಣ್ಣಿಸಿ ಹೇಳಿ ತನ್ನನ್ನು ವರಿಸೆಂದು ಬಲವಂತ ಪಡಿಸುವನು. ಇಂದ್ರಾದಿ ದೇವತೆಗಳನ್ನೂ ಸದೆಬಡೆದ ತನ್ನ ಪರಾಕ್ರಮಕ್ಕೆ ಮೂರು ಲೋಕದಲ್ಲೂ ಯಾರೂ ಸರಿಬಾರರೆಂದು ಹೆಮ್ಮೆ ಕೊಚ್ಚಿಕೊಳ್ಳುವನು. ತ್ರಿಲೋಕೇಶ್ವರನಾದ ತನ್ನ ವಶಳಾಗಿರುವ ಆಕೆಯನ್ನು ಪುನಃ ಬಿಡಿಸಿಕೊಂಡು ಹೋಗುವುದು ಮುಕ್ಕಣ್ಣನಾದ ರುದ್ರನಿಂದಲೂ ಆಗದ ಕಾರ್ಯವೆಂದು ಸೀತೆಯನ್ನು ನಿರಾಶೆಗೊಳಿಸಲೆತ್ನಿಸುವನು. ಅಷ್ಟುಮಾತ್ರವಲ್ಲ-ಆಕೆಯ ಎದುರಿಗೆ ತನ್ನ ಅಪರಿಮಿತ ಐಶ್ವರ್ಯದ ಪ್ರಮಾಣವನ್ನು ವರ್ಣಿಸುವನು. ಸೀತೆಯು ತನ್ನ ರಾಣಿಯಾದರೆ, ತನ್ನ ಸಮಸ್ತ ವೈಭವಗಳೊಂದಿಗೆ ಸದಾ ಆಕೆಯ ಸೇವಾತತ್ಪರನಾಗಿರುವೆನೆಂದು ಅಂಗಲಾಚಿಕೊಳ್ಳುವನು -' ಸೀತೆ ಇಂದ್ರಾದಿ ಅಷ್ಟದಿಕ್ಪಾಲಕರನ್ನು ಸದೆಬಡಿದು ತ್ರಿಲೋಕಗಳ ಏಕಾಧಿಪತ್ಯವನ್ನು ಅಂಗೈಯಲ್ಲಿಟ್ಟುಕೊಂಡಿರುವ ನನ್ನಬಳಿಯಿಂದ ನಿನ್ನನ್ನು ಪುನಃ ಬಿಡುಗಡೆಮಾಡುವುದು ಹರಿ ಹರ ಬ್ರಹ್ಮಾದಿಗಳಿಂದಲಾದರೂ ಸಾಧ್ಯವಾಗ

ಬಹುದೆಂದು ಎಣಿಸಿರುವೆಯಾ? ಬಿಡು. ಇನ್ನು ಆ ಹುಲುರಾಮನ ಆಸೆಯನ್ನು ಬಿಡು. ನನ್ನ ಪಟ್ಟಮಹಿಷಿಯಾಗು! ಏಕೆ ನಿನ್ನೀ ಯೌವನವನ್ನು ಕಾಡಿನಲ್ಲಿನ ಬೆಳದಿಂಗಳಂತೆ ವ್ಯರ್ಥಗೊಳಿಸುವೆ!' ಎಂದು ಮುಂತಾಗಿ ಪೀಡಿಸುವನು.

ತೀಕ್ಷ್ಣವಾದ ಸಬಳಗಳಂತೆ ಕರ್ಣಕಠೋರವಾಗಿದ್ದ ಆ ಮಾತುಗಳನ್ನು ಕೇಳಿದ ಸೀತೆಯು ಕಣ್ಣಿನಲ್ಲಿ ಸಾರೋಧ್ಧಾರವಾಗಿ ನೀರು ಸುರಿಯುತ್ತಿರಲು ಮೇಲೆ ಮೇಲೆ ದುಃಖವು ಉಕ್ಕಿಬರುತ್ತಿರಲು-ಒಂದಿಗೇ ವೀರಪತ್ನಿಯಾದುದರಿಂದ ರೋಷವನ್ನು ತಡೆದುಕೊಳ್ಳಲಾರದೆ, ಆ ದುರುಳನ ಸಂಗಡ ಪ್ರತ್ಯಕ್ಷವಾಗಿ ಮಾತನಾಡಲು ಹೇಸಿ-ಮಧ್ಯದಲ್ಲೊಂದು ತೃಣವನ್ನುಹಾಕಿ ಅದರೊಂದಿಗೆ ಮಾತನಾಡುವವಳಂತೆ ನಟಿಸಿ ರಾವಣನನ್ನು ತುಚ್ಛಭಾವದಿಂದ ಕಂಡು ಹೇಳತೊಡಗುವಳು.-' ಎಲೋ ನೀಚಾ ನನ್ನಪತಿಯು ಎದುರಿಗಿಲ್ಲದಿದ್ದಾಗ, ಕಳ್ಳತನದಿಂದ ಅಬಲೆಯಾದ ನನ್ನನ್ನು ಅಪಹರಿಸಿಕೊಂಡು ಬಂದ ನಿನ್ನ ಪರಾಕ್ರಮವನ್ನು ಏನೆಂದು ಬೊಗಳಿಕೊಳ್ಳುತ್ತಿರುವೆ. ಪರಾಕ್ರಮ ಧುರ್ಯನಾದ ನನ್ನ ರಮಣನು ಎದುರಿಗಿದ್ದಾಗ ನೀನು ನನ್ನನ್ನು ಅಪಹರಿಸುವುದು ಅಂತಿರಲಿ- ಸ್ಪರ್ಶಮಾಡಿಯಾದರೂ ಜೀವಿಸಿದ್ದರೆ ನಿನ್ನ ಯೋಗ್ಯತೆಯು ತಿಳಿಯುತಿತ್ತು. ಯಾರೂ ಇಲ್ಲದಿದ್ದ ಸಮಯದಲ್ಲಿ-ಪವಿತ್ರವಾದ ಹೋಮಶೇಷವನ್ನು ನಾಯಿಯು ಕದ್ದೊಯ್ದು ತನ್ನ ಪರಾಕ್ರಮಕ್ಕಾಗಿ ತಾನೇ ಹೆಚ್ಚಳಪಡುತ್ತಿರುವಂತೆ, ನನ್ನ ಪತಿಯಾದ ಶ್ರೀರಾಮನ ಮುಂದೆ ನಿಲ್ಲಲು ಸಹ ಹೆದರಿದ ಹೇಡಿಯಾದ ನೀನು ನನ್ನನ್ನು ಕದ್ದುತಂದು ಈಗ ಅಬಲೆಯಾದ ನನ್ನೆದುರಿನಲ್ಲಿ ನಿನ್ನ ಪರಾಕ್ರಮವನ್ನು ಕೊಚ್ಚಿಕೊಳ್ಳುತ್ತಿರುವೆಯಲ್ಲಾ! ನಿನಗೆ ನಾಚಿಕೆಯಿಲ್ಲವೆ! ಅದಂತಿರಲಿ. ನಿನ್ನ ಕುಟಿಲ ತಂತ್ರವನ್ನು ಸಹಿಸಿ ನನ್ನ ಪತಿಯು ಸುಮ್ಮನಿದ್ದುಬಿಡುವನೆಂದು ತಿಳಿದಿರಬೇಡ. ರಾಮಬಾಣಗಳು ನೀನು ಪಾತಾಳವನ್ನು ಹೊಕ್ಕರೂ-ಸ್ವರ್ಗಲೋಕದಲ್ಲಿ ಅಡಗಿದರೂ ಬ್ರಹ್ಮ ದೇವೇಂದ್ರಾದಿಗಳ ಮೊರೆಹೊಕ್ಕರೂ ಬಿಡದೆ ನಿನ್ನ ಕರುಳುಗಳನ್ನು ಬಗೆದು ತರುವವು. ನಿನ್ನ ಪತ್ನೀ ಪುತ್ರರೊಂದಿಗೂ ಬಂಧುವರ್ಗದೊಂದಿಗೂ ಇನ್ನೂ ಕೆಲದಿನಗಳು ಬದುಕಿರಬೇಕೆಂದು ಅಪೇಕ್ಷಿಸಿದರೆ ಈಗಲೆ ನನ್ನನ್ನು ಕರೆದೊಯ್ದು, ಅಪರಾಧವಾಯಿತೆಂದು ಕ್ಷಮೆ

ಬೇಡಿ, ನನ್ನ ಪತಿಯು ಸನ್ನಿಧಿಯಲ್ಲಿ ಒಪ್ಪಿಸಿ ಶರಣಾಗತನಾಗು-ಹಾಗಿಲ್ಲದಿದ್ದರೆ ಇಂದಲ್ಲ ನಾಳೆಯಾದರೂ ಈ ಲಂಕಾನಗರಿಯು ಶ್ರೀರಾಮನ ಬಾಣಗಳಿಂದ ಆಕ್ರಮಿಸಲ್ಪಟ್ಟು ರಾಕ್ಷಸರು ನಾಶವಾಗುವುದು ತಪ್ಪದು.' ಎಂದು ನುಡಿದಳು. ಅಬಲೆಯೊಬ್ಬಳಿಂದ ಅಷ್ಟು ನಿಷ್ಠುರ ವಾಕ್ಯಗಳನ್ನು ಕೇಳುತ್ತಿದ್ದರೂ ಕಾಮಮೋಹಿತನಾದ ರಾವಣನು ಕೋಪಗೊಳ್ಳದೆ, ಸುತ್ತಲೂ ಇದ್ದ ರಕ್ಕಸಿಯರಿಗೆ ಅವಳಿಗೆ ತನ್ನಲ್ಲಿ ಮೋಹವುಂಟಾಗುವಂತೆ ಬೋಧಿಸಿ ಪ್ರೇರಿಸಿರೆಂದು ಆಜ್ಞಾಪಿಸಿ ತನ್ನ ಅರಮನೆಗೆ ಹೊರಟುಹೋದನು.

ಅತ್ತ ಮಾಯಾಮೃಗದ ಬೆನ್ನಟ್ಟಿ ನಡೆದ ಶ್ರೀರಾಮನು ಅದು ಮೃತವಾಗುವ ವೇಳೆಯಲ್ಲಿ ಕೂಗಿದ ಆರ್ತಧ್ವನಿಯಿಂದ ಏನು ಪ್ರಮಾದ ಸಂಭವಿಸುವುದೋ ಎಂದು ಗಾಬರಿಪಟ್ಟು ಆಶ್ರಮಾಭಿಮುಖವಾಗಿ ಶೀಘ್ರವಾಗಿ ಬರುತ್ತಿದ್ದನು. ಮಾರ್ಗದಲ್ಲೇ ಲಕ್ಷ್ಮಣನು ಸಿಕ್ಕಿದುದು ಆತನ ಸಂದೇಹವನ್ನು ಬಲಪಡಿಸಿತು. ಆಶ್ರಮಕ್ಕೆ ಬಂದುನೋಡಲು ಸೀತೆಯು ಕಾಣಲಿಲ್ಲ ಇಬ್ಬರೂ ಅಲ್ಲಿಲ್ಲಿ ಹುಡುಕಿ ನೋಡಿದರು. ಮರಗಿಡಗಳು ಪೊದರುಗಳು ಗುಹೆಗಳು ಮುಂತಾದ ಎಲ್ಲಾ ಕಡೆಯಲ್ಲೂ ನೋಡಿದರು. ಎಲ್ಲೂ ಸೀತೆಯಿಲ್ಲ. ಸ್ವಲ್ಪದೂರದಲ್ಲೇ ಗಾಯಪಟ್ಟು ಬಿದ್ದಿದ್ದ ಜಟಾಯುವಿನಿಂದ ಲಂಕೆಯರಾಜನಾದ ರಾವಣನು ಆಕೆಯನ್ನು ಅಪಹರಿಸಿಕೊಂಡೊಯ್ದ ವರ್ತಮಾನ ತಿಳಿಯಿತು. ರಾಮನು ಮಹಾ ವ್ಯಸನಾಕ್ರಾಂತನಾದನು. ಪರಿಪರಿಯಿಂದ ಮರುಗಿದನು. ಹಲುಬಿಕೊಂಡನು. ತರುವಾಯ ಆಪತ್ತಿನಲ್ಲಿ ಧೈರ್ಯಗೆಡಬಾರದೆಂಬ ನೀತಿಯನ್ನು ಅವಲಂಬಿಸಿ ತನ್ನ ಪ್ರಿಯಪತ್ನಿಯನ್ನು ಹುಡುಕಿಕೊಂಡು ಲಕ್ಷ್ಮಣಸಹಿತನಾಗಿ ದಕ್ಷಿಣಾಭಿಮುಖವಾಗಿ ಹೊರಟನು. ಮಾರ್ಗದಲ್ಲಿ ಕಬಂಧನೆಂಬ ರಾಕ್ಷಸನನ್ನು ಕೊಂದು, ಶಬರಿಯೆಂಬ ಭಕ್ತಳ ಪೂಜೆಯನ್ನೂ ಆತಿಥ್ಯವನ್ನೂ ಸ್ವೀಕರಿಸಿ ಆಕೆಯಿಂದ ಕಿಷ್ಕಿಂಧೆಯಲ್ಲಿ ವಾಸವಾಗಿದ್ದ ಸುಗ್ರೀವಾದಿಗಳ ವೃತ್ತಾಂತವನ್ನು ಕೇಳಿ, ಆತನನ್ನು ಕಾಣಬೇಕೆಂಬ ಉದ್ದೇಶದಿಂದ ಸೋದರರಿಬ್ಬರೂ ಆ ಕಡೆಗೆ ಪ್ರಯಾಣ ಮಾಡಿದರು.

ಋಷ್ಯಮೂಕಪರ್ವತ ಪ್ರಾಂತ್ಯದಲ್ಲಿ ಸಂಚರಿಸುತ್ತಿದ್ದ ರಾಮ ಲಕ್ಷ್ಮಣರನ್ನು ಸುಗ್ರೀವನು ಕಂಡು ಅವರನ್ನು ಕರೆತರುವುದಕ್ಕಾಗಿ ತನ್ನ ಮಂತ್ರಿ

ಯಾದ ಆಂಜನೇಯನನ್ನು ಕಳುಹಿಸಿದನು. ಆತನೊಂದಿಗೆ ನಡೆದ ಶ್ರೀರಾಮಲಕ್ಷ್ಮಣರಿಗೂ ಕಪಿರಾಜನಾದ ಸುಗ್ರೀವನಿಗೂ ಅಗ್ನಿಸಾಕ್ಷಿಯಾಗಿ ಸ್ನೇಹವಾಯಿತು. ಸುಗ್ರೀವನ ವೈರಿಯಾಗಿ ಅವನ ಪತ್ನಿಯನ್ನೂ ರಾಜ್ಯವನ್ನೂ ಅಪಹರಿಸಿದ್ದ ವಾಲಿಯನ್ನು ಸಂಹರಿಸಿ ರಾಮನು ಕಿಷ್ಕಿಂಧೆಯರಾಜ್ಯಕ್ಕೆ ಆತನಿಗೆ ಪಟ್ಟಾಭಿಷೇಕ ಮಾಡಿದನು. ಸುಗ್ರೀವನು ಶ್ರೀರಾಮಪತ್ನಿಯನ್ನು ಎಲ್ಲಿದ್ದರೂ ಹುಡುಕಿಸಿ ವರ್ತಮಾನವನ್ನು ತರಿಸುತ್ತೇನೆಂದು ಚತುರ್ದಿಕ್ಕುಗಳಿಗೂ ವಾಯುವೇಗ ಮನೋವೇಗಗಳನ್ನುಳ್ಳ ವಾನರವೀರರನ್ನು ಕಳುಹಿಸಿದನು.-ಅವರಲ್ಲಿ ದಕ್ಷಿಣದಿಕ್ಕನ್ನನುಸರಿಸಿ ಹೊರಟ ಆಂಜನೇಯ ಅಂಗದ ಜಾಂಬವಾದಿಗಳು ಅನೇಕಸ್ಥಳಗಳಲ್ಲಿ ಹುಡುಕಿ ಎಲ್ಲೂ ಸೀತೆಯನ್ನು ಕಾಣದೆ ಸಮುದ್ರದಡವನ್ನು ಸೇರಿದರು. ಅಲ್ಲಿ ಜಟಾಯುವಿನ ಅಣ್ಣನಾದ ಸಂಪಾತಿಯೆಂಬ ಗೃಧ್ರರಾಜನಿಂದ ಸೀತಾದೇವಿಯು ಲಂಕೆಯಲ್ಲಿ ರಾವಣನ ಉಪವನದಲ್ಲಿದ್ದಾಳೆಂಬ ವಾರ್ತೆಯು ತಿಳಿಯಿತು. ಒಡನೆ ಆಂಜನೇಯನು ಆ ರಾಮಕಾರ್ಯವನ್ನು ನೆರವೇರಿಸುವುದರಲ್ಲಿ ದೃಢಪ್ರತಿಜ್ಞನಾಗಿ ನೂರುಯೋಜನ ಸಮುದ್ರವನ್ನು ದಾಟಿ, ಲಂಕೆಯ ಸಮೀಪಕ್ಕೆ ಬಂದನು. ಲಂಕೆಯಲ್ಲಿನ ರಾಕ್ಷಸರ ಮನೆಗಳನ್ನೆಲ್ಲಾ ಒಂದುಳಿಯದಂತೆ ಹುಡುಕಿ ನೋಡಿದುದಾಯಿತು. ರಾವಣನ ಅಂತಃಪುರದ ಎಲ್ಲಾ ಪ್ರದೇಶಗಳನ್ನೂ ಸೂಕ್ಷ್ಮ ರೂಪಿನಿಂದ ಹುಡುಕಿದನು. ಸೀತಾದೇವಿಯು ದೃಷ್ಟಿಗೋಚರಳಾಗಲಿಲ್ಲ. ಕೊನೆಗೆ ಬೇಸತ್ತು, ಸೀತೆಯು ಸಿಕ್ಕದಿದ್ದರೆ ಆ ಲಂಕೆಯನ್ನೇ ಬಾಲದಿಂದ ಕಿತ್ತುಕೊಂಡೊಯ್ಯಬೇಕೆಂದು ಯೋಚಿಸಿಕೊಂಡಿರುವಷ್ಟರಲ್ಲಿ ಚಂದ್ರೋದಯವಾಗಲು, ಸಮೀಪದಲ್ಲಿದ್ದ ಅಶೋಕವನವು ದೃಷ್ಟಿಗೋಚರವಾಯಿತು. ಒಡನೆ ಅಲ್ಲಿಗೆ ನೆಗೆದು-ಅಲ್ಲಿ ಒಂದು ಮರದಕೆಳಗೆ 'ರಾಮ ರಾಮಾ' ಎಂದು ಜಪಿಸುತ್ತಾ ಮಾಸಿದ ಚಿಂದಿಬಟ್ಟೆಯನ್ನುಟ್ಟು ನಿರಾಶಳಾದವಳಂತೆ ಭೂಮ್ಯಂತರಿಕ್ಷಗಳನ್ನು ನೋಡುತ್ತಾ ಮಹಾಸಂಕಟಕ್ಕೆ ಗುರಿಯಾಗಿದ್ದ ಭೂಪುತ್ರಿಯನ್ನು ಕಂಡನು. ಆಗ ಆಕೆಯ ಸ್ಥಿತಿಯು ಬಹು ಪರಿತಾಪಕರವಾಗಿದ್ದಿತು. ಅಷ್ಟರಲ್ಲೇ- ಆ ಮಧ್ಯರಾತ್ರಿಯಲ್ಲೇ ರಾವಣನು ಪುನಃ ಬಂದು, ಮೇಲ್ಕಂಡಂತೆ ತನ್ನ ವಶಳಾಗೆಂದು ಆ ಸಾಧ್ವಿಯನ್ನು ಪರಿಪರಿಯಿಂದ ಪೀಡಿಸಿದನು. ಸೀತೆಯು ಅವನ ನೀಚಕಾರ್ಯಗಳನ್ನು ಹಿಂದಿ

ನಂತೆಯೇ ಬಹು ತುಚ್ಛರೀತಿಯಿಂದ ನಿಂದಿಸಿ ನಿರಾಕರಿಸಿದಳು. ರಾವಣನು ಇನ್ನು ಎರಡುತಿಂಗಳೊಳಗಾಗಿ ತನಗೆ ವಶಳಾಗದಿದ್ದರೆ ಅವಳನ್ನು ಭೂತ ಬೇತಾಳಗಳಿಗೆ ಬಲಿಕೊಡುವೆನೆಂದು ತಿಳಿಸಿ ಹೊರಟುಹೋದನು. ತರು ವಾಯ ಆವರೆಗೆ ಮರದಮೇಲಿದ್ದ ಹನುಮಂತನು ಕೆಳಕ್ಕಿಳಿದು ಬಂದು, ತನ್ನ ಪರಿಚಯುವನ್ನು ಹೇಳಿಕೊಂಡು, ಬಹುಪರಿಯಿಂದ ಸಂದೇಹಿಸಿದ ಆಕೆಗೆ ತಾನು ರಾಮದೂತನೆಂಬ ನಂಬಿಕೆಯನ್ನುಂಟುಮಾಡಿ ಶ್ರೀರಾಮನು ಕೊಟ್ಟಿದ್ದ ಮುದ್ರೆಯುಂಗುರವನ್ನು ಒಪ್ಪಿಸಿದನು. ಮತ್ತು-'ತಾಯೇ ಇಷ್ಟು ತೊಂದರೆಯೇಕೆ. ನನ್ನ ಭುಜವನ್ನೇರಿ ಬಂದುಬಿಡುವೆಯಾದರೆ ಬಹು ಶೀಘ್ರಕಾಲದಲ್ಲೇ ನಿನ್ನ ಪತಿಯುಸಮೀಪದಲ್ಲಿ ಒಯ್ದು-ಬಿಡುವೆನು.' ಎಂದನು. ಆ ಮಾತನ್ನು ಕೇಳಿದ ಆ ಮಹಾತ್ಮಳು-'ಹನುಮಂತಾ ಎಂತಹ ಮಾತನಾಡುವೆ! ನಾನು ಎಂತಹ ಕಷ್ಟಕ್ಕೆ ಒಳಗಾಗಿದ್ದರೂ ಪರಪುರುಷ ನಾದ ನಿನ್ನೊಡನೆ ಬರುವುದೆಂದರೇನು! ಆದರೆ ರಾವಣನೊಂದಿಗೆ ಹೇಗೆ ಬಂದೆಯೆನ್ನುವೆಯೊ! ಕೇಳು. ಆಗ ನಾನು ಕೇವಲ ಪರಾಧೀನಳಾ ಗಿದ್ದೆನು. ಆ ದುರುಳನು ಬಲವಂತದಿಂದ ನನ್ನನ್ನು ಎಳೆದೊಯ್ಯುತ್ತಿದ್ದರೆ, ಕೇವಲ ದುರ್ಬಲಳಾಗಿದ್ದ ನಾನು ಏನುಮಾಡಲು ಸಾಧ್ಯವಿದ್ದೀತು! ಆ ಕಾರ ಣದಿಂದ ಈಗ ಮನಃಪೂರ್ವಕವಾಗಿ ಹಾಗೆ ಬರತಕ್ಕುದು ವೀರಪತ್ನಿಯಾದ ನನಗೆ ಯುಕ್ತವಲ್ಲ! ಅಲ್ಲದೆ ಅದು ಲೋಕೈಕವೀರನಾದ ಶ್ರೀರಾಮನ ಗೌರ ವಕ್ಕೂ ತಕ್ಕುದಲ್ಲ. ಶ್ರೀರಾಮನೇ ಬಂದು, ತನ್ನ ಪ್ರಚಂಡ ಕೋದಂಡ ನಿರ್ಮುಕ್ತವಾದ ಬಾಣ ಪರಂಪರೆಗಳಿಂದ ಈ ವೈರಿ ತಂಡಗಳನ್ನು ನೆಲಕ್ಕು ರಿಳಿಸಿ, ನನ್ನನ್ನು ಕೊಂಡೊಯ್ಯುವುದೇ ತಕ್ಕುದು. ದುರುಳ ರಾವಣನು ನನ್ನ ಪ್ರಾಣಕ್ಕೆ ಎರಡು ತಿಂಗಳು ಮಾತ್ರ ಅವಧಿಯನ್ನು ಕೊಟ್ಟಿರುವ ಸಂಗ ತಿಯು ನಿನಗೆ ತಿಳಿದಿರುವುದಲ್ಲವೆ! ಆ ಸಂಗತಿಯನ್ನು ನನ್ನ ಪ್ರಾಣನಾಥ ನಿಗೆ ತಿಳಿಸಿ, ಅಷ್ಟರಲ್ಲಿ ಬಂದು ನನ್ನನ್ನು ಈ ಬಂಧನದಿಂದ ಬಿಡಿಸಿ ರಕ್ಷಿಸ ಬೇಕೆಂದು ಬೇಡಿಕೊಂಡೆನೆಂದು ಹೇಳು' ಎಂದು ಆಶೀರ್ವದಿಸಿ, ತನ್ನ ಗುರು ತಿಗಾಗಿ ಚೂಡಾರತ್ನವನ್ನಿತ್ತು ಕಳುಹಿಸಿದಳು. ಆಂಜನೇಯನೂ ಅಶೋಕ ವನವನ್ನು ಧ್ವಂಸಗೊಳಿಸಿ, ಲಂಕೆಯನ್ನು ದಹಿಸಿ, ರಾಕ್ಷಸರ ಬಲಾಬಲಗ ಳನ್ನು ತಿಳಿದು, ಪುನಃ ಸಮುದ್ರವನ್ನು ಹಾರಿ, ಜಾಂಬುವಾದಿಗಳಿದ್ದಲ್ಲಿಗೆ ನಡೆದನು.

ಆಂಜನೇಯನಿಂದ ಸೀತಾದೇವಿಯ ವೃತ್ತಾಂತವನ್ನು ತಿಳಿದ ಶ್ರೀರಾಮನು, ಕ್ಷಣಮಾತ್ರವೂ ಸಾವಕಾಶಮಾಡದೆ, ಅನೇಕಕೋಟಿ ಕಪಿವೀರರ ಅಗಾಧ ಸೈನ್ಯವನ್ನೊಡಗೊಂಡು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ಲಂಕೆಯ ಬಳಿಯನ್ನು ಸೇರಿದನು. ರಾಕ್ಷಸಸೈನ್ಯಕ್ಕೂ ವಾನರ ಸೈನ್ಯಕ್ಕೂ ಭಯಂಕರಯುದ್ಧ ನಡೆಯಿತು. ಕೋಟ್ಯಾಂತರ ರಾಕ್ಷಸರು ಯುದ್ಧದಲ್ಲಿ ಮಡಿದರು. ಉಭಯಸೈನ್ಯದಲ್ಲೂ ರಕ್ತವು ಹೊಳೆಯಾಗಿ ಹರಿಯಿತು. ಕೊನೆಗೆ ರಾವಣನ ಪ್ರಮುಖ ಮಂತ್ರಿಗಳೂ, ಸುಪ್ರಸಿದ್ಧ ವೀರರಾದ ಇಂದ್ರಜಿತ್ತು ಕುಂಭಕರ್ಣಾದಿಗಳೂ, ರಾಮಲಕ್ಷ್ಮಣರ ಬಾಣಗಳಿಂದ ಹತರಾದರು. ಸಕಲರೂ ನಿರ್ಮೂಲರಾದಾಗಲೂ ಆ ನೀಚನು ಸೀತೆಯನ್ನು ಹಿಂಸಿಸುವುದನ್ನು ಬಿಡಲಿಲ್ಲ. ಮಾಯೆಯಿಂದ ರಾಮಲಕ್ಷ್ಮಣರ ಶಿರಸ್ಸುಗಳನ್ನೂ ಬಿಲ್ಲು ಬಾಣಗಳನ್ನೂ ರಚಿಸಿ ಆಕೆಯೆದುರಿನಲ್ಲಿಟ್ಟು ಇನ್ನಾದರೂ ನಿರಾಶಳಾಗಿ ತನ್ನನ್ನು ವರಿಸೆಂದು ಬೇಡಿದನು. ಬೆದರಿಸಿದನು. ಕೊಲ್ವೆನೆಂದನು. ಆದರೂ ಆ ಸಾಧ್ವಿಯು ಅವುಗಳಲೊಂದಕ್ಕೂ ಲಕ್ಷ್ಯಕೊಡದೆ ತನ್ನ ಪತಿಯ ಪವಿತ್ರನಾಮಗಳ ಅಖಂಡ ಮಂತ್ರ ಜಪಮಾಡುತ್ತಾ ನಿಶ್ಶಂಕೆಯಿಂದ ಇದ್ದುಬಿಟ್ಟಳು.

ಪುನಃ ಕೈಗಟ್ಟಿದ ಭಯಂಕರ ಕಾಳಗದಲ್ಲಿ ಮಹಾ ಸತ್ವಶಾಲಿಗಳಾದ ರಾಮ ಬಾಣಗಳು ರಾವಣನ ಪ್ರಾಣವಾಯುಗಳನ್ನೂ ದೇಹದಿಂದ ಹೊರಕ್ಕೆಳೆದುವು ಶರಣಾಗತನೂ ಮಹಾಭಕ್ತನೂ ಆದ ವಿಭೀಷಣನು ಸೀತಾದೇವಿಯನ್ನು ಶ್ರೀರಾಮ ಸನ್ನಿಧಿಗೆ ಕರೆತಂದನು. ಆದರ ಒಂದು ವರ್ಷಕಾಲ ತನ್ನ ವೈರಿಯಾದ ರಾವಣನ ವಶದಲ್ಲಿದ್ದವಳೆಂಬ ಶಂಕೆಯಿಂದ ಶ್ರೀರಾಮನು ಆಕೆಯನ್ನು ಪರಿಗ್ರಹಿಸಲೊಪ್ಪಲಿಲ್ಲ. ಸೀತೆಯು ತಾನು ತ್ರಿಕರಣ ಶುದ್ಧಿಯಾಗಿ ಶ್ರೀರಾಮನನ್ನಲ್ಲದೆ ಅನ್ಯಧಾ ಕನಸಿನಲ್ಲೂ ಸ್ಮರಣೆ ಮಾಡಿದವಳಲ್ಲವೆಂದು ಆಣೆಯಿಟ್ಟುಕೊಂಡಳು. ಆದರೂ ಏನೂ ಪ್ರಯೋಜನವಾಗಲಿಲ್ಲ! ಆಗಲಾ ವೀರಪತಿವ್ರತೆಯು ಅಗ್ನಿಕುಂಡವನ್ನು ಪ್ರವೇಶಿಸಿ ತನ್ನ ಪಾವಿತ್ರ್ಯತೆಯನ್ನು ಸ್ಪಷ್ಟಪಡಿಸಬೇಕೆಂದು ಇಚ್ಛಿಸಿದಳು. ಆಕೆಯ ಆಜ್ಞೆಯಿಂದ ಲಕ್ಷ್ಮಣನು ಒಡನೆ ಅಗ್ನಿಕುಂಡವನ್ನು ಪ್ರತಿಷ್ಠಿಸಿದನು. ಭೂಮಿಯಿಂದ ಅಂತರಿಕ್ಷದವರೆಗೂ ಧಗಧಗನೆಂದು ಉರಿಯುತ್ತಿದ್ದ

ಆ ಅಗ್ನಿಯ ಮುಂದೆ ನಿಂತು ಜಾನಕಿಯು – 'ನಾನು ಮನಸ್ಸಿನಿಂದಲಾದರೂ ಶ್ರೀರಾಮಚಂದ್ರನ ಪಾದಕಮಲಗಳನ್ನಲ್ಲದೆ ಅನ್ಯಥಾ ಚಿಂತಿಸಿದ್ದೆನಾದರೆ, ಈ ಬೆಂಕಿಯು ನನ್ನನ್ನು ದಹಿಸಿ ಬೂದಿಮಾಡಲಿ' ಎಂದು ಆ ಭಯಂಕರವಾದ ಅಗ್ನಿಕುಂಡವನ್ನು ಪ್ರವೇಶಿಸಿದಳು. ಸಕಲರೂ ಹಾಹಾಕಾರ ಮಾಡಿದರು. ಆಗ ಅಗ್ನಿದೇವನು ರೂಪುಗೊಂಡು ಭಯಭಕ್ತಿಯಿಂದ ಆಕೆಯನ್ನೆತ್ತಿಕೊಂಡುಬಂದು ಶ್ರೀರಾಮಸನ್ನಿಧಿಯಲ್ಲಿ ಬಿಟ್ಟು – 'ರಘೂತ್ತಮಾ ಇದೇನು ನಿನ್ನ ಮನುಜಲೀಲೆಯು! ನೀನು ಸಾಮಾನ್ಯ ಮಾನವನೇ? ಈಕೆಯು ನಾಡಾಡಿ ಹೆಂಗಸೇ! ಸಾಕ್ಷಾದ್ವಿಷ್ಣುವಾದ ನೀನು ಲೋಕಮಾತೆಯಾದ ಲಕ್ಷ್ಮಿಯ ವಿಷಯದಲ್ಲಿ ಹೀಗೆ ಸಂದೇಹಪಡಬಹುದೆ! ಈಕೆಯು ತ್ರಿಕರಣಶುದ್ಧಿಯಾಗಿ ಪವಿತ್ರಳು. ತ್ರಿಲೋಕ ಪೂಜ್ಯಳು. ಮಹಾ ಪತಿವ್ರತಾಶಿರೋಮಣಿಯು. ಈಕೆಯನ್ನು ಸ್ವೀಕರಿಸು' ಎಂದು ನುಡಿದು ಅದೃಶ್ಯನಾದನು. ಅಂತರಿಕ್ಷದಲ್ಲಿ ವಿಮಾನಗಳಲ್ಲಿ ನೆರೆದ ದೇವತೆಗಳೂ ಸೀತೆಯ ಪಾವಿತ್ರ್ಯತೆಯನ್ನು ಸಹಸ್ರ ಮುಖಗಳಿಂದ ಹೊಗಳಿದರು. ಸ್ವರ್ಗವಾಸಿಯಾದ ದಶರಥರಾಜೇಂದ್ರನೂ – ಬ್ರಹ್ಮದೇವನೂ ಸೂರ್ಯವಂಶ ಪಾವನಳಾದ ಆಕೆಯನ್ನು ಪರಿಗ್ರಹಿಸೆಂದು ಶ್ರೀರಾಮನಿಗೆ ಸಲಹೆ ಕೊಟ್ಟರು. ಶ್ರೀರಾಮನು ಆಕೆಯ ಪವಿತ್ರ ಚಾರಿತ್ರ್ಯಕ್ಕಾಗಿ ಸಂತುಷ್ಟನಾಗಿ ಹಸನ್ಮುಖದಿಂದ ಆಕೆಯನ್ನು ಕರೆದು ತೊಡೆಯಲ್ಲಿ ಕೂರಿಸಿಕೊಂಡು ಆದರಿಸಿದನು.

ತರುವಾಯ ವಿಭೀಷಣನಿಗೆ ಲಂಕಾರಾಜ್ಯದಲ್ಲ ಪಟ್ಟಗಟ್ಟಿ, ಶ್ರೀರಾಮನು ಪುಷ್ಪಕ ವಿಮಾನವನ್ನೇರಿ ಅಯೋಧ್ಯಾಭಿಮುಖನಾಗಿ ಹೊರಟು, ಸೇತುಮೂಲದಲ್ಲಿ ರಾಮಲಿಂಗೇಶ್ವರನನ್ನು ಪ್ರತಿಷ್ಠಿಸಿ, ಮಾರ್ಗದಲ್ಲಿನ ಮುಖ್ಯ ಮುಖ್ಯ ಸ್ಥಳಗಳನ್ನು ಸೀತೆಗೆ ತೋರಿಸುತ್ತಾ, ತಮ್ಮ ಬರುವನ್ನು ಭರತನಿಗೆ ತಿಳಿಸಲಕ್ಕಾಗಿ ಮುಂದಾಗಿ ಆಂಜನೇಯನನ್ನು ಕಳುಹಿಸಿದನು. ಆಂಜನೇಯನು ವಾಯುವೇಗದಿಂದ ಬಂದು, ಆವರೆಗೂ ತಮ್ಮಣ್ಣನು ಬರಲಿಲ್ಲವೆಂದು ಅಗ್ನಿಪ್ರವೇಶಕ್ಕೆ ಸಿದ್ಧನಾಗಿದ್ದ ಭರತನಿಗೆ ಸೀತಾ ರಾಮ ಲಕ್ಷ್ಮಣರ ಕುಶಲ ವಾರ್ತೆಯನ್ನು ತಿಳಿಸಿದನು. ಪ್ರಯಾಣ ಮಧ್ಯದಲ್ಲಿ ಭಾರದ್ವಾಜಾಶ್ರಮದಲ್ಲಿ ನಿಂತು ಆತಿಥ್ಯವನ್ನು ಸ್ವೀಕರಿಸಿದ ಶ್ರೀರಾಮನು ತಾನು ಅಯೋ

ಧ್ಯೆಯಿಂದ ಹೊರಟು ಹದಿನಾಲ್ಕು ವರುಷಗಳು ಕಳೆದ ತರುವಾಯ ಮಾರ ಸೆಯ ಪ್ರಾತಃಕಾಲ ತನ್ನ ವಾಗ್ದಾನದಂತೆ ನಂದಿಗ್ರಾಮವನ್ನು ಸೇರಿ ತನ್ನಾ ಪ್ರಿಯಭ್ರಾತೃವಿಗೆ ದರ್ಶನವನ್ನಿತ್ತು ಆದರಿಸಿದನು.

ಶ್ರೀರಾಮಲಕ್ಷ್ಮಣರು ಭರತಶತ್ರುಘ್ನರೊಂದಿಗೂ ಮೂವರು ತಾಯಿಯರೊಂದಿಗೂ ನಂದೀಗ್ರಾಮದಿಂದ ಅಯೋಧ್ಯೆಗೆ ಪ್ರಯಾಣ ಮಾಡಿದರು.— ಅಲ್ಲಿ ನಾಲ್ಕು ಮಂದಿ ಸೋದರರೂ ತಾವು ಕಟ್ಟಿದ್ದ ಜಟೆ ನಾರು ವಸ್ತ್ರಗಳನ್ನು ವಿಸರ್ಜಿಸಿ ವ್ರತಸಮಾಪ್ತಿ ಮಾಡಿದರು. ತರುವಾಯ ಚೈತ್ರ ಶುದ್ಧ ಸಪ್ತಮಿಯ ದಿನ ಪುಷ್ಯಮಿ ಶುಭನಕ್ಷತ್ರದಲ್ಲಿ ಪಟ್ಟಾಭಿಷೇಕದ ಮುಹೂರ್ತವು ನಿಶ್ಚಯಿಸಲ್ಪಟ್ಟಿತು. ಸಕಲರೂ ಮಂಗಳಸ್ನಾನ ಮಾಡಿದರು. ನಾಲ್ಕುಮಂದಿ ಅಣ್ಣತಮ್ಮಂದಿರೂ ಅವರ ಪತ್ನಿಯರೂ ದಿವ್ಯಾಭರಣ ವಿಭೂಷಿತರಾದರು. ಶ್ರೀರಾಮಚಂದ್ರನು ಮನುಮಾಂಧಾತರೇ ಮುಂತಾದ ಸೂರ್ಯವಂಶದ ಸುಪ್ರಸಿದ್ಧ ರಾಜೇಂದ್ರರು ಏರಿದ್ದ ದಿವ್ಯಸಿಂಹಾಸನವನ್ನು ಏರಿದನು. ನಮ್ಮ ಕಥಾನಾಯಿಕೆಯಾದ ಶ್ರೀ ಸೀತಾದೇವಿಯು ಆತನ ಎಡತೊಡೆಯಲ್ಲಿ ಕುಳಿತಳು. ಲಕ್ಷ್ಮಣನು ಶ್ವೇತಚ್ಛತ್ರವನ್ನು ಹಿಡಿದನು. ಭರತಶತ್ರುಘ್ನರು ದಿವ್ಯಚಾಮರಗಳಿಂದ ಬೀಸಿದರು. ವಂದಿ ಮಾಗಧರು ಜಯಜಯನೆಂದು ಹೊಗಳಿದರು. ಶ್ರೀರಾಮಚಂದ್ರನು ಸೀತಾ ಲಕ್ಷ್ಮಣ ಭರತ ಶತ್ರುಘ್ನ ಹನುಮತ್ಸಮೇತನಾಗಿ ರತ್ನಸಿಂಹಾಸನ ಪ್ರತಿಷ್ಠಿತನಾಗಿ ಷೋಡಶ ಕಳಾಯುಕ್ತನಾಗಿ ಪ್ರಕಾಶಿಸಿದನು. ರಘುವಂಶ ವರ್ಧನನಾದ ಶ್ರೀರಾಮಚಂದ್ರನ ಧರ್ಮಸಮ್ಮತವಾದ ರಾಜ್ಯಭಾರವು ಪ್ರಜೆಪರಿವಾರಗಳಿಗೆ ಕಲ್ಪವೃಕ್ಷದ ನೆಳಲಿನಂತೆ ಸುಖದಾಯಕವಾಗಿರಲು ಸಕಲರೂ ಆನಂದ ವರಧಿಯಲ್ಲಿ ಓಲಾಡುತ್ತಾ ಇದ್ದರು. ಶ್ರೀ ಸೀತಾದೇವಿಯು ತನ್ನ ಸದ್ಗುಣ ಸದಾಚರಣೆಗಳಿಂದಲೂ ಲೋಕೋತ್ತರವಾದ ಪಾತಿವ್ರತ್ಯ ಪ್ರಭೆಯಿಂದಲೂ ಜಗತ್ತನ್ನೇ ಬೆಳಗುತ್ತ ತನ್ನ ಪತಿಯೊಂದಿಗೆ ವಿವಿಧ ಭೋಗಗಳನ್ನನುಭವಿಸುತ್ತ ಹನ್ನೊಂದು ಸಹಸ್ರ ವರುಷಕಾಲ ಅಯೋಧ್ಯೆಯಲ್ಲಿ ಸುಖವಾಗಿ ವಾಸಿಸಿದಳು.



**ಅಧ್ಯಾಯ ೬** **"ವಾಲ್ಮೀಕ್ಯಾಶ್ರಮವಾಸ"**

ಸಂಸಾರದಲ್ಲಿ ಕಷ್ಟಗಳೂ ದುಃಖಗಳೂ ಬಡವರು ದೊಡ್ಡವರೆಂಬ ಭೇದವಿಲ್ಲದೆ - ಸಾಮಾನ್ಯರು ಮಹಾತ್ಮರೆಂಬ ವ್ಯತ್ಯಾಸವಿಲ್ಲದೆ, ಸಕಲರಿಗೂ ಪ್ರಾಪ್ತವಾಗುವುವು. ಸಾಮಾನ್ಯರು ತಮ್ಮ ಜನ್ಮಾಂತರ ಕರ್ಮಫಲಾನುಭವ ಮಾಡಲಿಕ್ಕಾಗಿಯೋ ಎಂಬಂತೆ ಅವುಗಳಿಗೆ ಒಳಪಟ್ಟು ತಪ್ಪಿಸಿಕೊಳ್ಳಲವಕಾಶವಿಲ್ಲದೆ ಮಿಡುಕಿ ಎಂತೂ ಅನುಭವಿಸುವರು. ಮಹನೀಯರೂ ಹಾಗೆಯೇ ಆ ಕಷ್ಟದುಃಖಸಂಕಟಗಳನ್ನು ಅನುಭವಿಸುವರಾದರೂ ಅವರು ಅದಕ್ಕಾಗಿ ವ್ಯಥೆಪಡರು. ಆ ಕಷ್ಟಗಳು ಕೇವಲ ಅವರ ಸತ್ವಪರೀಕ್ಷೆಗಾಗಿಯೇ ಪ್ರಾಪ್ತವಾದುವೋ ಎಂಬಂತಿರುವುವು. ಅವರ ಅಂತಹ ಅನುಭವವೂ ಲೋಕಶಿಕ್ಷೆಗಾಗಿಯೇ ನಡೆದು ಜನಸಮಾಜಕ್ಕೆ ಒಂದು ಉದಾಹರಣಸ್ವರೂಪವಾಗಿ ಪರಿಣಮಿಸುವುದು.

ಶ್ರೀ ಸೀತಾದೇವಿಯು ಅಯೋಧ್ಯೆಗೆ ಬಂದಮೇಲೆ, ಏನೊಂದು ಕಷ್ಟವನ್ನೂ ಅರಿಯದೆ, ಅರಮನೆಯಲ್ಲಿ, ಮಹಾರಾಜನ ಪಟ್ಟಮಹಿಷಿಯಾಗಿ, ಸುಖಸಾಮ್ರಾಜ್ಯಗಳನ್ನನುಭವಿಸುತ್ತಾ ಇದ್ದಳು. ಹೀಗೆ ಪ್ರಿಯಪತಿಯೊಂದಿಗೆ ಬಹುಕಾಲ ಸಂಸಾರಸುಖಗಳನ್ನು ಅನುಭವಿಸುತ್ತಿದ್ದರೂ ಆ ಸಾಧ್ವಿಗೆ ಮಕ್ಕಳಿಲ್ಲದ ಕೊರತೆಯೊಂದು ಬಾಧಿಸತೊಡಗಿತು. ಸರಿಯುವರಿಂದ ಗರ್ಭಿಣಿಯೆಂದು ಕರೆಯಲ್ಪಟ್ಟು, ಆರತಿ ಅಕ್ಷತೆಗಳಿಂದ ಉಪಚರಿಸಲ್ಪಟ್ಟು, ಉಡುಗೆರೆ ಬಾಗಿನಾದಿಗಳನ್ನು ಪಡೆದು, ಸೀಮಂತಾದಿ ಯುಕ್ತಮಹೋತ್ಸವಗಳಿಂದ ನಲಿದು, ಮಹಾಪ್ರಯಾಸಕರವಾದುದಾದರೂ ಕಂದನ ಮುಖವನ್ನು ನೋಡುವ ಆಶಾಬದ್ಧಳಾಗಿ ಪ್ರಸವವೇದನೆಯ ಪ್ರಚಂಡಸಂಕಟವನ್ನೂ ಸಹಿಸಿ-ಪ್ರಸವಿಸಿ, ತರುವಾಯ ತನ್ನಾಮುದ್ದುಕಂದನನ್ನು ಎದೆಗಪ್ಪಿಕೊಂಡು ಮೊಲೆಯೂಡಿ, ತೊಡೆಯಲ್ಲಿಟ್ಟು ಲಾಲಿಸಿ, ಆಕಾಶದಂತೆ ನಿರ್ಮಲವಾದ ತೇಜಸ್ವಿ ನೇತ್ರಗಳನ್ನೂ ನಿಷ್ಕಲ್ಮಷವಾದ ಮುದ್ದುಮುಖವನ್ನೂ ಪುನಃಪುನಃ ನೋಡಿ ಆನಂದಿಸುತ್ತಾ, ಪ್ರೇಮೋದ್ರೇಕವನ್ನು ತಡೆಯಲಾರದೆ ಆ ಹಸುಳೆಯ ಮೃದುವಾದ ಕೆನ್ನೆಗಳಿಗೆ ಮನದಣಿಯೆ ಮುದ್ದಿಟ್ಟು, ಅಳುವ ತನ್ನಾಕಂದ

ಮ್ಮನನ್ನು ಪರಿಪರಿಯಿಂದ ಲಾಲಿಸಿ, ತೊಟ್ಟಿಲೊಳಿಟ್ಟು ಜೋಗುಳ ಪಾಡಿ, ಲಾಲಿಸಿ ನಿದ್ರೆಗೈಸಿ, ಹಾಗೆ ನಿದ್ರೆಗೈಯ್ಯುತ್ತಿರುವ ಆ ಶಿಶುವಿನ ಅಲೌಕಿಕ ಸೌಂದರ್ಯವನ್ನು ಮನಸಾರೆ ದೃಷ್ಟಿಸಿ-ತನಗೊಂದು ಅಂತಹ ರತ್ನವನ್ನು ಅನುಗ್ರಹಿಸಿದ ಲೋಕಪ್ರಭು ಪರಮಾತ್ಮನನ್ನು ವಂದಿಸಿ-ಆ ತನ್ನ ರತ್ನವು ಎಲ್ಲಾದರೂ ಸುರಕ್ಷಿತವಾಗಿ ಬದುಕಿರಲೆಂದು ಆಶಿಸುವುದೊಂದು ಸ್ತ್ರೀಜನ ಸಾಮಾನ್ಯಕ್ಕೇ ಉಂಟಾಗುವ ಮಹತ್ವದ ಬಯಕೆಯಲ್ಲವೆ! ತಾನು ಲೋಕ ಮಾತೆಯೇ ಆದರೂ ಮನುಜಲೀಲೆಗೆ ಸಾಧಾರಣವಾದ ಆ ಒಂದು ಬಯಕೆ ಯು ಬಾಧಿಸುತ್ತಿರಲು ಜಾನಕಿಯು ಚಿಂತಾಕ್ರಾಂತಳಾಗಿ ಅನ್ನ ನೀರುಗಳಲ್ಲಿ ಅಪೇಕ್ಷೆಯನ್ನು ತೊರೆದು ತಪಿಸುತ್ತಿದ್ದಳು. 'ಅಕಟಾ ನನ್ನ ಬಾಳು ಎಷ್ಟು ಹೀನವಾದುದು. ಬೀದಿಯಲ್ಲಿರುವ ತಿರುಪೆಯ ಹೆಂಗಸು ತಾನು ಗರ್ಭದ ಲ್ಲಿಟ್ಟುಕೊಂಡು ಹೆತ್ತ ಮಗುವನ್ನು ಎದೆಗಪ್ಪಿಕೊಂಡು ತೋಳುಗಳಿಂದ ಬಾಚಿ ತಬ್ಬಿಕೊಂಡು ಆನಂದಿಸುವ ಭಾಗ್ಯವನ್ನು ಪಡೆದಿರುವಲ್ಲಿ ನಾನು ಅವ ಳಿಗಿಂತಲೂ ಕೀಳಾದೆನಲ್ಲ.—ಗಿಳಿ ಪಾರಿವಾಳ ಗುಬ್ಬಿ ಮೊದಲಾದ ತಿರ್ಯ ಕ್ಪ್ರಾಣಿಗಳು ಸಹ ತಮ್ಮ ತಮ್ಮ ಮರಿಗಳನ್ನು ರಕ್ಕೆಗಳೊಳಗೆ ಹುದುಗಿಸಿ ಟ್ಟುಕೊಂಡು, ಗುಟುಕುಕೊಟ್ಟು ಪೋಷಿಸುತ್ತಿರುವುವಲ್ಲ, ನನಗೆ ಅಂತಹ ಭಾಗ್ಯಕ್ಕೆ ಲಭ್ಯವಿಲ್ಲವೇ?' ಎಂದು ವ್ಯಥೆಪಡುವಳು. ಈ ವಿಚಾರವು ಶ್ರೀ ರಾಮನ ಗಮನಕ್ಕೂ ಬಂದಿತು. ಸ್ವಾಭಾವಿಕವಾಗಿಯೇ ಆತನಿಗೂ ವಂಶಾ ಭಿವೃದ್ಧಿಗಾಗಿ ಸಂತಾನವಾಗಬೇಕೆಂಬ ಅಪೇಕ್ಷೆಯುಂಟಾಯಿತು.

ಹೀಗಿರುವಲ್ಲಿ ಒಂದುದಿನ ರಾತ್ರೆ ಮಲಗಿದ್ದಾಗ್ಗೆ ಶ್ರೀರಾಮನು ಒಂದು ಕನಸು ಕಂಡನು. ಅದರಲ್ಲಿ ಗರ್ಭಿಣಿಯಾಗಿದ್ದ ಜಾನಕಿಯು ಪರದೇಶಿಯಂತೆ ನಿಸ್ಸಹಾಯಕಳಾಗಿ ಕಾಡಿನಲ್ಲಿ ಅಲೆಯುತ್ತಾ ಮಹಾಸಂಕಟಕ್ಕೆ ಒಳಗಾಗಿದ್ದು ದನ್ನು ಕಂಡು ಗಾಬರಿಗೊಂಡು ಮಾರನೆಯ ಪ್ರಾತಃಕಾಲ ವಸಿಷ್ಠ ಮಹ ರ್ಷಿಗಳಲ್ಲಿ ಆ ಸಂಗತಿಯನ್ನು ವಿಜ್ಞಾಪಿಸಿಕೊಂಡನು. ಅವರು ಜ್ಞಾನದೃಷ್ಟಿ ಯಿಂದ ನೋಡಿ-'ಶ್ರೀರಾಮಾ ರಘುವಂಶವರ್ಧನರಾದ ಈರ್ವರು ಪುತ್ರರು ಸೀತಾಗರ್ಭದಲ್ಲಿ ಉದಯಿಸುವರು. ಪ್ರಾರಂಭದಲ್ಲಿ ಕೆಲದಿನಗಳು ಕಷ್ಟ ವುಂಟಾದರೂ ಮುಂದೆ ಸುಖವಾಗುವುದು' ಎಂದು ಹೇಳಿ ಸಮಾಧಾನಪಡಿ ಸಿದರು.

ಮುಂದೆ ಕೆಲದಿನಗಳಲ್ಲೇ ಸೀತಾದೇವಿಯು ಗರ್ಭಚಿಹ್ನೆಗಳಿಂದ ಶೋಭಿಸಿದಳು. ಶ್ರೀರಾಮನೂ ಕೌಸಲ್ಯೆಯೂ ಇತರ ಬಂಧುಬಾಂಧವರೂ ಪರಮಾನಂದದಿಂದ ತಿಂಗಳು ತಿಂಗಳಿಗೂ ನಡೆಯಬೇಕಾದ ಬಗೆಬಗೆಯ ಉತ್ಸವಾದಿಗಳನ್ನು ನಡೆಸಿ ಆಕೆಯ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿದ್ದರು. ಶ್ರೀರಾಮನು ಆಕೆಯ ಬಯಕೆಗಳನ್ನು ತಡೆಬಡೆಯಿಲ್ಲದೆ ಒದಗಿಸಿ ಕೊಡುವುದರಲ್ಲಿ ಸರ್ವದಾ ಸಿದ್ಧನಾಗಿರುತ್ತಿದ್ದನು. ಹೀಗಿರುವಲ್ಲಿ ಒಂದು ದಿನ ಸೀತೆಯು ತಾನು ಆಶ್ರಮವಾಸಿ ಋಷಿಗಳನ್ನೂ ಋಷಿಪತ್ನಿಯರನ್ನೂ ನೋಡಿ ಬಹುಕಾಲವಾದುದರಿಂದ ದಯವಿಟ್ಟು ಋಷ್ಯಾಶ್ರಮಕ್ಕೆ ಕಳುಹಿಸಬೇಕೆಂದೂ ಅಲ್ಲಿ ಅವರನ್ನು ಪೂಜಿಸಿ ಮುನಿಪತ್ನಿಯರಿಗೆ ಬಾಗಿನಾದಿಗಳನ್ನು ಒಪ್ಪಿಸಿ ಬರುವೆನೆಂದೂ ತನ್ನ ಭರ್ತನಲ್ಲಿ ಕೇಳಿಕೊಂಡಳು. ಅದಕ್ಕೆ ಶ್ರೀರಾಮನೂ ಸಮ್ಮತಿಸಿದನು.

ಆದರೆ ಈ ಕಾರ್ಯವು ಸುಮುಖವಾಗಿ ನಡೆಯುವುದಕ್ಕೆ ವಿಘ್ನವೊಂದು ಪ್ರಾಪ್ತಿಸಿತು. ಒಂದಾನೊಂದು ದಿನ ನಗರ ಪ್ರದಕ್ಷಿಣೆಗೆಂದು ಹೋಗಿದ್ದ ಚಾರನ ಮುಖದಿಂದ ಒಂದು ದುರ್ವಾರ್ತೆಯನ್ನು ರಾಮನು ಕೇಳಿದನು. ಅಗಸನೊಬ್ಬನು ತನ್ನನ್ನು ಕೇಳದೆ ತೌರುಮನೆಗೆ ಹೊರಟು ಹೋದ ತನ್ನ ಹೆಂಡತಿಯನ್ನು ಹಿಂದಿರುಗಿ ಕರೆತಂದ ಅವಳ ಸ್ವಜನರೊಂದಿಗೆ-'ಬಿಟ್ಟ ಹೆಂಡತಿಯನ್ನು ಪುನಃ ಮನೆಯಲ್ಲಿಟ್ಟುಕೊಂಡು ಆಳಲು ನಾನೇನು ರಾಮನಲ್ಲ' ಎಂದು ನುಡಿದನೆಂಬ ನಿಷ್ಠುರೋಕ್ತಿಯನ್ನು ಕೇಳಿ ಮನನೊಂದು, ಆ ಲೋಕಾಪವಾದವನ್ನು ನೀಗಿಸಿಕೊಳ್ಳುವುದಕ್ಕೆ ಸೀತೆಯನ್ನು ತ್ಯಾಗಮಾಡತಕ್ಕದ್ದೇ ಕರ್ತವ್ಯವೆಂದು ನಿರ್ಧರಿಸಿದನು. ಭರತ ಶತ್ರುಘ್ನರು ಎಷ್ಟೋ ಬಗೆಯಿಂದ ಹೇಳಿ ನೋಡಿದರು. ಆದರೂ ಏನೂ ಪ್ರಯೋಜನವಾಗಲಿಲ್ಲ. ಶ್ರೀರಾಮನು ಲಕ್ಷ್ಮಣನನ್ನು ಕರೆದು-' ಸೀತೆಯು ಈ ಮೊದಲೇ ಋಷ್ಯಾಶ್ರಮ ದರ್ಶನಕ್ಕೆ ಹೋಗಬೇಕೆಂದು ಅಪೇಕ್ಷಿಸಿರುವಳಾದುದರಿಂದ ಆ ಕಾರಣದಿಂದ ಅವಳನ್ನು ಕರೆದೊಯ್ದು ಕಾಡಿನಲ್ಲಿ ಬಿಟ್ಟುಬಾರೆಂದು ಆಜ್ಞಾಪಿಸಿದನು. ಅಗ್ರಜನ ಆಜ್ಞೆಯಿಂದ ಬದ್ಧನಾದ ಲಕ್ಷ್ಮಣನು ತನ್ನ ದುರದೃಷ್ಟಕ್ಕಾಗಿ ತನ್ನನ್ನೇ ಸಹಸ್ರಬಾರಿ ನಿಂದಿಸಿಕೊಳ್ಳುತ್ತಾ-ವಿಧಿಯಿಲ್ಲದೆ, ಪಾಪ, ಆ ವಿಚಾರವನ್ನೇ ತಿಳಿಯದೆ-ತನ್ನ ರಮಣನು ತನ್ನ ಅಪೇಕ್ಷೆಯನ್ನು

ಸಲ್ಲಿಸಲಿಕ್ಕಾಗಿ ಋಷ್ಯಾಶ್ರಮಕ್ಕೆ ಕಳುಹಿಸುತ್ತಿರುವನೆಂದು ಭ್ರಮಿಸಿ ಸಂತೋಷಪಡುತ್ತಿದ್ದ ಸೀತೆಯನ್ನು ರಥವನ್ನೇರಿಸಿಕೊಂಡು, ಅಯೋಧ್ಯೆಯಿಂದ ಹೊರಟು ಪ್ರಯಾಣಮಾಡಿದನು.

ಮಾರ್ಗಮಧ್ಯದಲ್ಲಿ ಸೀತೆಯು ತಮ್ಮ ರಥವು ಋಷ್ಯಾಶ್ರಮ ಮಾರ್ಗವನ್ನು ಬಿಟ್ಟು ಅರಣ್ಯಮಾರ್ಗವನ್ನು ಅನುಸರಿಸಿರುವುದೆಂಬುದನ್ನು ಕಂಡುಹಿಡಿದು ಲಕ್ಷ್ಮಣನನ್ನು ಪ್ರಶ್ನಿಸಿದಳು. ಲಕ್ಷ್ಮಣನು ಮಹಾ ದುಃಖದಿಂದ ಮುಂಗಾಣದೆ, ಇದ್ದ ಸಂಗತಿಯನ್ನು ತಿಳಿಸಿದನು. ಶ್ರೀರಾಮಚಂದ್ರನು ಲೋಕಾಪವಾದಕ್ಕಾಗಿ ತನ್ನನ್ನು ತ್ಯಜಿಸಿದನೆಂಬ ಮರ್ಮಭೇಧಕಗಳಾದ ಮಾತುಗಳು ಕಾಸಿದ ಸೀಸದ ರಸದಂತೆ ಕಿವಿಗಳನ್ನು ಪ್ರವೇಶಿಸುತ್ತಿರುವಂತೆಯೇ ನಿಷ್ಕಲ್ಮಷ ಚಿತ್ತವೃತ್ತಿಯ ಆ ಸಾಧ್ವಿಯು ಬುಡವನ್ನು ಕತ್ತರಿಸಿದ ಬಾಳೆಯ ಮರದಂತೆ ನಡನಡುಗುತ್ತಾ ಭೂಮಿಗೊರಗಿದಳು. ಲಕ್ಷ್ಮಣನು ತನ್ನ ದುರ್ವಿಧಿಯನ್ನು ಹಲವು ಪರಿಯಿಂದ ನಿಂದಿಸಿಕೊಳ್ಳುತ್ತಾ ಆಕೆಗೆ ಅನೇಕ ಬಗೆಯ ಶೈತ್ಯೋಪಚಾರಗಳನ್ನು ಮಾಡಿದನು. ಮೂರ್ಛೆ ತಿಳಿದೆದ್ದ ಜಾನಕಿಯು ಹಲವುಬಗೆಯಿಂದ ಹಲುಬಿ ಹಂಬಲಿಸಿಕೊಂಡು ಕಾಡಿನಲ್ಲಿ ಕಲ್ಮರಗಳು ಕರಗುವಂತೆ ಮೊರೆಯಿಡುತ್ತಾ ದುಃಖಿಸುತ್ತಿದ್ದಳಾದರೂ ಗರ್ಭಿಣಿಯಾದ ತನ್ನ ವಿಷಯದಲ್ಲಿ ಅಂತಹ ಅತ್ಯಾಚಾರವನ್ನು ನಡೆಯಿಸಿದ ತನ್ನ ಪತಿಯ ನಡತೆಯನ್ನು ಕುರಿತು ಒಂದು ಬಿಡುನುಡಿಯನ್ನೂ ನುಡಿಯದೆ, ಸಕಲ ಕಲ್ಯಾಣಗುಣ ಪರಿಪೂರ್ಣನೂ ಪ್ರೇಮಸ್ವರೂಪನೂ ಮಹಾ ದಯಾಳುವೂ ಆದ ಆತನ ಸಹವಾಸವು ತನ್ನ ದುರ್ವಿಧಿಯಿಂದಲೇ ತಪ್ಪಿಹೋಯಿತೆಂದು ತನ್ನನ್ನು ತಾನೇ ನಿಂದಿಸಿಕೊಳುತ್ತಾ, ತನ್ನ ಪತಿಯು ವಿಧಿಸಿದ ಆ ಶಿಕ್ಷೆಯನ್ನು ಮನಃಪೂರ್ವಕ ಸ್ವೀಕರಿಸಿ ಲಕ್ಷ್ಮಣನಿಗೆ ಹಿಂದಿರುಗಿ ಹೋಗಲು ಅನುಮತಿಯಿತ್ತಳು.

ಲಕ್ಷ್ಮಣನು ತುಂಬು ಗರ್ಭಿಣಿಯಾದ ಆ ಸಾಧ್ವಿಯನ್ನು ಘೋರಾರಣ್ಯದಲ್ಲಿ ಒಂಟಿಗಳಾಗಿ ಬಿಟ್ಟುಹೋಗಲು ಇಷ್ಟವಿಲ್ಲದಿದ್ದರೂ ವಿಧಿಯಿಲ್ಲದೆ ಬಿಟ್ಟು ಅಯೋಧ್ಯೆಗೆ ಹಿಂದಿರುಗಿದನು. ಸೀತೆಯ ದುಃಖಕ್ಕೆ ಕೊನೆಯಿಲ್ಲವೆಂಬಂತೆ ತೋರಿತು. ಇನ್ನು ತನ್ನ ಪತಿಯ ಪಾದಾರವಿಂದಗಳನ್ನು ದರ್ಶಿಸುವ ಭಾಗ್ಯವು ಆ ಜನ್ಮದಲ್ಲೇ ಲಭಿಸುವ ಮಾರ್ಗವು ತೋರಲಿಲ್ಲ. ತನ್ನ

ಪ್ರಾಣವನ್ನು ನೀಗಿಕೊಳ್ಳಬೇಕೆಂದು ಯತ್ನಮಾಡಿದಳು. ಅಷ್ಟರಲ್ಲಿ ತಾನು ಗರ್ಭಿಣಿಯಾಗಿದ್ದ ಸಂಗತಿಯು ಜ್ಞಾಪಕಕ್ಕೆ ಬಂದಿತು. ಆತ್ಮಹತ್ಯ ಭ್ರೂಣ ಹತ್ಯಾ ಪಾಪಗಳು ಪ್ರಾಪ್ತವಾಗುವುವಲ್ಲಾ ಏನು ಮಾಡಲೆಂದು ಯೋಚಿಸುತ್ತಾ ಕೆಲಹೊತ್ತು ಕಳೆಯುವಲ್ಲಿ ಆ ಕಾಡಿಗೆ ಸಮಿತ್ಪುಷ್ಪಾದಿಗಳಿಗಾಗಿ ಬಂದಿದ್ದ ವಾಲ್ಮೀಕಿಮಹರ್ಷಿಗಳು ಕಂಡು ಆಕೆಯ ವಿಷಯವೇನೆಂದು ವಿಚಾರಿಸಿ, ಸಂತಯಿಸಿ ತಮ್ಮೊಂದಿಗೆ ಆಶ್ರಮಕ್ಕೆ ಕರೆದೊಯ್ದರು. ಅಲ್ಲಿ ಆ ಸಾಧ್ವೀಮಣಿಯು ಮುನಿಪತ್ನಿಯರ ಬಗೆಬಗೆಯ ಉಪಚಾರಗಳಿಂದ ಕೆಲಮಟ್ಟಿಗೆ ತನ್ನ ದುಃಖವನ್ನು ಮರೆತಿದ್ದು ಕೆಲದಿನಗಳನ್ನು ಕಳೆದಳು. ಮುಂದೆ ಗರ್ಭಕ್ಕೆ ನವಮಾಸಗಳು ತುಂಬಿದನಂತರ ಒಂದು ಶುಭಮುಹೂರ್ತದಲ್ಲಿ ಅವಳಿ ಮಕ್ಕಳನ್ನು ಪ್ರಸವಿಸಿದಳು. ಮಹರ್ಷಿಗಳು ಅವರಿಗೆ ಕುಶ-ಲವ ಎಂಬ ನಾಮಗಳನ್ನಿಟ್ಟು, ತಮ್ಮ ತಪೋಮಹಿಮೆಯಿಂದ ವಿವಿಧ ಬಾಲ ದೊಡಿಗೆಗಳನ್ನು ಇಟ್ಟು ಸಿಂಗರಿಸಿ, ಸೀತೆಯ ಮನಸ್ಸಿಗೆ ಆನಂದವನ್ನುಂಟು ಮಾಡುವರು. ಆ ಸಾಧ್ವಿಯು ತನ್ನ ಮಕ್ಕಳ ಬಾಲ ಲೀಲೆಗಳನ್ನು ಕಂಡು ಸಂತೋಷಪಡುವಳಾದರೂ, ಸೂರ್ಯವಂಶವಿವರ್ಧಕರಾದ ತನ್ನ ಆ ಕುವರರ ಬಾಲಲೀಲೆಗಳನ್ನು ನೋಡಿ ಆನಂದಿಸುವ ಭಾಗ್ಯವು ತನ್ನ ಪತಿಯಾದ ಶ್ರೀ ರಾಮಚಂದ್ರನಿಗೆ ಲಭಿಸದಾಯಿತಲ್ಲಾ ಎಂದು ಪರಿತಪಿಸುತ್ತಾ, ಆ ವಾಲ್ಮೀಕ್ಯಾಶ್ರಮದಲ್ಲಿ ವಾಸಿಸುತ್ತಿದ್ದಳು.

# ಉ ಪ ಸ ಂ ಹಾ ರ

ಮುಂದೆ ದಿನದಿನಕ್ಕೆ ಬೆಳೆದು ಪ್ರಬುದ್ಧರಾದ ಆ ಸೀತಾಪುತ್ರರಿಂಗೆ ವಾಲ್ಮೀಕಿಮಹರ್ಷಿಗಳು ಕ್ಷತ್ರಿಯಧರ್ಮಾನುಸಾರವಾಗಿ ಉಪನಯನಮಾಡಿ ಸಕಲ ವೇದಶಾಸ್ತ್ರಾದಿ ಸಾರಸ್ವತವಿದ್ಯೆಯನ್ನೂ ಸಮಸ್ತ ಅಸ್ತ್ರಶಸ್ತ್ರಗಳ ಪ್ರಯೋಗೋಪಸಂಹಾರಾದಿ ಧನುರ್ವಿದ್ಯೆಯನ್ನೂ ಉಪದೇಶಿಸಿ ಸಮಸ್ತ ವಿಧಗಳಲ್ಲೂ ಪ್ರವೀಣರನ್ನಾಗಿ ಮಾಡಿದರು. ಆವೇಳೆಗೆ ಅಶ್ವಮೇಧಯಾಗ ಮಾಡಲು ಪ್ರಯತ್ನಿಸಿ ಭೂಪ್ರದಕ್ಷಿಣೆಗಾಗಿ ಬಿಟ್ಟ ರಾಘವನ ಯಜ್ಞಾಶ್ವವು ಭೂಮಿಯನ್ನೆಲ್ಲಾ ಸುತ್ತಿ ವಾಲ್ಮೀಕ್ಯಾಶ್ರಮಕ್ಕೂ ಬಂದಿತು. ಅದನ್ನು ಲವನು ಕಟ್ಟಿದನು. ಆ ಸಂಬಂಧದಲ್ಲಿ ಕುಶಲವರಿಗೂ ಭರತಶತ್ರುಘ್ನಾದಿಗಳ ಪ್ರಬಲರಾಘವಸೈನ್ಯಕ್ಕೂ ಭಯಂಕರ ಯುದ್ಧ ನಡೆದು ಸೀತಾಪುತ್ರರೇ ಜಯಶಾಲಿಗಳಾದರು. ಕೊನೆಗೆ ಯಜ್ಞದೀಕ್ಷಿತನಾಗಿದ್ದ ಶ್ರೀರಾಮನೇ ವಿಧಿಯಿಲ್ಲದೆ ಆ ಬಾಲಕರಮೇಲೆ ಯುದ್ಧಕ್ಕೆ ಬಂದು, ಅವರ ರೂಪು ಆಕಾರಗಳಿಂದ ತನ್ನ ಮಕ್ಕಳೇ ಎಂದು ತಿಳಿದರೂ ಕ್ಷತ್ರಿಯ ಧರ್ಮಾನುಸಾರ ಅವರೊಂದಿಗೆ ಯುದ್ಧಮಾಡಿ ಮೂರ್ಛಾಕ್ರಾಂತನಾದನು. ಅಷ್ಟರಲ್ಲಿ ವಾಲ್ಮೀಕರು ಬಂದು, ಶ್ರೀರಾಮನನ್ನು ಕಂಡು, ಅಪರಾಧವಾಯಿತೆಂದು ಕ್ಷಮೆ ಬೇಡಿಕೊಂಡು ಆ ಬಾಲಕರನ್ನು ಶ್ರೀರಾಮನ ಪಾದಗಳಲ್ಲಿ ಒಪ್ಪಿಸಿದರು. ತರುವಾಯ ಸೀತೆಯನ್ನು ಕರತಂದು ಆಕೆಯ ಪತಿಯ ಸನ್ನಿಧಿಯಲ್ಲಿ ಬಿಟ್ಟು ಸ್ವೀಕರಿಸಬೇಕೆಂದು ಪ್ರಾರ್ಥಿಸಿದರಾದರೂ, ಮುಂದೆ ತನ್ನ ಪತಿಪುತ್ರರೊಂದಿಗೆ ಕೂಡಿ ವಾಸಿಸಿಕೊಂಡಿರುವ ಲಭ್ಯವು ಸೀತೆಯ ಅದೃಷ್ಟದಲ್ಲಿರಲಿಲ್ಲ. ಆ ಶ್ರೀರಾಮಸನ್ನಿಧಿಯಲ್ಲಿ ಸೀತೆಯು ನಿಂತಿದ್ದಾಗಲೇ ಭೂಮಿಯು ಇಬ್ಭಾಗವಾಗಿ ಚಿರದುಃಖಿನಿಯಾದ ಆಕೆಯನ್ನು ಸ್ವೀಕಾರಮಾಡಿಬಿಟ್ಟಿತು. ಇಂತು ನಮ್ಮ ಕಥಾನಾಯಿಕೆಯು ಹೇಗೆ ಅಯೋನಿಜೆಯಾಗಿ ಭೂಮಿಯಿಂದಲೇ ಉದ್ಭವಿಸಿದ್ದಳೋ ಹಾಗೆಯೇ ಭೂಮಿಯಲ್ಲೇ ಐಕ್ಯವಾಗಿ ತನ್ನ ಅವತಾರ ಸಮಾಪ್ತಿ ಮಾಡಿಕೊಂಡಳು.

ಮಹಾತ್ಮರಾದ ವಾಲ್ಮೀಕಿಮಹರ್ಷಿಗಳು ಇಪ್ಪತ್ನಾಲ್ಕು ಸಹಸ್ರಗ್ರಂಥಗಳಲ್ಲಿ ರಚಿಸಿರುವ ಶ್ರೀ ರಾಮಾಯಣ ಗ್ರಂಥದಲ್ಲಿ ವಿಸ್ತಾರವಾಗಿ ವರ್ಣಿಸ

ಲ್ಪಟ್ಟ ಶ್ರೀ ಸೀತಾಚರಿತ್ರೆಯು ಇಷ್ಟು ಚಿಕ್ಕ ಪುಸ್ತಕದಲ್ಲಿ ಅಡಕವಾಗುವುದು ಬಹು ಶ್ರಮಸಾಧ್ಯವು. ಆದರೂ ಯಾವ ಜಗನ್ಮಾನ್ಯಳಾದ ಆ ಸಾಧ್ವೀಮಣಿಯ ನಾಮವು ಭಾರತದೇಶದ ಪ್ರತಿಮನೆಯ ಮಾತಾಗಿ ಪರಿಣಮಿಸಿದೆಯೋ ಆಕೆಯ ಈ ಪಾವನಚರಿತ್ರವೂ ಹಾಗೆಯೇ ಸಕಲಸಾಧ್ವೀಮಣಿಯರಿಗೂ ಉದಾಹರಣಸ್ವರೂಪವಾಗಿದ್ದು ಅವರ ಗುಣನಡತೆಗಳಲ್ಲೂ ಪತಿಭಕ್ತಿಯಲ್ಲೂ ಮಾರ್ಗದರ್ಶಕವಾಗಿರಲಿ. ಭಾರತ ಸ್ತ್ರೀಯರು ಸಂಪದಾಪದಗಳಲ್ಲೂ ಸೀತಾದೇವಿಯಂತೆ ತಮ್ಮ ಪತಿಗಳನ್ನು ಅನುಸರಿಸಿ ನಡೆದು-ತಮ್ಮ ವ್ರತಧರ್ಮರಕ್ಷಣೆಯಲ್ಲಿ ನಿರತರಾಗಿರಲಿ. ಅದ್ವಿತೀಯ ದಂಪತಿಗಳಾದ ಶ್ರೀ ಸೀತಾರಾಮರು ಆದ್ಯಂತ ಭಾರತದೇಶವನ್ನು ಕೃಪಾದೃಷ್ಟಿಯಿಂದ ಅವಲೋಕಿಸಿ ಅವರಿಗೆ ಸಮಸ್ತಸನ್ಮಂಗಳವನ್ನೂ ಅನುಗ್ರಹಿಸಿ ರಕ್ಷಿಸಲಿ.

ತ ಥಾ ಸ್ತು

